# ಶಿವ ಶರಣ ಶರಣೆಯರು

## ವಚನಗಳ ಓದು



ಸಿ.ಪಿ. ನಾಗರಾಜ

# ಶಿವ ಶರಣ ಶರಣೆಯರ
# ವಚನಗಳ ಓದು

ಸಿ.ಪಿ.ನಾಗರಾಜ

ನಾಗು ಸ್ಮಾರಕ ಪ್ರಕಾಶನ
75, 'ಎ' ಬ್ಲಾಕ್, 5ನೆಯ ಕ್ರಾಸ್, ಕ್ರಿಷ್ಣ ಗಾರ್ಡನ್
ಆರ್.ವಿ. ಕಾಲೇಜು ಪೋಸ್ಟ್, ಬೆಂಗಳೂರು–560059

**SHIVA SHARANA SHARANEYARU VACHANAGALA ODU**
By C.P. Nagaraja
Mobile: 9986347521

Published by
**Nagu Smaraka Prakashana**
75, 'A' Block, 5th Cross
Krishna Garden
R.V.College Post
Bengaluru-560059.

First Edition: 2020 Page: x+232 Price: Rs.180/-

Paper : 80 GSM NS Maplitho

Size : Demy 1/8

Copies : 1000



ಪುಟಗಳು : x+232 ಪ್ರತಿಗಳು : 1000 ಬೆಲೆ : ರೂ.180/-

ಮುಖಪುಟ ವಿನ್ಯಾಸ
**ಎಂ.ಎಲ್. ಸೋಮವರದ, ಮಂಡ್ಯ**
ಮೊ: 9743512174, 8618580924

ಪ್ರತಿಗಳು ದೊರೆಯುತ್ತವೆ

**ಮುನ್ನೋಟ ಪುಸ್ತಕ ಮಳಿಗೆ**
#67, ಸೌತ್ ಅವೆನ್ಯೂ ಕಾಂಪ್ಲೆಕ್ಸ್
ಡಿವಿಜಿ ರಸ್ತೆ, ನಾಗಸಂದ್ರ ಸರ್ಕಲ್ ಬಳಿ
ಬಸವನಗುಡಿ, ಬೆಂಗಳೂರು-560004
ದೂರವಾಣಿ : 080-26603000

**ಆರ್. ಸುಧೀಂದ್ರ ಕುಮಾರ್**
# 9, 20ನೇ ಮುಖ್ಯರಸ್ತೆ, 3ನೆಯ ಕ್ರಾಸ್
ವಿಜಯನಗರ 2ನೆಯ ಹಂತ
ಹಂಪಿ ಸರ್ಕಲ್ ಹತ್ತಿರ, ಮೈಸೂರು-570017
ಮೊಬೈಲ್: 8892626269

ಸ್ವಾನ್ ಪ್ರಿಂಟರ್ಸ್
svanprint@gmail.com
☎ 080-26742233

## ವಚನಕಾರರ ವಿಚಾರ ಕ್ರಾಂತಿ

ಯಾವ ಯಾವ ಜಡ್ಡುಗಟ್ಟಿದ ಕಾಲಗಳಲ್ಲಿ ಸೂಕ್ಷ್ಮ ಸಂವೇದನೆ ಉಳ್ಳವರೂ, ವಿಚಾರವಂತರೂ ಆದ ಕೆಲವೇ ಜನ ತಮ್ಮ ಸುತ್ತಣ ಪರಿಸ್ಥಿತಿಯನ್ನೂ ಮತ್ತು ಅದನ್ನು ನಿಯಂತ್ರಿಸಿಕೊಂಡು ಬಂದ ರೂಢಿಗತವಾದ ವ್ಯವಸ್ಥೆ ಹಾಗೂ ಸಂಪ್ರದಾಯಗಳನ್ನೂ ಪ್ರಶ್ನಿಸಲು ತೊಡಗುತ್ತಾರೋ, ಪ್ರತಿಭಟಿಸಲು ತೊಡಗುತ್ತಾರೋ ಅಂತಹ ಕಾಲಗಳನ್ನು ಸಂಕ್ರಮಣ ಕಾಲಗಳೆಂದು ಕರೆಯಬಹುದು. ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಇಂತಹ ಒಂದು ಸಂಕ್ರಮಣ ಕಾಲ.

ಹನ್ನೆರಡನೆಯ ಶತಮಾನದ ವಚನಕಾರರು ಅಥವಾ ಶಿವಶರಣ ಶರಣೆಯರು ಮೂಲತಃ ನಿಷ್ಠುರ ವಿಮರ್ಶಕರು, ಪರಂಪರೆಯನ್ನು ಕುರಿತು, ಧರ್ಮವನ್ನು ಕುರಿತು, ದೇವರನ್ನು ಕುರಿತು, ತಮ್ಮ ಸುತ್ತಣ ಸಾಮಾಜಿಕ ಪರಿಸರವನ್ನು ಕುರಿತು, ಎಲ್ಲಕ್ಕೂ ಮಿಗಿಲಾಗಿ ತಮ್ಮನ್ನೇ ಕುರಿತು ವಸ್ತುನಿಷ್ಠವಾಗಿ ವಿಮರ್ಶೆ ಮಾಡಿದವರು.

ಜಿ.ಎಸ್. ಶಿವರುದ್ರಪ್ಪ
'ವಚನಕಾರರ ವಿಚಾರ ಕ್ರಾಂತಿ'
ಅನುರಣನ (೧೯೭೮)

# ವಚನಗಳ ಓದಿಗೆ ನೆರವಾದ ಪುಸ್ತಕಗಳು

ಎಂ.ಎಂ.ಕಲಬುರ್ಗಿ
ಪ್ರಧಾನ ಸಂಪಾದಕರು

ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿಯ ಮಹಾ ಸಂಪುಟಗಳು

ಬಸವಯುಗದ ವಚನ ಮಹಾ ಸಂಪುಟ: ಒಂದು

ಬಸವೋತ್ತರಯುಗದ ವಚನ ಮಹಾ ಸಂಪುಟ: ಎರಡು

ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು.
ತೃತೀಯ ಆವೃತ್ತಿ(ಬೈಬಲ್ ಮುದ್ರಣ ಮಾದರಿ). ೨೦೧೬

# ನನ್ನ ನುಡಿ

ಶಿವಶರಣಶರಣೆಯರ ವಚನಗಳನ್ನು ಓದುತ್ತಿದ್ದಾಗ, ನನಗೆ ಮೆಚ್ಚುಗೆಯಾದ ಕೆಲವು ವಚನಗಳನ್ನು ಓದುಗರ ಗಮನಕ್ಕೆ ತರಬೇಕೆಂಬ ಆಸೆಯಾಯಿತು. ವಚನಗಳನ್ನು ಮೊದಲ ಬಾರಿ ಓದುವವರಿಗೆ ನೆರವಾಗಲೆಂಬ ಉದ್ದೇಶದಿಂದ ವಚನದಲ್ಲಿ ಜತೆಗೂಡಿರುವ ಪದಗಳನ್ನು ಬಿಡಿಸಿ ಬರೆದು, ಪದಗಳ ತಿರುಳನ್ನು ತಿಳಿಸಿ, ವಚನದ ಇಂಗಿತವನ್ನು ನಾಲ್ಕಾರು ಸಾಲುಗಳಲ್ಲಿ ವಿವರಿಸಿ ಗುರುಗಳಾದ ಕೆ.ವಿ.ನಾರಾಯಣ ಅವರಿಗೆ ತೋರಿಸಿದೆನು. ಅದನ್ನು ನೋಡಿದ ಅವರು "ಹೊಸ ತಲೆಮಾರಿನ ಓದುಗರಿಗೆ ಈ ರೀತಿಯ ಬರಹ ಉಪಯೋಗಕ್ಕೆ ಬರಬಹುದು ಇದನ್ನು ಮುಂದುವರಿಸಿ" ಎಂದು ಹೇಳಿ, ನನ್ನ ಬರವಣಿಗೆಗೆ ಮಾರ್ಗದರ್ಶನ ನೀಡಿದರು.

ಬರಹವನ್ನು ಆನ್ ಲೈನ್ ಮ್ಯಾಗಜೀನ್ 'ಹೊನಲು' ಮಿಂದಾಣಕ್ಕೆ (honalu.net) ಕಳುಹಿಸಿದೆನು. ಹೊನಲು ಮಿಂದಾಣದ ಸಂಪಾದಕ ವರ್ಗದವರು 27 ಕಂತುಗಳಲ್ಲಿ 58 ವಚನಗಳನ್ನು ಪ್ರಕಟಿಸಿದರು. ಮೂಡಿ ಬಂದ ಬರಹಕ್ಕೆ ಹೊನಲು ಮಿಂದಾಣದ ಓದುಗ ಬಳಗದವರು ಮೆಚ್ಚುಗೆಯನ್ನು ಸೂಚಿಸಿದರು. ಈ ರೀತಿ ಬರಹ ರೂಪುಗೊಳ್ಳಲು ಗುರುಗಳಾದ ಕೆ.ವಿ.ನಾರಾಯಣ ಅವರ ಮಾರ್ಗದರ್ಶನ, ಹೊನಲು ಮಿಂದಾಣದ ಸಂಪಾದಕ ವರ್ಗ ಮತ್ತು ಓದುಗರು ನೀಡಿದ ಉತ್ತೇಜನವೇ ಕಾರಣವಾಗಿದೆ.

ಬರಹವನ್ನು ಹೊನಲು ಮಿಂದಾಣಕ್ಕೆ ಕಳುಹಿಸುವುದಕ್ಕೆ ಮೊದಲು ಗೆಳೆಯರಾದ ಆರ್.ಲಕ್ಷ್ಮೀನಾರಾಯಣ, ಆರ್.ಚಲಪತಿ, ಬಿ.ಎ.ಅನ್ನದಾನೇಶ್, ಸುಬ್ರಹ್ಮಣ್ಯ ಸ್ವಾಮಿ ಮತ್ತು ಟಿ.ಮಂಜುನಾಥ ಅವರಿಗೆ ಮಿಂಚಂಚೆಯ ಮೂಲಕ ಕಳುಹಿಸುತ್ತಿದ್ದೆನು. ಅವರು ಪ್ರತಿಯೊಂದು ವಚನದ ಟಿಪ್ಪಣಿಯನ್ನು ಪರಿಶೀಲಿಸಿ, ಅದರ ಸರಿ ತಪ್ಪುಗಳನ್ನು ಗಮನಿಸಿ, ತಪ್ಪುಗಳನ್ನು ತಿದ್ದಿ ಸರಿಪಡಿಸಿಕೊಳ್ಳಲು ಸೂಚನೆಗಳನ್ನು ನೀಡುತ್ತಿದ್ದರು. ಈ ಬರಹದ ಕರಡು ಪ್ರತಿಯನ್ನು ನನ್ನ ಗುರುಹಿರಿಯರು ಮತ್ತು ಗೆಳೆಯರಿಗೆ ಅಂಚೆ ಮೂಲಕ ಕಳುಹಿಸಿದ್ದೆನು. ಅವರೆಲ್ಲರೂ ಓದಿ ನೋಡಿ ಉತ್ತೇಜನದ ನುಡಿಗಳನ್ನಾಡಿದ್ದಾರೆ. ರಾಷ್ಟ್ರಕವಿ

ಜಿ.ಎಸ್.ಶಿವರುದ್ರಪ್ಪನವರು 'ವಚನಕಾರರ ವಿಚಾರ ಕ್ರಾಂತಿ' ಎಂಬ ಬರಹದಲ್ಲಿ ಹೇಳಿರುವ ಕೆಲವು ನುಡಿಗಳನ್ನು ಮುನ್ನುಡಿಯ ರೂಪದಲ್ಲಿ ಬಳಸಿಕೊಂಡಿದ್ದೇನೆ.

ಎಂ.ಎಂ.ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟಗೊಂಡಿರುವ ವಚನ ಸಂಪುಟಗಳಿಂದ ವಚನಗಳನ್ನು ಆಯ್ದುಕೊಂಡಿದ್ದೇನೆ.

ಬಿ.ವ್ಹಿ. ಮಲ್ಲಾಪುರ (ಸಂ) : ಚೆನ್ನಬಸವಣ್ಣನವರ ವಚನ ಸಂಪುಟ
ಎಸ್. ವಿದ್ಯಾಶಂಕರ (ಸಂ) : ಸಿದ್ಧರಾಮೇಶ್ವರ ವಚನ ಸಂಪುಟ
ವೀರಣ್ಣ ರಾಜೂರ (ಸಂ) : ಶಿವಶರಣೆಯರ ವಚನ ಸಂಪುಟ
ಎಂ.ಎಂ.ಕಲಬುರ್ಗಿ (ಸಂ): ಸಂಕೀರ್ಣ ವಚನ ಸಂಪುಟ : ಒಂದು
ಎಸ್. ವಿದ್ಯಾಶಂಕರ (ಸಂ) : ಸಂಕೀರ್ಣ ವಚನ ಸಂಪುಟ : ಎರಡು
ಬಿ.ಆರ್. ಹಿರೇಮಠ (ಸಂ) : ಸಂಕೀರ್ಣ ವಚನ ಸಂಪುಟ : ಮೂರು
ಮತ್ತು
ವೈ.ಸಿ. ಭಾನುಮತಿ : ಸಂಕೀರ್ಣ ವಚನ ಸಂಪುಟ : ನಾಲ್ಕು
(ಪರಿಷ್ಕರಣ ಸಂಪಾದಕಿ)
ವೀರಣ್ಣ ರಾಜೂರ (ಸಂ) : ಸಂಕೀರ್ಣ ವಚನ ಸಂಪುಟ : ಐದು
ಎಸ್. ಶಿವಣ್ಣ (ಸಂ) : ಸಂಕೀರ್ಣ ವಚನ ಸಂಪುಟ : ಆರು
ಮತ್ತು
ಸಿದ್ಧರಾಮ ಶರಣರು ಬೆಲ್ದಾಳ (ಸಂ)
ವೀರಣ್ಣ ರಾಜೂರ (ಸಂ) : ಸಂಕೀರ್ಣ ವಚನ ಸಂಪುಟ: ಎಂಟು
ಸಂಕೀರ್ಣ ವಚನ ಸಂಪುಟ : ಒಂಬತ್ತು

ಕನ್ನಡ ಬರಹದಲ್ಲಿ ಬಳಸಬೇಕಾದ ಲಿಪಿಗಳ ಬಗ್ಗೆ ಡಿ.ಎನ್.ಶಂಕರ ಬಟ್ ಅವರ ವಿಚಾರಗಳು ನನಗೆ ಒಪ್ಪಿಗೆಯಾಗಿರುವುದರಿಂದ ವಚನಗಳಿಗೆ ಟಿಪ್ಪಣಿಯನ್ನು ಬರೆಯುವಾಗ ಕನ್ನಡದ ಮೂವತ್ತೊಂದು ಲಿಪಿಗಳನ್ನು ಮಾತ್ರ ಬಳಸಿದ್ದೇನೆ.

ಶಿವಶರಣಶರಣೆಯರ ವಚನಗಳ ಓದಿಗೆ ನೆರವಾದ ಮೇಲ್ಕಂಡ ಎಲ್ಲಾ ಗುರುಹಿರಿಯರಿಗೆ, ಸಂಪಾದಕ ವರ್ಗದವರಿಗೆ ಮತ್ತು ಗೆಳೆಯರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಸಿ.ಪಿ.ನಾಗರಾಜ

# ಪರಿವಿಡಿ

# ಅಂಗಸೋಂಕಿನ ಲಿಂಗತಂದೆ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ದೊರೆತಿರುವ ವಚನಗಳು | : | ಹನ್ನೊಂದು |
| ಅಂಕಿತನಾಮ | : | ಭೋಗಬಂಕೇಶ್ವರ ಲಿಂಗ |

೧. ಮರದೊಳಗಣ ಬೆಂಕಿ
ತನ್ನ ತಾನೇ ಉರಿಯಬಲ್ಲುದೆ
ಶಿಲೆಯೊಳಗಣ ದೀಪ್ತಿ
ಆ ಬೆಳಗ ತನ್ನ ತಾನೇ ಬೆಳಗಬಲ್ಲುದೆ
ಆ ತೆರನಂತೆ

ಕುಟಿಲನ ಭಕ್ತಿ ಕಿಸುಕುಳನ ವಿರಕ್ತಿ
ಮಥನಿಸಿಯಲ್ಲದೆ ದಿಟ ಹುಸಿಯ ಕಾಣಬಾರದು
ಸತ್ಯವನು ಅಸತ್ಯವನು ಪ್ರತ್ಯಕ್ಷ ಪ್ರಮಾಣಿಸಿದಲ್ಲದೆ
ನಿಶ್ಚಯವನರಿಯಬಾರದು

ಗುರುವಾದಡೂ ಲಿಂಗವಾದಡೂ ಜಂಗಮವಾದಡೂ
ಪರೀಕ್ಷಿಸಿ ಹಿಡಿಯದವನ ಭಕ್ತಿ ವಿರಕ್ತಿ
ತೂತಕುಂಭದಲ್ಲಿಯ ನೀರು
ಸೂತ್ರ ತಪ್ಪಿದ ಬೊಂಬೆ
ನಿಜನೇತ್ರ ತಪ್ಪಿದ ದೃಷ್ಟಿ

ಬೇರು ಮೇಲಾದ ಸಸಿಗೆ
ನೀರಿನಾರೈಕೆಯುಂಟೆ

ಇಂತು ಆವ ಕ್ರೀಯಲ್ಲಿಯೂ
ಭಾವಶುದ್ಧಾತ್ಮನಾಗಿ ಆರೈಕೆ ಬೇಕು
ಭೋಗಬಂಕೇಶ್ವರಲಿಂಗದ ಸಂಗದ ಶರಣನ ಸುಖ.

ವ್ಯಕ್ತಿಯು ಒಳ್ಳೆಯವನು ಇಲ್ಲವೇ ಕೆಟ್ಟವನು ಎಂಬುದನ್ನು ಅವನ ಮಯ್ಯಿನ ಅಂದಚೆಂದ, ಅವನು ತೊಟ್ಟಿರುವ ಉಡುಗೆ ತೊಡುಗೆ, ಅವನು ಆಡುವ

ಬಣ್ಣದ ಮಾತು, ಅವನು ಏರಿ ಕುಳಿತಿರುವ ಗದ್ದುಗೆ, ಅವನು ಹೊಂದಿರುವ ಸಂಪತ್ತಿನಿಂದ ತೀರ್ಮಾನಿಸದೆ, ಅವನು ಮಾಡುತ್ತಿರುವ ಒಳ್ಳೆಯ ಕೆಲಸವನ್ನು ಇಲ್ಲವೇ ಕೆಟ್ಟ ಕೆಲಸವನ್ನು ಒರೆಹಚ್ಚಿ ನೋಡುವುದರ ಮೂಲಕ ಅವನ ವ್ಯಕ್ತಿತ್ವದಲ್ಲಿನ ಒಳ್ಳೆಯತನ ಇಲ್ಲವೇ ಕೆಟ್ಟತನವನ್ನು ಗುರುತಿಸಬೇಕು ಎಂಬ ಎಚ್ಚರಿಕೆಯನ್ನು ಈ ವಚನದಲ್ಲಿ ನೀಡಲಾಗಿದೆ.

'ಒಳ್ಳೆಯ ಕೆಲಸ' ಎಂದರೆ ವ್ಯಕ್ತಿಯು ಮಾಡುವ ಕೆಲಸವು ಆತನಿಗೆ ಒಳಿತನ್ನು ಉಂಟುಮಾಡುವುದರ ಜತೆಜತೆಗೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವುದು.

'ಕೆಟ್ಟ ಕೆಲಸ' ಎಂದರೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನುಂಟು ಮಾಡುವುದು.

(ಮರ+ಒಳಗಣ; ಮರ=ಕೊಂಬೆರೆಂಬೆಗಳು ಅಗಲವಾಗಿ ಟಿಸಿಲೊಡೆದು ಹರಡಿಕೊಂಡು ಎತ್ತರವಾಗಿ ಬೆಳೆದು ನಿಂತಿರುವ ತರು/ಸಸ್ಯ; ಒಳಗಣ=ಒಳಗಿರುವ; ಬೆಂಕಿ=ಉರಿ/ಕಿಚ್ಚು/ಅಗ್ನಿ; ತನ್ನ=ತನ್ನಲ್ಲಿರುವ/ತನಗೆ ಸೇರಿದ; ತಾನ್+ಏ; ತಾನ್=ತನ್ನದೇ ಆದುದು/ಆಗಿರುವುದು; ತಾನೇ=ತಾನಾಗಿಯೇ; ಉರಿಯ+ಬಲ್ಲುದೆ; ಉರಿ=ಕಿಚ್ಚು/ಬೆಂಕಿ/ಅಗ್ನಿ; ಉರಿಯ=ಉರಿಯಲು/ಹತ್ತಿಕೊಂಡು ದಗದಗನೆ ಬೇಯಲು/ಜ್ವಲಿಸಲು; ಬಲ್ಲ=ತಿಳಿದ/ಅರಿತ/ಕಸುವುಳ್ಳ/ಶಕ್ತಿಯುಳ್ಳ; ಬಲ್ಲುದೆ= ತಿಳಿದಿದೆಯೇ/ಅರಿತಿದೆಯೇ/ ಕಸುವನ್ನು ಹೊಂದಿದೆಯೇ;

ಮರದೊಳಗಣ ಬೆಂಕಿ ತನ್ನ ತಾನೇ ಉರಿಯಬಲ್ಲುದೆ=ಬೆಂಕಿ ಬಿದ್ದಾಗ ಮಾತ್ರ ಹತ್ತಿಕೊಂಡು ಉರಿಯಬಲ್ಲ ಗುಣ ಮರದಲ್ಲಿದೆ. ಆದರೆ ಬೆಂಕಿಯ ಸಂಪರ್ಕವಿಲ್ಲದೆ ಮರ ತನಗೆ ತಾನೇ ಉರಿಯಲಾರದು;

ಶಿಲೆ+ಒಳಗಣ; ಶಿಲೆ=ಕಲ್ಲು/ಅರೆ/ಬಂಡೆ; ದೀಪ್ತಿ=ಕಾಂತಿ/ಕಿರಣ/ಪ್ರಕಾಶ/ ಬೆಳಕು/ರಶ್ಮಿ/ಕದಿರು/ಬೆಂಕಿಯ ಕಿಡಿ; ಆ=ಅಂತಹ/ರೀತಿಯ/ಬಗೆಯ; ಬೆಳಗು+ಅ; ಬೆಳಗು=ಕಾಂತಿ/ಹೊಳಪು/ಪ್ರಕಾಶ/ಕಿರಣ; ಬೆಳಗ=ಕಾಂತಿಯನ್ನು/ಹೊಳಪನ್ನು/ ಪ್ರಕಾಶವನ್ನು;

ಶಿಲೆಯೊಳಗಣ ದೀಪ್ತಿ ಆ ಬೆಳಗ ತನ್ನ ತಾನೇ ಬೆಳಗಬಲ್ಲುದೆ=ಒಂದು ಕಲ್ಲಿಗೆ ಮತ್ತೊಂದು ಕಲ್ಲು ಜೋರಾಗಿ ಬಡಿದಾಗ ಬೆಂಕಿಯ ಕಿಡಿ ಹೊರಹೊಮ್ಮುತ್ತದೆ. ಆದರೆ ಒಂದು ಕಲ್ಲು ತನಗೆ ತಾನಾಗಿಯೇ ಬೆಂಕಿಯ ಕಿಡಿಯನ್ನಾಗಲಿ ಇಲ್ಲವೇ ಬೆಳಕಿನ ಕಿರಣವನ್ನಾಗಲೀ ಹೊರಸೂಸಲಾರದು;

ತೆರ+ಅಂತೆ; ತೆರ=ರೀತಿ/ಕ್ರಮ/ಬಗೆ; ಅಂತೆ=ಹಾಗೆ/ಆ ರೀತಿಯಲ್ಲಿ/ ಆ ಬಗೆಯಲ್ಲಿ; ಕುಟಿಲ=ಮೋಸಗಾರ/ಕಪಟಿ/ವಂಚಕ/ಕುತಂತ್ರಿ ; ಭಕ್ತಿ=ದೇವರನ್ನು ಒಲಿಸಿಕೊಳ್ಳಲು/ದೇವರ ಕರುಣೆಗೆ ಪಾತ್ರರಾಗಲು ವ್ಯಕ್ತಿಯು ಮಾಡುವ ಬಹುಬಗೆಯ ಜಪ ತಪ ಪೂಜೆಯ ಆಚರಣೆಗಳು; ಕುಟಿಲನ ಭಕ್ತಿ=ನಯಗಾರಿಕೆಯ ನಡೆನುಡಿಗಳಿಂದ ಜನರನ್ನು ವಂಚಿಸಲೆಂದು ದೇವರಲ್ಲಿ ಒಲವು ಉಳ್ಳವನಂತೆ/ದೇವರನ್ನೇ ನಂಬಿ ನಡೆಯುವವನಂತೆ ಮಾಡುವ ನಾಟಕ/ಅಂತರಂಗದ ಮನದಲ್ಲಿ ಜನರನ್ನು ವಂಚಿಸುವ ಉದ್ದೇಶವನ್ನು ಹೊಂದಿ, ಬಹಿರಂಗದಲ್ಲಿ ಒಳ್ಳೆಯತನದ ಮಾತುಕತೆಗಳನ್ನು ಆಡುತ್ತಾ, ದೇವರಲ್ಲಿ ಅಪಾರವಾದ ಒಲವು ಉಳ್ಳವನಂತೆ ನಡೆದುಕೊಳ್ಳುವುದು;

ಕಿಸುಕುಳ=ನೀಚ/ಕೊಳಕ/ಕೆಟ್ಟ ನಡೆನುಡಿಯುಳ್ಳವನು; ವಿರಕ್ತಿ=ವ್ಯಕ್ತಿಯು ತನ್ನ ಮಯ್ ಮನದಲ್ಲಿ ತುಡಿಯುವಂತಹ ಒಳಮಿಡಿತಗಳಲ್ಲಿ ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಒಳ್ಳೆಯದನ್ನು ತನ್ನ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡು, ತನ್ನನ್ನು ಒಳಗೊಂಡಂತೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿ; ಕಿಸುಕುಳನ ವಿರಕ್ತಿ=ಬಹಿರಂಗದಲ್ಲಿ ಒಳ್ಳೆಯ ವ್ಯಕ್ತಿಯಂತೆ ತೋರಿಸಿಕೊಳ್ಳುತ್ತಾ, ಅಂತರಂಗದ ಮನದಲ್ಲಿ ಕೆಟ್ಟ ಒಳಮಿಡಿತಗಳಿಂದ ಕೂಡಿ ಸಹಮಾನವರಿಗೆ ಮತ್ತು ಸಮಾಜಕ್ಕೆ ಹಾನಿಯನ್ನುಂಟುವಂತಹ ಉದ್ದೇಶವನ್ನು ಹೊಂದಿರುವುದು;

ಮಥನಿಸಿ+ಅಲ್ಲದೆ; ಮಥನ=ಮಸೆ/ಉಜ್ಜು/ತಾಕು/ಕಡೆಯುವಿಕೆ; ಮಥನಿಸು= ಕಡೆಯುವುದು/ಉಜ್ಜುವುದು/ನಿರಂತರವಾಗಿ ಅತ್ತಿತ್ತ ಮಸೆಯುತ್ತಿರುವುದು; ಅಲ್ಲದೆ=ಹಾಗೆ ಮಾಡದೆ/ಆ ರೀತಿ ಮಾಡದಿದ್ದರೆ; ದಿಟ=ನಿಜ/ಸತ್ಯ/ವಾಸ್ತವ; ಹುಸಿ=ಸುಳ್ಳು/ಸಟೆ/ನಿಜವಲ್ಲದ್ದು; ಕಾಣ+ಬಾರದು; ಕಾಣ್+ಅ; ಕಾಣ್=ನೋಡು ತಿಳಿ/ಅರಿ; ಕಾಣ=ಕಾಣಲು/ತಿಳಿಯಲು/ಅರಿಯಲು; ಬಾರದು=ಆಗುವುದಿಲ್ಲ;

ಆ ತೆರನಂತೆ ಕುಟಿಲನ ಭಕ್ತಿ ಕಿಸುಕುಳನ ವಿರಕ್ತಿ ಮಥನಿಸಿಯಲ್ಲದೆ ದಿಟ ಹುಸಿಯ ಕಾಣಬಾರದು=ಯಾವ ರೀತಿ ಮರಕ್ಕೆ ಬೆಂಕಿ ಬಿದ್ದಾಗ ಹತ್ತಿಕೊಂಡು ಉರಿಯುತ್ತದೆಯೋ, ಒಂದು ಕಲ್ಲಿಗೆ ಮತ್ತೊಂದು ಕಲ್ಲು ಜೋರಾಗಿ ಬಡಿದಾಗ ಕಿಡಿಯು ಹೊರಹೊಮ್ಮುತ್ತದೆಯೋ ಅಂತೆಯೇ ಕುಟಿಲನಿಗೆ/ಕಿಸುಕುಳನಿಗೆ ಹೊಣೆಗಾರಿಕೆಯುಳ್ಳ ಹುದ್ದೆ ದೊರೆತಾಗ, ಅವನು ಅದನ್ನು ದುರುಪಯೋಗ ಪಡಿಸಿಕೊಂಡು ಸಹಮಾನವರಿಗೆ ಮತ್ತು ಸಮಾಜಕ್ಕೆ ಮಾಡುವ ವಂಚನೆಯಿಂದ ಮತ್ತು ಕ್ರೂರತನದ ನಡೆನುಡಿಗಳಿಂದ ಅವನ ನಿಜವಾದ ವ್ಯಕ್ತಿತ್ವ ಏನೆಂಬುದು ತಿಳಿದುಬರುತ್ತದೆ;

ಸತ್ಯ=ನಿಜ/ದಿಟ/ವಾಸ್ತವ; ಅಸತ್ಯ=ನಿಜವಲ್ಲದ್ದು/ದಿಟವಲ್ಲದ್ದು/ವಾಸ್ತವವಲ್ಲದ್ದು; ಪ್ರತ್ಯಕ್ಷ=ಕಣ್ಣಿಗೆ ಕಾಣುವುದು/ಗೋಚರಿಸುವುದು/ತಿಳಿದುಬರುವುದು/ನೇರವಾಗಿ ನೋಡಿ ಅರಿಯುವುದು; ಪ್ರಮಾಣಿಸಿದ+ಅಲ್ಲದೆ; ಪ್ರಮಾಣ=ಯಾವುದೇ ಸಂಗತಿಯನ್ನು ಕಾರ್ಯ ಕಾರಣದ ಹಿನ್ನೆಲೆಯಲ್ಲಿ ಒರೆಹಚ್ಚಿ ನೋಡಿ ತಿಳಿಯುವುದು/ಯಾವಾಗ–ಎಲ್ಲಿ–ಯಾರಿಂದ–ಯಾವುದರಿಂದ–ಏಕೆ–ಹೇಗೆ ಉಂಟಾಯಿತು ಎಂಬುದೆಲ್ಲವನ್ನೂ ವಾಸ್ತವದ ನೆಲೆಯಲ್ಲಿ ವಿವೇಚಿಸಿ ತಿಳಿಯುವುದು;

ನಿಶ್ಚಯ+ಅನ್+ಅರಿಯ+ಬಾರದು; ನಿಶ್ಚಯ=ಸರಿಯಾದ ನಿಲುವು/ಅಚಲವಾದ ತೀರ್ಮಾನ; ಅನ್=ಅನ್ನು; ಅರಿ=ತಿಳಿ/ಕಲಿ/ಗೊತ್ತುಪಡಿಸಿಕೊಳ್ಳುವುದು; ಅರಿಯ=ತಿಳಿಯಲು/ಗೊತ್ತುಪಡಿಸಿಕೊಳ್ಳಲು;

ಸತ್ಯವನು ಅಸತ್ಯವನು ಪ್ರತ್ಯಕ್ಷ ಪ್ರಮಾಣಿಸಿದಲ್ಲದೆ ನಿಶ್ಚಯವನರಿಯಬಾರದು=ಯಾವುದು ಸರಿ–ಯಾವುದು ತಪ್ಪು; ಯಾವುದು ದಿಟ–ಯಾವುದು ಸಟೆ ಎಂಬುದನ್ನು ನಾವೇ ಒರೆಹಚ್ಚಿ ನೋಡಿ ತಿಳಿದುಕೊಂಡು, ತೀರ್ಮಾನವನ್ನು ಕಯ್ಗೊಳ್ಳಬೇಕು. ಇತರರ ಹೇಳಿಕೆಗಳನ್ನು ಕುರುಡಾಗಿ ನಂಬಬಾರದು ಮತ್ತು ಇತರರ ನಂಬಿಕೆಗಳಿಗೆ ಮರುಳಾಗಬಾರದು;

ಗುರು+ಆದಡೂ; ಗುರು=ವಿದ್ಯೆಯನ್ನು ಹೇಳಿಕೊಡುವವನು/ಗುಡ್ಡನಲ್ಲಿ ಅರಿವನ್ನು ಮೂಡಿಸಿ ಒಳ್ಳೆಯ ವ್ಯಕ್ತಿತ್ವವನ್ನು ರೂಪಿಸುವವನು/ಓಜ; ಆದಡೂ=ಆದರೂ;

ಲಿಂಗ+ಆದಡೂ; ಲಿಂಗ=ಈಶ್ವರ/ಶಿವ/ದೇವರು/ಒಳ್ಳೆಯ ನಡೆನುಡಿಗಳಿಂದ ಬಾಳುವುದನ್ನು ಲಿಂಗದ ಸಂಕೇತವಾಗಿ ಶಿವಶರಣಶರಣೆಯರು ಪರಿಗಣಿಸಿದ್ದರು; ಜಂಗಮ+ಆದಡೂ; ಜಂಗಮ=ವ್ಯಕ್ತಿಗೆ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳನ್ನು ಜನರಿಗೆ ತಿಳಿಯಹೇಳುತ್ತಾ, ಒಂದೆಡೆಯಿಂದ ಮತ್ತೊಂದೆಡೆಗೆ ನಿರಂತರವಾಗಿ ಸಂಚರಿಸುತ್ತಿರುವ ಶಿವಶರಣ;

ಪರೀಕ್ಷೆ=ಯಾವುದು ಸರಿ – ಯಾವುದು ತಪ್ಪು ಎಂಬುದನ್ನು ಒರೆಹಚ್ಚಿ ನೋಡುವುದು/ಅರಿಯುವುದು/ಗೊತ್ತುಮಾಡುವುದು; ಹಿಡಿಯದ+ಅವನ; ಹಿಡಿ=ಹೊಂದು/ತಾಳು/ಪಡೆ/ತಳೆ/ಗ್ರಹಿಸು; ಅವನ=ಅಂತಹ ವ್ಯಕ್ತಿಯ; ಹಿಡಿಯದವನ=ಗ್ರಹಿಸಿಕೊಳ್ಳದವನ/ತಿಳಿಯದಿರುವವನ/ಹೊಂದದಿರುವವನ; ತೂತ+ಕುಂಭ+ಅಲ್ಲಿಯ; ತೂತು+ಅ; ತೂತು=ಕಂಡಿ/ಬಿಲ/ಬಿರುಕು; ತೂತ=ತೂತಾಗಿರುವ/ತೂತು ಬಿದ್ದಿರುವ/ಕಂಡಿ ಬಿಟ್ಟಿರುವ/ಬಿರುಕು ಬಿಟ್ಟಿರುವ; ಕುಂಭ=ಕೊಡ/ಕಳಸ;

ತೂತಕುಂಭದಲ್ಲಿಯ ನೀರು=ತೂತಾಗಿರುವ/ಬಿರುಕು ಬಿಟ್ಟಿರುವ ಕೊಡದಲ್ಲಿ ತುಂಬಿಸಿ ಇಟ್ಟಿರುವ ನೀರು ನಿರಂತರವಾಗಿ ಸೋರಿಹೋಗಿ/ತೊಟ್ಟಿಕ್ಕಿ ಕೆಲವೇ ಗಳಿಗೆಗಳಲ್ಲಿ ಕೊಡ ಬರಿದಾಗುತ್ತದೆ;

ಸೂತ್ರ=ಗಾಳಿಪಟವನ್ನು ಮುಗಿಲಿನಲ್ಲಿ ಹಾರಾಡಿಸಲು ಇಲ್ಲವೇ ಬೊಂಬೆಗಳನ್ನು ರಂಗದ ಮೇಲೆ ಕುಣಿಸಲು ಕಟ್ಟುವ ದಾರ/ನೂಲು; ತಪ್ಪು=ಹಾಳಾಗು/ಹದಗೆಡು; ತಪ್ಪಿದ=ಕಿತ್ತುಹೋದ/ತುಂಡಾದ;

ಸೂತ್ರ ತಪ್ಪಿದ ಬೊಂಬೆ=ಸೂತ್ರ ಕಿತ್ತುಹೋದ ಬೊಂಬೆಯು ಯಾವುದೇ ಬಗೆಯ ಚಲನವಲನಗಳ ಹಿಡಿತಕ್ಕೆ ಸಿಲುಕದೆ ಒಂದೆಡೆ ಬಿದ್ದಿರುತ್ತದೆ; ನಿಜ=ತನ್ನ/ವ್ಯಕ್ತಿಯ; ನೇತ್ರ=ಕಣ್ಣು/ನಯನ; ದೃಷ್ಟಿ=ನೋಟ/ನೋಡುವಿಕೆ/ಕಣ್ಣಿನ ನೋಟ;

ನಿಜನೇತ್ರ ತಪ್ಪಿದ ದೃಷ್ಟಿ=ವ್ಯಕ್ತಿಯ ಕಣ್ಣಿನ ಗುಡ್ಡೆಗಳು ಹಿಂಗಿಹೋಗಿ, ನೋಟದ ಕಸುವನ್ನು ಕಳೆದುಕೊಂಡು ಕುರುಡಾಗುವುದು;

ಗುರುವಾದಡೂ ಲಿಂಗವಾದಡೂ ಜಂಗಮವಾದಡೂ ಪರೀಕ್ಷಿಸಿ ಹಿಡಿಯದವನ ಭಕ್ತಿ ವಿರಕ್ತಿ ತೂತಕುಂಭದಲ್ಲಿಯ ನೀರು ಸೂತ್ರ ತಪ್ಪಿದ ಬೊಂಬೆ ನಿಜನೇತ್ರ ತಪ್ಪಿದ ದೃಷ್ಟಿ=ಕುಟುಂಬದಲ್ಲಿ, ದುಡಿಮೆಯ ರಂಗದಲ್ಲಿ ಮತ್ತು ಸಾರ್ವಜನಿಕ ನೆಲೆಗಳಲ್ಲಿ ಕಂಡು ಬರುವ ಗುರು ಹಿರಿಯರನ್ನು ವ್ಯಕ್ತಿಯು ಒಪ್ಪಿಕೊಂಡು, ಅವರ ನಡೆನುಡಿಗಳನ್ನು ಅನುಸರಿಸಿ ನಡೆಯುವ ಮುನ್ನ, ಗುರು ಹಿರಿಯರೆನಿಸಿಕೊಂಡವರ ವ್ಯಕ್ತಿತ್ವದಲ್ಲಿ ಒಳ್ಳೆಯತನವಿದೆಯೇ; ಅವರ ನಡೆನುಡಿಗಳು ಸಹಮಾನವರ ಮತ್ತು ಸಮಾಜದ ಒಳಿತಿಗೆ ನೆರವಾಗುವಂತೆ ಇವೆಯೇ ಎಂಬುದನ್ನು ಒರೆಹಚ್ಚಿ ನೋಡಿ ತಿಳಿದುಕೊಳ್ಳಬೇಕು. ಹಾಗೆ ತಿಳಿದುಕೊಳ್ಳದೆ ಅನುಸರಿಸಿದರೆ ತೂತಾದ ಕೊಡದಲ್ಲಿ ತುಂಬಿಸಿ ಇಟ್ಟಿದ್ದ ನೀರು, ಸೂತ್ರದ ಎಳೆಗಳಿಲ್ಲದ ಬೊಂಬೆ, ನೋಟ ಹಿಂಗಿದ ಕಣ್ಣುಗಳು ಇದ್ದರೂ, ಅವು ಯಾವುದೇ ರೀತಿಯಲ್ಲಿ ಉಪಯೋಗಕ್ಕೆ ಬಾರದಂತಾಗುತ್ತವೆಯೋ ಅಂತೆಯೇ ಒಳ್ಳೆಯ ನಡೆನುಡಿಗಳಿಲ್ಲದ ಗುರು ಹಿರಿಯರ ಒಡನಾಟದಿಂದ ವ್ಯಕ್ತಿಯ ಜೀವನಕ್ಕೆ ಒಳಿತಾಗುವುದಿಲ್ಲ ಎಂಬ ತಿರುಳನ್ನು ಈ ಮೂರು ರೂಪಕಗಳು ಸೂಚಿಸುತ್ತಿವೆ.

ಬೇರು='ಭೂಮಿ'ಯೊಳಗಿರುವ ಮರಗಿಡಗಳ 'ಭಾಗ'/ ಮರಗಿಡಗಳ ತಾಯಿಬೇರು ಮಣ್ಣಿನಲ್ಲಿ ಹೂತಿರುತ್ತದೆ; ಮೇಲ್+ಆದ; ಮೇಲೆ=ಹೊರಗಡೆ/ 'ಹೊರಭಾಗ'; ಆದ=ಆಗಿರುವ; ಸಸಿ=ಎಳೆಯ ಗಿಡ/ಪಯಿರು; ಬೇರು ಮೇಲಾದ ಸಸಿ=ನೆಲದ ಒಳಗಡೆ/ಆಳದಲ್ಲಿ ಇರಬೇಕಾಗಿದ್ದ ಬೇರು ಕಿತ್ತು ಬಂದು ನೆಲದ ಮೇಲೆ ಬುಡಮೇಲಾಗಿ ಬಿದ್ದಿರುವ ಪಯಿರು/ಸಸಿ/ಎಳೆಯ ಗಿಡ; ನೀರಿನ+ಆರೈಕೆ+ಉಂಟೆ; ಆರೈಕೆ=ಎಚ್ಚರದಿಂದ ಜೋಪಾನವಾಗಿ ಕಾಪಾಡುವಿಕೆ/ಉಪಚರಿಸುವಿಕೆ; ಉಂಟು+ಎ; ಉಂಟು=ಇದೆ;

ಬೇರು ಮೇಲಾದ ಸಸಿಗೆ ನೀರಿನಾರೈಕೆಯುಂಟೆ=ಬುಡಮೇಲಾಗಿ 'ಭೂಮಿ'ಯ ಮೇಲೆ ಬಿದ್ದಿರುವ ಪಯಿರಿಗೆ ನೀರನ್ನು ಎರೆಯುವುದರಿಂದ ಯಾವುದೇ ಪ್ರಯೋಜನವಿಲ್ಲ. ಏಕೆಂದರೆ ನೀರನ್ನು ಹೀರಿಕೊಂಡು ಪಯಿರನ ಬೆಳವಣಿಗೆಗೆ ಕಾರಣವಾಗುವ ತಾಯಿಬೇರು ಈಗ ತಾನಿರಬೇಕಾದ ಎಡೆಯಲ್ಲಿ ಇಲ್ಲ;

ಇಂತು=ಈ ರೀತಿಯಲ್ಲಿ/ಈ ಬಗೆಯಲ್ಲಿ; ಆವ=ಯಾವುದು/ಎಂತಹುದು/ಎಲ್ಲಿಯದು; ಕ್ರೀ+ಅಲ್ಲಿಯೂ; ಕ್ರೀ=ಕ್ರಿಯೆ/ಕೆಲಸ/ಕಾರ್ಯ/ಎಸಕ; ಕ್ರೀಯಲ್ಲಿಯೂ=ಕೆಲಸದಲ್ಲಿಯೂ; ಭಾವ+ಶುದ್ಧ+ಆತ್ಮನ್+ಆಗಿ; ಭಾವ=ಮನದಲ್ಲಿ ತುಡಿಯುವ ಒಳಮಿಡಿತ/ಆಲೋಚನೆ/ಚಿಂತನೆ/ಕಲ್ಪನೆ; ಶುದ್ಧ=ಶುಚಿಯಾದ/ಚೊಕ್ಕಟವಾದ/ಕೊಳೆಯಿಲ್ಲದ; ಆತ್ಮನ್=ಮನಸ್ಸು/ಚಿತ್ತ/ಜೀವ/ಚೇತನ; ಭಾವಶುದ್ಧಾತ್ಮ=ಮನದಲ್ಲಿ ತುಡಿಯುವ ನೂರೆಂಟು ಬಗೆಯ ಒಳಮಿಡಿತಗಳಲ್ಲಿ ಕೆಟ್ಟ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು, ಒಳ್ಳೆಯ ಕಲ್ಪನೆ/ಚಿಂತನೆ/ಆಲೋಚನೆಗಳಿಂದ ತನ್ನ ನಡೆನುಡಿಗಳನ್ನು ರೂಪಿಸಿಕೊಂಡಿರುವವನು; ಬೇಕು=ಅಗತ್ಯವಾಗಿರುವುದು/ಅವಶ್ಯವಿರುವುದು;

ಬೇರು ಮೇಲಾದ ಸಸಿಗೆ ನೀರಿನಾರೈಕೆಯುಂಟೆ ಇಂತು ಆವ ಕ್ರೀಯಲ್ಲಿಯೂ ಭಾವಶುದ್ಧಾತ್ಮನಾಗಿ ಆರೈಕೆ ಬೇಕು=ಬುಡಮೇಲಾದ ಸಸಿಗೆ ನೀರನ್ನು ಎರೆಯುವದರಿಂದ ಯಾವುದೇ ಪ್ರಯೋಜನವಿಲ್ಲ. ಅದೇ ರೀತಿಯಲ್ಲಿ ವ್ಯಕ್ತಿಯು ತಾನು ಮಾಡುವ ಯಾವುದೇ ಬಗೆಯ ಕೆಲಸದಲ್ಲಿ ಒಳ್ಳೆಯ ಉದ್ದೇಶವನ್ನು ಹೊಂದಿರದಿದ್ದರೆ, ಅಂತಹ ಕೆಲಸದಿಂದ ಸಹಮಾನವರಿಗಾಗಲಿ ಮತ್ತು ಸಮಾಜಕ್ಕಾಗಲಿ ಯಾವೊಂದು ಪ್ರಯೋಜನವೂ ಇಲ್ಲ. ಆದುದರಿಂದ ವ್ಯಕ್ತಿಯು ತಾನು ಮಾಡುವ ಪ್ರತಿಯೊಂದು ಕೆಲಸದಲ್ಲಿಯೂ 'ಶುದ್ಧಾತ್ಮನಾಗಿರಬೇಕು' ಎಂದರೆ ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕೆಂಬ ಒಳ್ಳೆಯ ಮನಸ್ಸನ್ನು ಹೊಂದಿರಬೇಕು ಎಂಬ ತಿರುಳಿನಲ್ಲಿ ಈ ರೂಪಕದ ನುಡಿಗಳು ಬಳಕೆಯಾಗಿವೆ;

ಭೋಗಬಂಕೇಶ್ವರಲಿಂಗ=ಈಶ್ವರ/ಶಿವ/ದೇವರು/ಅಂಗಸೋಂಕಿನ ಲಿಂಗತಂದೆಯ ವಚನಗಳ ಅಂಕಿತನಾಮ; ಸಂಗ=ಒಡನಾಟ/ಸಹವಾಸ/ಗೆಳೆತನ; ಶರಣ=ಶಿವನನ್ನು ಒಲಿದವನು; ಸುಖ=ಆನಂದ/ನಲಿವು; ಭೋಗಬಂಕೇಶ್ವರಲಿಂಗ ಸಂಗದ ಶರಣನ ಸುಖ=ಶಿವಶರಣನ ಪಾಲಿಗೆ ಜೀವನದಲ್ಲಿ ಒಲವು, ನಲಿವು, ಆನಂದ ಎಂಬುವು ಒಳಿತಿನ ನಡೆನುಡಿಗಳಿಂದ ದೊರೆಯುತ್ತವೆ.



# ಅಂಬಿಗರ ಚೌಡಯ್ಯ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಊರು | : | ಚೌಡದಾನಪುರ<br>ರಾಣಿಬೆನ್ನೂರು ತಾಲ್ಲೂಕು<br>ಧಾರವಾಡ ಜಿಲ್ಲೆ. |
| ಕಸುಬು | : | ನದಿಯಲ್ಲಿ ದೋಣಿಯನ್ನು ನಡೆಸುವುದು. |
| ದೊರೆತಿರುವ ವಚನಗಳು | : | ೨೭೮ |
| ವಚನಗಳ ಅಂಕಿತನಾಮ | : | ಅಂಬಿಗ ಚೌಡಯ್ಯ/ಅಂಬಿಗರ ಚೌಡಯ್ಯ |

೨. ಅರಿವಿನ ಪಥವನರಿಯದಿರ್ದಡೆ
ಮುಂದೆ ಹೆರರಿಗೆ ದೀಕ್ಷೆಯ ಮಾಡಲೇಕೆ
ತೊರೆಯಲದ್ದವನನೀಸಲರಿಯದವ
ತೆಗೆಯ ಹೋದಂತಾಯಿತ್ತೆಂದನಂಬಿಗ ಚೌಡಯ್ಯ.

**ಇತರರಿಗೆ ತಿಳುವಳಿಕೆಯನ್ನು ಹೇಳುವ ಮತ್ತು ಇತರರ ನಡೆನುಡಿಗಳನ್ನು ಒಳ್ಳೆಯ ರೀತಿಯಲ್ಲಿ ರೂಪಿಸುವ ಹೊಣೆಯನ್ನು ಹೊತ್ತಿರುವ ವ್ಯಕ್ತಿಯು, ಮೊದಲು ತಾನು ಒಳ್ಳೆಯ ಅರಿವನ್ನು ಪಡೆದುಕೊಂಡು, ತನ್ನ ಬದುಕಿನಲ್ಲಿ ಒಳ್ಳೆಯ ನಡೆನುಡಿಗಳನ್ನು ಹೊಂದಿರಬೇಕು. ಒಳ್ಳೆಯ ವ್ಯಕ್ತಿತ್ವವನ್ನು ತಾನು ಹೊಂದಿರದೆ, ಇತರರಿಗೆ ತಿಳಿಯ ಹೇಳಲು ಹೋದರೆ, ಅದು ದುರಂತಕ್ಕೆ ಕಾರಣವಾಗುತ್ತದೆಯೆಂಬ ಎಚ್ಚರಿಕೆಯನ್ನು ಈ ವಚನದಲ್ಲಿ ನೀಡಲಾಗಿದೆ.**

(ಅರಿವು=ತಿಳುವಳಿಕೆ/ವಿವೇಕ; ಪಥ+ಅನ್+ಅರಿಯದೆ+ಇರ್ದಡೆ; ಪಥ=ದಾರಿ/ಹಾದಿ/ಮಾರ್ಗ; ಅನ್=ಅನ್ನು; ಅರಿ=ತಿಳಿ/ಕಲಿ; ಅರಿಯದೆ=ಕಲಿತುಕೊಳ್ಳದೆ/ತಿಳಿದುಕೊಳ್ಳದೆ; ಇರ್ದಡೆ=ಇದ್ದರೆ; ಅರಿವಿನ ಪಥ=ಜೀವನದಲ್ಲಿ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಎಂಬ ತಿಳುವಳಿಕೆಯನ್ನು ಪಡೆದುಕೊಂಡು, ಕೆಟ್ಟದ್ದನ್ನು ತೊರೆದು, ಒಳ್ಳೆಯದನ್ನು ಅನುಸರಿಸಿ, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ ನಡೆನುಡಿಗಳು; ಅರಿಯದಿರ್ದಡೆ=ತಿಳಿಯದಿದ್ದರೆ/ಕಲಿಯದಿದ್ದರೆ/ಗೊತ್ತುಮಾಡಿಕೊಳ್ಳದಿದ್ದರೆ;

ಮುಂದೆ=ಅನಂತರ/ತರುವಾಯ/ಆಮೇಲೆ; ಹೆರರು= ಬೇರೆಯವರು/ಇತರರು/ಅನ್ಯರು; ಹೆರರಿಗೆ=ಬೇರೆಯವರಿಗೆ/ಇತರರಿಗೆ; ದೀಕ್ಷೆ=ವ್ರತ/ನಿಯಮ/ಉಪದೇಶವನ್ನು ನೀಡುವುದು/ಅರಿವನ್ನು ತಿಳಿಯಹೇಳುವುದು/ಒಳ್ಳೆಯ ವ್ಯಕ್ತಿತ್ವ ರೂಪುಗೊಳ್ಳಲು ಬೇಕಾದ ನಡೆನುಡಿಗಳನ್ನು ಕಲಿಸುವುದು; ಮಾಡಲ್+ಏಕೆ; ಏಕೆ=ಏತಕ್ಕಾಗಿ/ಯಾವುದಕ್ಕಾಗಿ;

ಮುಂದೆ ಹೆರರಿಗೆ ದೀಕ್ಷೆಯ ಮಾಡಲೇಕೆ=ತನಗೆ ತಿಳಿಯದ ವಿಚಾರಗಳನ್ನು ಇತರರಿಗೆ ಹೇಳುವುದರಿಂದಾಗಲಿ ಇಲ್ಲವೇ ತಾನು ಮಾಡಲಾಗದ ಒಳ್ಳೆಯ ಕೆಲಸಗಳನ್ನು ಇತರರಿಗೆ ಮಾಡುವಂತೆ ಹೇಳುವುದರಿಂದಾಗಲಿ ಯಾವುದೇ ಪ್ರಯೋಜನವಿಲ್ಲ;

ತೊರೆ+ಅಲ್+ಅದ್ದ+ಅವನ್+ಅನ್+ಈಸು+ಅಲ್+ಅರಿಯದವ; ತೊರೆ=ನದಿ/ಹೊಳೆ; ಅದ್ದ=ಮುಳುಗಿದ/ನೀರಿನಲ್ಲಿ ಮುಳುಗುತ್ತಿರುವ; ಅವನನ್=ಆ ವ್ಯಕ್ತಿಯನ್ನು; ತೊರೆಯಲದ್ದವನನ್=ನದಿಯ ನೀರಿನಲ್ಲಿ ಮುಳುಗೇಳುತ್ತಾ, ಸಾವು ಬದುಕಿನ ನಡುವೆ ತುಯ್ದಾಡುತ್ತಿರುವವನನ್ನು/ಹೋರಾಡುತ್ತಿರುವವನನ್ನು; ಈಸು=ಈಜು/ನೀರಿನಲ್ಲಿ ಕಯ್ ಕಾಲುಗಳನ್ನು ಆಡಿಸುತ್ತ, ನೀರಿನ ಅಲೆಗಳನ್ನು ಸೀಳಿಕೊಂಡು, ನೀರಿನಲ್ಲಿ ಮುಳುಗಿಹೋಗದೆ, ತೇಲುತ್ತಾ ಮುಂದೆ ಮುಂದೆ ಸಾಗುವ ಕಲೆ/ನಿಪುಣತೆ/ಕುಶಲತೆ;

ಈಸಲು=ಈಜನ್ನು ಹೊಡೆಯಲು; ಅರಿಯದವ=ತಿಳಿಯದವನು; ಈಸಲರಿಯದವ=ಈಜನ್ನು ಕಲಿಯದವನು/ಈಜಿನಲ್ಲಿ ತರಬೇತಿಯನ್ನು ಪಡೆಯದವನು/ಈಜು ಬಾರದವನು; ತೆಗೆ=ಮೇಲಕ್ಕೆ ಎತ್ತು/ಈಚೆಗೆ ತರು ಹೊರಕ್ಕೆ ಎಳೆ; ತೆಗೆಯ=ತೆಗೆಯಲು; ಹೋದ+ಅಂತೆ+ಆಯಿತ್ತು+ಎಂದನ್ +ಅಂಬಿಗ; ಅಂತೆ=ಹಾಗೆ; ತೆಗೆಯ ಹೋದಂತೆ=ಮೇಲಕ್ಕೆತ್ತಲು/ಹೊರಕ್ಕೆ ಎಳೆದು ತರಲು ಹೋದ ಹಾಗೆ; ಆಯಿತ್ತು=ಆಯಿತು.

ಅಂಬಿಗ=ದೋಣಿಯನ್ನು/ಹರಿಗೋಲನ್ನು ಹೊಳೆ, ನದಿ, ತೊರೆಗಳಲ್ಲಿ ನಡೆಸುವವನು/ಬೆಸ್ತ/ಮೀನುಗಾರ; ಚೌಡಯ್ಯ=ವಚನಕಾರನ ಹೆಸರು; ಅಂಬಿಗ ಚೌಡಯ್ಯ=ವಚನಕಾರ ಚೌಡಯ್ಯನು ತಾನು ರಚಿಸಿದ ವಚನಗಳಲ್ಲಿ ತನ್ನ ಹೆಸರನ್ನೇ ವಚನಗಳ ಅಂಕಿತನಾಮವನ್ನಾಗಿ ಬಳಸಿದ್ದಾನೆ;

ಈಜನ್ನು ಕಲಿಯದವನು ತೊರೆಯಲ್ಲಿ ಮುಳುಗುತ್ತಿರುವನನ್ನು ಮೇಲಕ್ಕೆತ್ತಲು ಹೋದಾಗ, ಅವನನ್ನು ಕಾಪಾಡಲಾಗದೆ, ತಾನೂ ಅವನೊಡನೆ ಸಾಯುವಂತೆ ಒಳ್ಳೆಯ ಅರಿವನ್ನು ತನ್ನದಾಗಿಸಿಕೊಳ್ಳದವನು ಮತ್ತು ಜೀವನದಲ್ಲಿ ಒಳ್ಳೆಯ ನಡೆನುಡಿಗಳನ್ನು ಹೊಂದದವನು ಗುರುವಾದರೆ, ತಾನು ಹಾಳಾಗುವುದಲ್ಲದೆ,

ತನ್ನ ಬಳಿ ಅರಿವನ್ನು ಪಡೆಯಲು/ವಿದ್ಯೆಯನ್ನು ಕಲಿಯಲು ಬಂದವರನ್ನು ಹಾಳುಮಾಡುತ್ತಾನೆ. ಮತ್ತೊಬ್ಬರಿಗೆ ಮಾರ್ಗದರ್ಶನವನ್ನು ನೀಡುವವರು ಮೊದಲು ತಾವು ಉತ್ತಮರಾಗಿರಬೇಕು ಎಂಬುದನ್ನು ಈ ರೂಪಕದ ನುಡಿಗಳು ಸೂಚಿಸುತ್ತಿವೆ.

ರೂಪಕ ಎಂದರೆ ಪ್ರಸಂಗವೊಂದರ ಮೂಲಕ ಯಾವುದೇ ಒಂದು ಸಂಗತಿಯನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸುವ ಇಲ್ಲವೇ ಚಿತ್ರಿಸುವ ಶಬ್ದಚಿತ್ರ)



೩. ಈಶ ಲಾಂಛನವ ತೊಟ್ಟು
ಮನ್ಮಥವೇಷ ಲಾಂಛನವ ತೊಡಲೇತಕ್ಕೆ
ಇದು ನಿಮ್ಮ ನುಡಿ ನಡೆಗೆ
ನಾಚಿಕೆಯಲ್ಲವೇ

ಅಂದಳ ಛತ್ರ ಆಭರಣ
ಕರಿ ತುರಗಂಗಳ ಗೊಂದಣವೇತಕ್ಕೆ
ಅದು ಘನಲಿಂಗದ ಮೆಚ್ಚಲ್ಲ
ಎಂದನಂಬಿಗ ಚೌಡಯ್ಯ.

ಜಾತಿ, ಮತ, ದೇವರುಗಳ ನೆಲೆಯಲ್ಲಿನ ಒಕ್ಕೂಟಗಳಿಗೆ ಗುರುಗಳಾದವರು ಮತ್ತು ದೇವಮಾನವರೆಂದು ತಮ್ಮನ್ನು ತಾವೇ ಕರೆದುಕೊಂಡು ಜನಸಮುದಾಯದ ನಡುವೆ ಕಾಣಿಸಿಕೊಳ್ಳುತ್ತಿರುವ ವ್ಯಕ್ತಿಗಳು, ಹಣೆಯಲ್ಲಿ 'ವಿಭೂತಿ' ಕುಂಕುಮ ಚಂದನದ ದ್ರವ್ಯಗಳನ್ನು ಬಳಿದುಕೊಂಡು, ಮಯ್ ಮೇಲೆ ಕಾವಿ ಇಲ್ಲವೇ ಬಿಳಿಯ ಬಣ್ಣದ ಬಟ್ಟೆಯನ್ನುಟ್ಟು, ಕೊರಳು ಮತ್ತು ತೋಳುಗಳಲ್ಲಿ ಜಪಮಣಿಗಳ ಮಾಲೆಯನ್ನು ಕಟ್ಟಿಕೊಂಡು, ಸರಳವಾದ ಜೀವನವನ್ನು ನಡೆಸುತ್ತಿರುವಂತೆ ಮೇಲ್ನೋಟಕ್ಕೆ ಕಂಡುಬಂದರೂ, ಕೆಲವು ಸನ್ನಿವೇಶಗಳಲ್ಲಿ ಜರತಾರಿ ಉಡುಗೆಯನ್ನುಟ್ಟು, ರತ್ನವಜ್ರಗಳಿಂದ ಕೂಡಿದ ಚಿನ್ನದ ಕಿರೀಟವನ್ನು ಮುಡಿಯಲ್ಲಿ ತೊಟ್ಟು, ಪಲ್ಲಕ್ಕಿಯನ್ನೇರಿ, ಆಡಂಬರದಿಂದ ಕೂಡಿದ ಆಚರಣೆಗಳಲ್ಲಿ ತೊಡಗಿ, ಅದ್ದೂರಿಯ ಮೆರೆವಣಿಗೆಯಲ್ಲಿ ಮೆರೆಯುತ್ತಿರುತ್ತಾರೆ. ಇಂತಹ ಇಬ್ಬಂದಿತನದ ನಡೆನುಡಿಗಳನ್ನು ಈ ವಚನದಲ್ಲಿ ಕಟುವಾಗಿ ಟೀಕಿಸಲಾಗಿದೆ.

ಇಬ್ಬಂದಿತನದ ನಡೆನುಡಿ ಎಂದರೆ ಒಂದೆಡೆಯಲ್ಲಿ ಸರ್‍ವಸಂಗ ಪರಿತ್ಯಾಗಿಗಳಂತೆ ನಟಿಸುತ್ತಾ, ಮತ್ತೊಂದೆಡೆಯಲ್ಲಿ ಎಲ್ಲಾ ಬಗೆಯ ಸಿರಿಸಂಪದಗಳಿಂದ ಕೂಡಿದ ಆಡಂಬರದ ಬದುಕನ್ನು ನಡೆಸುತ್ತಿರುವುದು.

(ಈಶ=ಈಶ್ವರ/ಶಿವ/ಒಡೆಯ/ದೇವರು; ಲಾಂಛನ=ಗುರುತು/ಚಿಹ್ನೆ/ಮುದ್ರೆ; ಈಶ ಲಾಂಛನ=ಶಿವನನ್ನು/ದೇವರನ್ನು ಪೂಜಿಸುವ ವ್ಯಕ್ತಿಗಳು ತಮ್ಮ ಮಯ್ ಮೇಲೆ ಕಾವಿ ಇಲ್ಲವೇ ಬಿಳಿಯ ಬಣ್ಣದ ಬಟ್ಟೆಯನ್ನು ಉಟ್ಟುಕೊಂಡು, ಹಣೆಯಲ್ಲಿ 'ವಿಭೂತಿ', ಕುಂಕುಮ, ಚಂದನ ದ್ರವ್ಯವನ್ನು ಬಳಿದುಕೊಂಡು, ಕೊರಳಲ್ಲಿ 'ರುದ್ರಾಕ್ಷಿ' ಮಾಲೆಯನ್ನು ಹಾಕಿಕೊಂಡು, ಅಂಗಯ್ ಮೇಲೆ ಶಿವಲಿಂಗವನ್ನು ಇಟ್ಟುಕೊಂಡಿರುತ್ತಾರೆ; ತೊಟ್ಟು=ತಳೆದು/ಹೊಂದಿ/ ಹಾಕಿಕೊಂಡು; ಮನ್ಮಥ=ಕಾಮ/ಮದನ/ಹೆಣ್ಣುಗಂಡಿನ ಮಯ್ ಮನಗಳಲ್ಲಿ ಕಾಮದ ನಂಟಿನ ಒಳಮಿಡಿತಗಳು ಮೂಡುವಂತೆ ಮಾಡುವ ದೇವತೆ ಎಂಬ ಕಲ್ಪನೆಯು ಜನಮನದಲ್ಲಿದೆ; ವೇಷ=ಮಯ್ಯನ್ನು ಉಡುಗೆ ತೊಡುಗೆಗಳಿಂದ ಸಿಂಗರಿಸಿಕೊಳ್ಳುವುದು/ಒಡವೆ/ಬಟ್ಟೆ;

ಮನ್ಮಥ ವೇಷ ಲಾಂಛನ=ನೋಡುವವರ ಕಣ್ಮನಗಳನ್ನು ಸೆಳೆಯುವಂತಹ ಮೋಹಕವಾದ ಹಾಗೂ ಬೆಲೆಬಾಳುವ ಉಡುಗೆ ತೊಡುಗೆಗಳು/ಮನದಲ್ಲಿ ಕಾಮದ ನಂಟಿನ ಒಳಮಿಡಿತಗಳಿಂದ ಕೂಡಿ ಅಂದಚೆಂದದ ಒಡವೆ ಮತ್ತು ಬಟ್ಟೆಗಳಿಂದ ಸಿಂಗಾರಗೊಂಡಿರುವ ದೇಹ; ತೊಡಲ್+ಏತಕ್ಕೆ; ತೊಡು=ಬಟ್ಟೆ/ ಒಡವೆಗಳನ್ನು ಮಯ್ ಮೇಲೆ ಹಾಕಿಕೊಳ್ಳುವುದು; ಏತಕ್ಕೆ=ಯಾವ ಉದ್ದೇಶಕ್ಕಾಗಿ/ಏನು ಕಾರಣಕ್ಕಾಗಿ;

ಇದು=ಈ ರೀತಿಯ/ಬಗೆಯ; ನುಡಿ=ಮಾತು; ನಡೆ=ಆಚರಣೆ/ವರ್ತನೆ; ನಾಚಿಕೆ+ಅಲ್ಲವೇ; ನಾಚಿಕೆ=ಲಜ್ಜೆ/ಸಿಗ್ಗು/ಅವಮಾನ;

ಇದು ನಿಮ್ಮ ನಡೆನುಡಿಗೆ ನಾಚಿಕೆಯಲ್ಲವೇ=ಬಾಯಲ್ಲಿ ಆದರ್ಶ, ಸರಳತನ, ನೀತಿ, ನ್ಯಾಯದ ನುಡಿಗಳನ್ನಾಡುತ್ತಾ, ನಿಜ ಜೀವನದಲ್ಲಿ ಅದ್ದೂರಿತನದಿಂದ ಕೂಡಿದ ಸಿರಿವಂತಿಕೆಯ ಜೀವನವನ್ನು ಮಾಡುತ್ತಿರುವುದು ನಿಮ್ಮ ಮನವನ್ನು ಕಾಡುತ್ತಿಲ್ಲವೇ; ಈ ರೀತಿ ಇಬ್ಬಗೆಯಲ್ಲಿ ಬಾಳುವುದು ಸರಿಯಲ್ಲ ಎಂಬ ಒಳಮಿಡಿತವು ನಿಮ್ಮ ಮನದಲ್ಲಿ ಮೂಡಿಲ್ಲವೇ; ಆಡುವುದು ಒಂದು, ಮಾಡುತ್ತಿರುವುದು ಮತ್ತೊಂದು ಎಂಬ ನಾಣ್ಣುಡಿಯಂತೆ ನಾನಿದ್ದೇನೆ ಎಂಬ ಅಳುಕು ನಿಮ್ಮನ್ನು ಕಾಡುತ್ತಿಲ್ಲವೇ; ಸಮಾಜದಲ್ಲಿ ನನ್ನನ್ನು ನೋಡಿದ ನಾಲ್ಕು ಮಂದಿ ನನ್ನ ಬಗ್ಗೆ ಏನಂದುಕೊಳ್ಳಬಹುದು ಎಂಬ ಹೆದರಿಕೆಯಿಲ್ಲವೇ;

ಅಂದಳ=ಪಲ್ಲಕ್ಕಿ/ಮೇನೆ/ಡೋಲಿ; ಛತ್ರ=ದೇವರು, ರಾಜ, ಗುರುಹಿರಿಯರ ಸಾಮಾಜಿಕ ಅಂತಸ್ತಿನ ಸೂಚಕವಾಗಿ ತಲೆಯ ಮೇಲೆ ಹಿಡಿಯುವ ಬಿಳಿಯ ಕೊಡೆ; ಆಭರಣ=ಒಡವೆ/ಚಿನ್ನ ಬೆಳ್ಳಿ ವಜ್ರ ರತ್ನಗಳಿಂದ ಮಾಡಿರುವ ತೊಡುಗೆ;

ಕರಿ=ಆನೆ; ತುರಗ=ಕುದುರೆ/ಅಶ್ವ; ತುರಗಂಗಳ=ಕುದುರೆಗಳ; ಗೊಂದಣ+ಏತಕ್ಕೆ; ಗೊಂದಣ=ಗುಂಪು/ಹಿಂಡು/ಮೇಳ; ಘನ=ದೊಡ್ಡದಾದ/ಮಂಗಳಕರವಾದ/ ಮಹಿಮೆಯುಳ್ಳ; ಲಿಂಗ=ಈಶ್ವರನ ವಿಗ್ರಹ/ದೇವರು; ಮೆಚ್ಚು=ಒಪ್ಪು/ಸಮ್ಮತಿಸು/ ಒಲಿ/ಪ್ರೀತಿಸು; ಮೆಚ್ಚಲ್ಲ=ಒಪ್ಪಿಗೆಯಾಗುವುದಿಲ್ಲ/ಒಲಿಯುವುದಿಲ್ಲ;

ಅದು ಘನಲಿಂಗದ ಮೆಚ್ಚಲ್ಲ=ಈ ರೀತಿ ಹೊರಗೊಂದು ಒಳಗೊಂದು ಬಗೆಯ ಉದ್ದೇಶಗಳಿಂದ ಕೂಡಿ, ಮನದಲ್ಲಿ ಒಳಿತು ಕೆಡುಕಿನ ನಡೆನುಡಿಗಳ ಬಗ್ಗೆ ಯಾವೊಂದು ಬಗೆಯ ಒಳತೋಟಗಳಿಲ್ಲದೆ ಮೆರೆಯುವ ವ್ಯಕ್ತಿಗಳನ್ನು ಲಿಂಗ ಮೆಚ್ಚುವುದಿಲ್ಲ. ದೇವರು ಮೆಚ್ಚುವುದು ಒಳ್ಳೆಯ ನಡೆನುಡಿಗಳಿಂದ ಕೂಡಿ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ವ್ಯಕ್ತಿಗಳನ್ನು ಮಾತ್ರ ಎಂಬ ಇಂಗಿತವನ್ನು ಈ ನುಡಿಗಳಲ್ಲಿ ಸೂಚಿಸಲಾಗಿದೆ; ಎಂದನ್+ಅಂಬಿಗ; ಎಂದನ್=ಎಂದು ಹೇಳಿದನು/ನುಡಿದನು.)



೪. ಉಂಡರೆ ಭೂತನೆಂಬರು
ಉಣದಿದ್ದರೆ ಚಾತಕನೆಂಬರು

ಭೋಗಿಸಿದರೆ ಕಾಮಿಯೆಂಬರು
ಭೋಗಿಸದಿದ್ದರೆ ಮುನ್ನ ಮಾಡಿದ ಕರ್ಮಿ ಎಂಬರು

ಊರೊಳಗಿದ್ದರೆ ಸಂಸಾರಿ ಎಂಬರು
ಅಡವಿಯೊಳಗಿದ್ದರೆ ಮೃಗಜಾತಿ ಎಂಬರು

ನಿದ್ರೆಗೈದರೆ ಜಡದೇಹಿ ಎಂಬರು
ಎದ್ದಿದ್ದರೆ ಚಕೋರನೆಂಬರು

ಇಂತೀ ಜನಮೆಚ್ಚಿ ನಡೆದವರ
ಎಡದ ಪಾದ ಕಿರಿ ಕಿರುಗುಣಿಯಲ್ಲಿ

ಮನೆ ಮಾಡು ಮನೆ ಮಾಡು
ಎಂದಾತ ನಮ್ಮ ಅಂಬಿಗರ ಚೌಡಯ್ಯ.

**ವ್ಯಕ್ತಿಯು ತನ್ನ ಜೀವನವನ್ನು ಯಾವ ರೀತಿಯಲ್ಲಿ ನಡೆಸುತ್ತಿದ್ದರೂ ಸುತ್ತಮುತ್ತಣ ಜನರಲ್ಲಿ ಕೆಲವರಾದರೂ ಅವನ ಬಗ್ಗೆ ಒಂದಲ್ಲ ಒಂದು ಬಗೆಯ ಕೊಂಕು ಮಾತನ್ನು ಆಡುತ್ತಿರುತ್ತಾರೆ. ಆದುದರಿಂದ ಲೋಕದಲ್ಲಿ ಎಲ್ಲರೂ ಮೆಚ್ಚುವಂತೆ ಬಾಳ್ವೆಯನ್ನು ನಡೆಸಲು ಯಾರಿಂದಲೂ ಆಗದು ಎಂಬ ಸಾಮಾಜಿಕ ವಾಸ್ತವವನ್ನು ಈ ವಚನದಲ್ಲಿ ಹೇಳಲಾಗಿದೆ.**

(ಉಂಡರೆ=ಊಟವನ್ನು ಮಾಡಿದರೆ/ಕೂಳನ್ನು ತಿಂದರೆ/ಮೆದ್ದರೆ/ಸೇವಿಸಿದರೆ; ಭೂತನ್+ಎಂಬರು; ಭೂತ=ದೆವ್ವ/ಪಿಶಾಚಿ/ಉಣಿಸು ತಿನಸುಗಳನ್ನು ಇತಿಮಿತಿಯಿಲ್ಲದೆ ತಿನ್ನುವ ಹೊಟ್ಟೆಬಾಕ; ದೆವ್ವದ ಹಸಿವು ಇಂಗುವುದೇ ಇಲ್ಲವೆಂಬ ನಂಬಿಕೆ ಜನರಲ್ಲಿದೆ. ದೆವ್ವವೆಂಬುದು ಜನರ ಮಾನಸಿಕ ಕಲ್ಪನೆಯಿಂದ ರೂಪುಗೊಂಡಿದೆ; ಎಂಬರು=ಎನ್ನುವರು;

ಉಣದೆ+ಇದ್ದರೆ; ಉಣದೆ=ಉಣ್ಣದೆ/ತಿನ್ನದೆ/ಮೆಲ್ಲದೆ/ಸೇವಿಸದೆ; ಇರು=ಜೀವಿಸು/ನಡೆದುಕೊಳ್ಳು; ಇದ್ದರೆ=ನಡೆದುಕೊಂಡರೆ; ಚಾತಕನ್+ಎಂಬರು; ಚಾತಕ=ಒಂದು ಬಗೆಯ ಹಕ್ಕಿ. ಈ ಹಕ್ಕಿಯು ಯಾವುದೇ ಬಗೆಯ ಹಣ್ಣುಕಾಯಿ ಹುಳುಹುಪ್ಪಟೆಗಳನ್ನು ತಿನ್ನದೆ, ಕೇವಲ ಮಳೆಯ ಹನಿ ನೀರನ್ನು ಕುಡಿದು ಜೀವಿಸುತ್ತದೆ ಎಂದು ಜನರು ಮಾತನಾಡಿಕೊಳ್ಳುತ್ತಾರೆ;

ಉಂಡರೆ ಭೂತನೆಂಬರು ಉಣದಿದ್ದರೆ ಚಾತಕನೆಂಬರು=ಚೆನ್ನಾಗಿ ಉಂಡು ತಿಂದು ತೇಗಿ ಆನಂದಪಡುತ್ತಿದ್ದರೆ, ಇತಿಮಿತಿಯಿಲ್ಲದೆ ಉಣ್ಣುವ ಹೊಟ್ಟೆಬಾಕ ಎನ್ನುತ್ತಾರೆ. ಮಿತಿಯಾಗಿ ತಿಂದುಂಡರೆ, ಹೊಟ್ಟೆಬಟ್ಟೆಗೂ ವೆಚ್ಚ ಮಾಡದೆ ಅತಿ ಜಿಪುಣನಾಗಿ ಬಾಳುತ್ತಿದ್ದಾನೆ ಎಂದು ಆಡಿಕೊಳ್ಳುತ್ತಾರೆ;

ಭೋಗ=ಜೀವನದಲ್ಲಿ ಒಲವು ನಲಿವುಗಳಿಂದ ಆನಂದವನ್ನು ಪಡೆಯುವುದು/ತನ್ನ ಬಳಿ ಇರುವ ಸಂಪತ್ತಿನಿಂದ ಮಯ್ ಮನಗಳು ಬಯಸಿದ್ದೆಲ್ಲವನ್ನು ಹೊಂದುವುದು; ಭೋಗಿಸಿದರೆ=ಜೀವನದಲ್ಲಿ ಆನಂದ, ನೆಮ್ಮದಿ, ಒಲವು, ನಲಿವುಗಳನ್ನು ಪಡೆಯುತ್ತಿದ್ದರೆ; ಕಾಮಿ+ಎಂಬರು; ಕಾಮ=ಬಯಕೆ/ಆಸೆ/ಇಚ್ಚೆ/ಹೆಣ್ಣುಗಂಡುಗಳ ಮಯ್ ಮನಗಳಲ್ಲಿ ಒಂದನ್ನೊಂದು ಜತೆಗೂಡುವುದಕ್ಕಾಗಿ ತುಡಿಯುವ ಒಳಮಿಡಿತ; ಕಾಮಿ=ಹೆಣ್ಣನ್ನು ಕೂಡುವುದಕ್ಕಾಗಿ ಹಂಬಲಿಸುವವನು/ಕಾಮುಕ/ಅತಿಯಾದ ಬಯಕೆ/ಆಸೆಗಳುಳ್ಳವನು;

ಭೋಗಿಸದೆ+ಇದ್ದರೆ; ಭೋಗಿಸದಿದ್ದರೆ=ಯಾವುದೇ ಬಗೆಯ ಒಲವು ನಲಿವುಗಳನ್ನು ಹೊಂದದಿದ್ದರೆ/ಪಡೆಯದಿದ್ದರೆ; ಮುನ್ನ=ಈ ಮೊದಲು/ಮುಂಚೆ; ಮಾಡಿದ=ಮಾಡಿರುವ; ಕರ್ಮ=ಪಾಪದ/ಕೆಡುಕಿನ/ನೀಚತನದ ಕೆಲಸ; ಕರ್ಮಿ=ಪಾಪಿ/ನೀಚ/ಕೆಟ್ಟವನು;

ಭೋಗಿಸದಿದ್ದರೆ ಮುನ್ನ ಮಾಡಿದ ಕರ್ಮಿ ಎಂಬರು=ಹಿಂದಿನ ಜನ್ಮದಲ್ಲಿ ಮಾಡಬಾರದ ಪಾಪದ ಕೆಲಸಗಳನ್ನು ಮಾಡಿ ಜನರಿಗೆ ಕೇಡನ್ನು ಬಗೆದಿದ್ದಾನೆ. ಆದುದರಿಂದಲೇ ಈ ಜನ್ಮದಲ್ಲಿ ಯಾವುದೇ ಬಗೆಯ ನೆಮ್ಮದಿಯನ್ನು ಪಡೆಯದೆ ಸಂಕಟದಲ್ಲಿ ಬೇಯುತ್ತಿದ್ದಾನೆ ಎಂದು ನಿಂದಿಸುತ್ತಾರೆ;

ಊರು+ಒಳಗೆ+ಇದ್ದರೆ; ಊರು=ಜನವಸತಿಯಿರುವ ಜಾಗ/ನೆಲೆ; ಊರೊಳಿಗಿದ್ದರೆ=ಊರಿನಲ್ಲಿ ಬಾಳುತ್ತಿದ್ದರೆ/ನೆಲೆಸಿದ್ದರೆ/ವಾಸಿಸುತ್ತಿದ್ದರೆ; ಸಂಸಾರ=ಕುಟುಂಬ/ಪರಿವಾರ/ಪರಿಜನ; ಸಂಸಾರಿ=ಹೆಂಡತಿ ಮಕ್ಕಳು ಮೊಮ್ಮಕ್ಕಳಿಂದ ಕೂಡಿ ನನ್ನದು ತನ್ನದು ಎಂಬ ಮೋಹದಿಂದ ಬಾಳುತ್ತಿರುವ ವ್ಯಕ್ತಿ; ಅಡವಿ+ಒಳಗೆ+ಇದ್ದರೆ; ಅಡವಿ=ಕಾಡು/ಅರಣ್ಯ/ಕಾನನ; ಮೃಗ=ಪ್ರಾಣಿ/ಪಶು/ಜಂತು; ಜಾತಿ=ವರ್ಗ/ಗುಂಪು/ಪೀಳಿಗೆ;

ಊರೊಳಗಿದ್ದರೆ ಸಂಸಾರಿ ಎಂಬರು ಅಡವಿಯೊಳಗಿದ್ದರೆ ಮೃಗಜಾತಿ ಎಂಬರು=ಊರಿನಲ್ಲಿ ಸಂಸಾರಿಯಾಗಿದ್ದರೆ ಮೋಹದ ಸುಳಿಯಲ್ಲೇ ಸಿಲುಕಿರುವ ವ್ಯಕ್ತಿಯೆಂದು ಟೀಕಿಸುತ್ತಾರೆ. ಸಂಸಾರದ ಬಯಕೆಗಳೆಲ್ಲವನ್ನೂ ಕಿತ್ತೊಗೆದು ಸಂನ್ಯಾಸಿಯಾಗಿ ಕಾಡಿನಲ್ಲಿ ನೆಲೆಸಿದರೆ ಕಾಡಿನ ಜಂತುವೆಂದು ಹಂಗಿಸುತ್ತಾರೆ;

ನಿದ್ರೆ+ಗೈದರೆ; ಗೈದರೆ=ಗೆಯ್ದರೆ; ಗೆಯ್=ಮಾಡು; ಗೆಯ್ದರೆ=ಮಾಡಿದರೆ; ನಿದ್ರೆ ಗೈದರೆ=ಮಲಗಿ ನಿದ್ರಿಸಿದರೆ/ಒಂದೆಡೆ ಮಲಗಿ ಮಯ್ ಮನಗಳಿಗೆ ಬಿಡುವು ಕೊಟ್ಟರೆ; ಜಡ=ಚಟುವಟಿಕೆಯಿಲ್ಲದ/ಅತ್ತಿತ್ತ ಅಲುಗಾಡದ/ಚುರುಕಿಲ್ಲದ; ದೇಹ=ಶರೀರ/ಮಯ್; ಜಡದೇಹಿ=ಸೋಂಬೇರಿ/ಆಲಸಿ/ಮಯ್ಗಳ್ಳ/ದುಡಿಮೆಯನ್ನು ಮಾಡದವನು;

ಎದ್ದು+ಇದ್ದರೆ; ಎಳ್ದು=ಎದ್ದು; ಏಳ್/ಏಳು=ನಿಲ್ಲು; ಎದ್ದಿದ್ದರೆ=ಚಟುವಟಿಕೆ/ಚುರುಕುತನ/ಕ್ರಿಯಾಶೀಲತೆಯ ನಡೆನುಡಿಗಳಿಂದ ಕೂಡಿದ್ದರೆ ಚಕೋರನ್+ಎಂಬರು; ಚಕೋರ=ಒಂದು ಬಗೆಯ ಹಕ್ಕಿ. ಇದು ಇರುಳಿನಲ್ಲಿ ಕಣ್ಣುಗಳನ್ನು ಮುಚ್ಚಿಕೊಳ್ಳದೆ ಎಚ್ಚರವಾಗಿದ್ದುಕೊಂಡು, ಚಂದಿರನ ಬೆಳದಿಂಗಳನ್ನು ಹೀರುತ್ತ ಬದುಕಿರುತ್ತದೆ ಎಂದು ಜನರು ಮಾತನಾಡಿಕೊಳ್ಳುತ್ತಾರೆ;

ನಿದ್ರೆಗೈದರೆ ಜಡದೇಹಿ ಎಂಬರು ಎದ್ದಿದ್ದರೆ ಚಕೋರನೆಂಬರು=ಯಾವೊಂದು ಕೆಲಸವನ್ನು ಮಾಡದೆ ಸುಮ್ಮನಿದ್ದರೂ ಆಡಿಕೊಳ್ಳುತ್ತಾರೆ. ಏನನ್ನಾದರೂ ಮಾಡುತ್ತಾ ಚಟುವಟಿಕೆಯಿಂದ ಕೂಡಿದ್ದರೂ ನಿಂದಿಸುತ್ತಾರೆ;

ಇಂತು+ಈ; ಇಂತು=ಈ ರೀತಿಯಲ್ಲಿ/ಬಗೆಯಲ್ಲಿ; ಜನ=ಜನರು/ಲೋಕದ ಮಂದಿ; ಮೆಚ್ಚು=ಒಪ್ಪು/ಸಮ್ಮತಿಸು/ಹೊಗಳು/ಕೊಂಡಾಡು; ನಡೆ=ನಡವಳಿಕೆ/

ನಡತೆ/ಆಚಾರ; ನಡೆದವರ=ನಡೆದವರನ್ನು; ಇಂತೀ ಜನಮೆಚ್ಚಿ ನಡೆದವರ=ತಮ್ಮ ಸುತ್ತಮುತ್ತಣ ಜನರನ್ನು ಮೆಚ್ಚಿಸಲೆಂದು, ಜನರ ತಾಳಕ್ಕೆ ತಕ್ಕಂತೆ ಕುಣಿಯುತ್ತಾ, ತಮ್ಮ ಮಯ್ ಮನಗಳನ್ನು ತಾವೇ ವಂಚಿಸಿಕೊಂಡು ಬಾಳುವಂತಹ ವ್ಯಕ್ತಿಗಳನ್ನು;

ಪಾದ=ಅಡಿ/ಕಾಲು; ಎಡದ ಪಾದ=ಯಾವುದೇ ಒಂದು ವಸ್ತು/ಪ್ರಾಣಿ/ ಮಾನವಜೀವಿಯನ್ನು ಬಹು ಕೀಳಾಗಿ ಕಾಣುವಾಗ ಅವನನ್ನು/ಅದನ್ನು ಎಡದ ಪಾದಕ್ಕೆ ಹೋಲಿಸಿ ಹೀಯಾಳಿಸುವುದು ಜನಸಮುದಾಯದ ಮಾತುಕತೆಯಲ್ಲಿ ಒಂದು ನುಡಿಗಟ್ಟಾಗಿ ಬಳಕೆಯಾಗುತ್ತಿದೆ;

ಕಿರಿ=ಚಿಕ್ಕದು/ಸಣ್ಣದು; ಕಿರು+ಕುಣಿ=ಕಿರುಗುಣಿ; ಕುಣಿ=ಕುಳಿ/ತಗ್ಗು; ಕಿರುಗುಣಿ= ಸಣ್ಣ ಗುಳಿ/ಚಿಕ್ಕ ಬಿರುಕು; ಕಿರುಗುಣಿಕೆ=ಕಿರು ಬೆರಳು; ಎಡದ ಪಾದದ ಕಿರಿ ಕಿರುಗುಣಿ=ಎಡದ ಪಾದದಲ್ಲಿ ಅತಿಚಿಕ್ಕದಾಗಿರುವ ಕಿರುಬೆರಳು; ಮನೆ ಮಾಡು=ನೆಲೆಸುವಂತೆಮಾಡು/ಅಲ್ಲಿಡು;

ಜನಮೆಚ್ಚಿ ನಡೆದವರ ಎಡದ ಪಾದ ಕಿರಿ ಕಿರುಗುಣಿಯಲ್ಲಿ ಮನೆ ಮಾಡು ಮನೆ ಮಾಡು=ಜನರ ಮೆಚ್ಚುಗೆಯನ್ನು ಪಡೆಯಲೆಂದೇ ಸುಳ್ಳು, ತಟವಟ, ವಂಚನೆ, ಕುಟಿಲತೆಯಿಂದ ನಡೆದುಕೊಳ್ಳುವ ವ್ಯಕ್ತಿಗಳನ್ನು ದೂರವಿಡಬೇಕು/ ಅಂತಹವರನ್ನು ಕಡೆಗಣಿಸಬೇಕು; ಎಂದು+ಆತ; ಆತ=ಅವನು; ಎಂದಾತ=ಎಂದು ಹೇಳಿದನು/ಹೇಳಿದವನು; ಅಂಬಿಗ ಚೌಡಯ್ಯ=ವಚನಕಾರ ಚೌಡಯ್ಯನು ತಾನು ರಚಿಸಿದ ವಚನಗಳಲ್ಲಿ ತನ್ನ ಹೆಸರನ್ನೇ ವಚನಗಳ ಅಂಕಿತನಾಮವನ್ನಾಗಿ ಬಳಸಿದ್ದಾನೆ.

ಯಾವುದೇ ವ್ಯಕ್ತಿಯು ಜನರ ಮೆಚ್ಚುಗೆಗಾಗಿ ಹಂಬಲಿಸದೆ, ಜನರ ಹೊಗಳಿಕೆ ಇಲ್ಲವೇ ತೆಗಳಿಕೆಗೆ ಕಿವಿಗೊಡದೆ, ತನ್ನ ಮನ ಮೆಚ್ಚುವಂತೆ ಅಂದರೆ ಜನಸಮುದಾಯಕ್ಕೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳಿಂದ ಬಾಳಬೇಕು ಎಂಬ ಇಂಗಿತವನ್ನು ಈ ವಚನದಲ್ಲಿ ಸೂಚಿಸಲಾಗಿದೆ)



೫. ಜಾತಿಭ್ರಮೆ ನೀತಿಭ್ರಮೆ
ಎಂಬ ಕರ್ಮಂಗಳನು
ಘಾತಿಸಿ ಕಳೆಯಬಲ್ಲಡಾತ ಯೋಗಿ

ಕ್ಷೇತ್ರಭ್ರಮೆ ತೀರ್ಥಭ್ರಮೆ
ಪಾಷಾಣಭ್ರಮೆ ಎಂಬ ಕರ್ಮಂಗಳನು
ನೀಕರಿಸಿ ಕಳೆಯಬಲ್ಲಡಾತ ಯೋಗಿ

ಲೋಕಕ್ಕಂಜಿ ಲೌಕಿಕವ ಮರೆಗೊಂಡು
ನಡೆವಾತ ತೂತಯೋಗಿ
ಎಂದಾತನಂಬಿಗ ಚೌಡಯ್ಯ.

**ಯೋಗಿಯಾದವನ ವ್ಯಕ್ತಿತ್ವವು ಹೇಗಿರಬೇಕೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ. ಸಮಾಜದ ಒಳಿತಿಗಾಗಿ ಮತ್ತು ಜನಸಮುದಾಯದ ಹಿತಕ್ಕಾಗಿ ಬಾಳುವವನೇ ಯೋಗಿ. ಯೋಗಿಯಾದವನು ತನ್ನ ಮಯ್ ಮನದಲ್ಲಿ ತುಂಬಿಕೊಂಡಿರುವ ತಪ್ಪು ಗ್ರಹಿಕೆಗಳನ್ನು ಮತ್ತು ಕಲ್ಪಿತ ಸಂಗತಿಗಳನ್ನು ಹೋಗಲಾಡಿಸಿಕೊಂಡು, ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿಯಾಗಿ ಬೆಳೆದು ಬಾಳಬೇಕಾದ ರೀತಿಯನ್ನು ಈ ವಚನದಲ್ಲಿ ವಿವರಿಸಲಾಗಿದೆ.**

(ಜಾತಿ=ವಂಶ/ತಳಿ/ವರ್ಗ/ಗುಂಪು; ಮೇಲು ಕೀಳೆಂಬ ಜಾತಿ ಮೆಟ್ಟಿಲುಗಳಿಂದ ಕೂಡಿರುವ ಸಮಾಜದಲ್ಲಿ, ಜಾತಿ ಎನ್ನುವುದು ಮಾನವರೇ ಕಟ್ಟಿಕೊಂಡಿರುವ ಒಂದು ಸಾಮಾಜಿಕ ಒಕ್ಕೂಟ; ಭ್ರಮೆ=ಇಲ್ಲದ್ದನ್ನು ಇದೆಯೆಂಬ, ಇರುವುದನ್ನು ಇಲ್ಲವೆಂಬ ಒಳಮಿಡಿತಗಳಿಂದ ಕೂಡಿರುವ ಮನಸ್ಸು/ತಪ್ಪು ಗ್ರಹಿಕೆ/ಅತಿಯಾದ ಮೋಹ/ಕಲ್ಪಿತ ಸಂಗತಿ;

ಜಾತಿ ಭ್ರಮೆ=ನೂರೆಂಟು ಬಗೆಯ ಜಾತಿಗಳ ಕಟ್ಟುಪಾಡಿನಿಂದ ಕೂಡಿರುವ ಸಮಾಜದಲ್ಲಿ ತಾನು ಹುಟ್ಟಿ ಬೆಳೆದು ಬಾಳುತ್ತಿರುವ ತನ್ನ ಜಾತಿಯು ಮತ್ತೊಂದು ಜಾತಿಗಿಂತ ಮೇಲು ಎಂಬ ಮೇಲರಿಮೆ ಇಲ್ಲವೇ ತನ್ನ ಜಾತಿಯು ಮತ್ತೊಂದಕ್ಕಿಂತ ಕೀಳು ಎಂಬ ಕೀಳರಿಮೆ;

ನೀತಿ=ಒಳ್ಳೆಯ ನಡೆನುಡಿ; ನೀತಿ ಭ್ರಮೆ=ನಾನೊಬ್ಬನೇ ಪ್ರಾಮಾಣಿಕ ವ್ಯಕ್ತಿ/ ಒಳ್ಳೆಯವನು/ಸತ್ಯವಂತ/ಬೆವರನ್ನು ಹರಿಸಿ ದುಡಿದು ಬಾಳುತ್ತಿರುವವನು/ ಸರಿಯಾದ ದಾರಿಯಲ್ಲಿ ನಡೆಯುತ್ತಿರುವವನು ಎಂಬ ಒಳಮಿಡಿತದಿಂದ ಕೂಡಿ, ನನ್ನನ್ನು ಬಿಟ್ಟರೆ ಈ ಜಗತ್ತಿನಲ್ಲಿ ಮತ್ತಾರು ನೀತಿವಂತರಿಲ್ಲ/ ಸತ್ಯವಂತರಿಲ್ಲ/ಪ್ರಾಮಾಣಿಕರಿಲ್ಲ ಎಂಬ ನಿಲುವು; ಎಂಬ=ಎನ್ನುವ/ಎಂದು ಕಾಡುವ/ಪೀಡಿಸುವ; ಕರ್ಮ=ಕೆಲಸ/ಕಸುಬು/ಉದ್ಯೋಗ; ಕರ್ಮಂಗಳನು= ನಡೆನುಡಿಗಳನ್ನು; ಘಾತ=ಹೊಡೆತ/ಪೆಟ್ಟು/ನಾಶ/ಹಾಳು; ಘಾತಿಸಿ=ನಾಶಪಡಿಸಿ/ ಇಲ್ಲದಂತೆ ಮಾಡಿ/ಹೊಡೆದೋಡಿಸಿ;

ಕಳೆಯ+ಬಲ್ಲಡೆ+ಆತ; ಕಳೆ=ಬಿಡು/ಹೋಗಲಾಡಿಸು/ತೊರೆ/ತೆಗೆದುಹಾಕು; ಬಲ್ಲ=ತಿಳಿದ/ಅರಿತ/ಶಕ್ತನಾದ/ಕಸುವುಳ್ಳ; ಬಲ್ಲಡೆ=ತಿಳಿದುಕೊಂಡರೆ/ ಅರಿತುಕೊಂಡರೆ/ಶಕ್ತನಾದರೆ; ಕಳೆಯ ಬಲ್ಲಡೆ=ಹೋಗಲಾಡಿಸಿಕೊಳ್ಳಲು ಶಕ್ತನಾದರೆ; ಆತ=ಅವನು/ಅಂತಹ ವ್ಯಕ್ತಿಯು; ಯೋಗಿ=ಯತಿ/ತಪಸ್ವಿ/ಮಯ್ ಮನವನ್ನು ಹತೋಟಿಯಲ್ಲಿಟ್ಟುಕೊಂಡು ಒಳ್ಳೆಯ ನಡೆನುಡಿಗಳಿಂದ ಬಾಳುತ್ತಿರುವ ವ್ಯಕ್ತಿ/ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು;

ಕ್ಷೇತ್ರ=ದೇಗುಲಗಳು, ಗುರುಹಿರಿಯರ ಗದ್ದುಗೆಗಳು ನೆಲೆಗೊಂಡಿರುವ ಪ್ರದೇಶ/ ದೇವರಲ್ಲಿ ಒಲವು ಮತ್ತು ನಂಬಿಕೆಯನ್ನುಳ್ಳ ಜನರು ಹೋಗಿಬರುವ ಜಾಗ; ಕ್ಷೇತ್ರ ಭ್ರಮೆ=ಪುಣ್ಯದ ನೆಲೆಗಳೆಂದು ನಂಬಿರುವ ಜಾಗಗಳಿಗೆ ಹೋಗಿ ಮಿಂದು ಮಡಿಯುಟ್ಟು, ದೇವರಿಗೆ ಕಾಣಿಕೆ ಒಪ್ಪಿಸಿ, ಹಣ್ಣುಕಾಯಿ ಮಾಡಿಸಿ, ಅಡ್ಡಬಿದ್ದು ಬರುವುದರಿಂದ ತಮಗೆ ಜೀವನದಲ್ಲಿ ಬಂದೊದಗಿರುವ ಸಂಕಟಗಳು ನಿವಾರಣೆಯಾಗುವುದೆಂಬ, ತಾವು ಮನದಲ್ಲಿ ಹರಸಿಕೊಂಡ ಕೆಲಸಗಳು ಈಡೇರಿ ಮುಂದಿನ ದಿನಗಳಲ್ಲಿ ಒಳಿತಾಗುವುದೆಂಬ, ಜೀವನದಲ್ಲಿ ತಾವು ಮಾಡಿರುವ ಪಾಪಗಳು ಪರಿಹಾರವಾಗುವುದೆಂಬ ನಿಲುವು;

ತೀರ್ಥ=ದೇಗುಲ ಇಲ್ಲವೇ ಗುರುಹಿರಿಯರ ಗದ್ದುಗೆಗಳ ಬಳಿ ಹರಿಯುತ್ತಿರುವ ಕೊಳ, ಕಲ್ಯಾಣಿಗಳ ನೀರು; ತೀರ್ಥ ಭ್ರಮೆ=ದೇಗುಲದ/ಗದ್ದುಗೆಗಳ ಬಳಿಯಿರುವ

ನದಿಯ ನೀರಿನಲ್ಲಿ ಮಿಂದೇಳುವುದರಿಂದ ಇಲ್ಲವೇ ದೇವರ ಮುಂದೆ ಇಟ್ಟು ಪೂಜೆ ಮಾಡಿ ಪೂಜಾರಿಯು ನೀಡುವ ನೀರನ್ನು ಕುಡಿಯುವುದರಿಂದ, ಮಯ್ ಮೇಲೆ ಸಿಂಪಡಿಸಿಕೊಳ್ಳುವುದರಿಂದ ಮಾಡಿದ ಪಾಪಗಳೆಲ್ಲ ನಿವಾರಣೆಯಾಗಿ, ಇರುವ ಸಂಕಟಗಳೆಲ್ಲ ತೊಲಗಿ, ಬರಲಿರುವ ಕೇಡು ಮರೆಯಾಗಿ, ಆಸೆಪಟ್ಟ ಬಯಕೆಗಳೆಲ್ಲ ಈಡೇರಿ, ಒಳಿತಾಗುವುದೆಂಬ ಒಳಮಿಡಿತದಿಂದ ಕೂಡಿದ ನಿಲುವು;

ಪಾಷಾಣ=ಕಲ್ಲು/ಶಿಲೆ/ಮಣಿ/ರತ್ನ/ಹರಳು; ಪಾಷಾಣ ಭ್ರಮೆ=ನವರತ್ನದಲ್ಲಿ ಒಂದು ರತ್ನವನ್ನು ಇಲ್ಲವೇ ಯಾವುದಾದರೊಂದು ಬಗೆಯ ಕಲ್ಲಿನ ಹರಳೊಂದನ್ನು ಉಂಗುರದಲ್ಲಿ ಇಲ್ಲವೇ ಸರದಲ್ಲಿ ಹಾಕಿಸಿಕೊಂಡು ಬೆರಳಲ್ಲಿ/ ಕೊರಳಿನಲ್ಲಿ ತೊಟ್ಟುಕೊಂಡರೆ ಒಳಿತಾಗುವುದೆಂಬ ನಿಲುವು; ವ್ಯಕ್ತಿಗೆ ಬರಲಿರುವ ಎಲ್ಲಾ ಬಗೆಯ ಕೇಡುಗಳನ್ನು ಈ ಬಗೆಯ ರತ್ನ/ಹರಳು ತಡೆದು, ವ್ಯಕ್ತಿಯನ್ನು ಕಾಪಾಡುವುದೆಂಬ ನಂಬಿಕೆಯು ಜನಮನದಲ್ಲಿದೆ;

ನೀಕರಿಸಿ=ತಿರಸ್ಕರಿಸಿ/ಕಡೆಗಣಿಸಿ/ನಿವಾರಿಸಿ/ಬಿಡಿಸಿ; ನೀಕರಿಸಿ ಕಳೆಯಬಲ್ಲಡಾತ ಯೋಗಿ=ಎಲ್ಲಾ ಬಗೆಯ ತಪ್ಪುಗ್ರಹಿಕೆಗಳನ್ನು/ಇಲ್ಲದ ಸಲ್ಲದ ನಿಲುವುಗಳನ್ನು ನಿವಾರಿಸಿಕೊಂಡು, ಅವುಗಳಿಂದ ಬಿಡಿಸಿಕೊಂಡು, ನಿಸರ್ಗದಲ್ಲಿನ ಮತ್ತು ಸಮಾಜದಲ್ಲಿನ ವಾಸ್ತವ ಅರಿತುಕೊಂಡು ಬಾಳುವವನು ಯೋಗಿಯಾಗುತ್ತಾನೆ;

ಲೋಕಕ್ಕೆ+ಅಂಜಿ; ಲೋಕ=ಜಗತ್ತು/ಪ್ರಪಂಚ/ಜನಸಮುದಾಯ; ಅಂಜಿಕೆ=ಹೆದರಿಕೆ/ದಿಗಿಲು/ಪುಕ್ಕಲುತನ; ಅಂಜಿ=ಹೆದರಿಕೊಂಡು/ ದಿಗಿಲುಗೊಂಡು; ಲೋಕಕ್ಕಂಜಿ=ಸಮಾಜದಲ್ಲಿರುವ ಜನರು ಏನಂದು ಕೊಳ್ಳುವರೋ, ಜನರಿಗೆ ತನ್ನ ನಿಜವಾದ ಬಣ್ಣ ಅಂದರೆ ನೀಚತನದ ಹಾಗೂ ಕಪಟತನದ ನಡೆನುಡಿಗಳು ಎಲ್ಲಿ ತಿಳಿಯುತ್ತದೆಯೋ ಎಂಬ ಹೆದರಿಕೆಯಿಂದ; ಲೌಕಿಕ=ಪ್ರಪಂಚದ ವ್ಯವಹಾರ/ಜನಸಮುದಾಯದ ನಿತ್ಯದ ನಡೆನುಡಿಗಳು; ಮರೆ+ಕೊಂಡು=ಮರೆಗೊಂಡು; ಮರೆ=ಗುಟ್ಟು/ರಹಸ್ಯ/ ಕಾಣದಾಗುವಿಕೆ; ನಡೆವ+ಆತ; ನಡೆವ=ಜೀವನವನ್ನು ಮಾಡುತ್ತಿರುವ/ ಬಾಳುತ್ತಿರುವ/ವರ್ತಿಸುತ್ತಿರುವ;

ಲೋಕಕ್ಕಂಜಿ ಲೌಕಿಕವ ಮರೆಗೊಂಡು ನಡೆವಾತ=ಜನರ ಕಣ್ಣಿಗೆ ಕಾಣದಂತೆ ಒಳಗೊಳಗೆ ತನ್ನ ಮಯ್ ಮನದ ಕಾಮದ ಬಯಕೆಗಳನ್ನು, ತುಡಿತಗಳನ್ನು ತಣಿಸಿಕೊಂಡು ಬಾಳುತ್ತಿರುವವನು;

ತೂತು=ಕಂಡಿ/ಬಿಲ/ಬಿರುಕು; ತೂತಯೋಗಿ=ಕೆಟ್ಟ ವ್ಯಕ್ತಿ/ಅರಿವುಗೆಟ್ಟವನು/ ಹೊರನೋಟಕ್ಕೆ ಯೋಗಿಯಂತೆ ಕಾಣಿಸಿಕೊಳ್ಳುತ್ತಾ, ತನ್ನ ಮಯ್ ಮನಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳಲಾಗದೆ ಒಳಗಡೆ ಅಂದರೆ ಇತರರಿಗೆ ತಿಳಿಯದಂತೆ ಕೆಟ್ಟಕೆಲಸಗಳಲ್ಲಿ ತೊಡಗಿರುವವನು;

ಎಂದ+ಆತನ್+ಅಂಬಿಗ; ಆತನ್=ಅವನು; ಎಂದಾತನ್=ಎಂದು ಹೇಳಿದನು/ ಹೇಳಿದವನು.)



೬. ಹೊಡವಡಲೇಕೆ ಹಿಡಿದು ಪೂಜಿಸಲೇಕೆ
ಎಡೆಯಾಡಲೇಕೆ ದೇಗುಲಕ್ಕಯ್ಯಾ
ಬಡವರಂಧಕರಿಂಗೆ ಒಡಲಿಗನ್ನವನಿಕ್ಕಿದಡೆ
ಹೊಡವಂಟನಾದ ಮೂರು ಲೋಕಕ್ಕೆ
ಬಡವರಂಧಕರಿಗೆ ಒಡಲಿಗನ್ನವನಿಕ್ಕದಿದ್ದರೆ
ಹೊಡೆವಡಲಿಕೆ ಹುರುಳಿಲ್ಲವೆಂದನಂಬಿಗ ಚೌಡಯ್ಯ.

**ದೇವರ ಹೆಸರಿನಲ್ಲಿ ಮಾಡುವ ಎಲ್ಲಾ ಬಗೆಯ ಪೂಜೆ ಮತ್ತು ಆಚರಣೆಗಳಿಗಿಂತಲೂ ಹಸಿವು, ಬಡತನ, ಸಂಕಟದ ಬೇಗೆಯಲ್ಲಿ ಬೇಯುತ್ತಿರುವ ವ್ಯಕ್ತಿಗಳಿಗೆ ನೆರವನ್ನು ನೀಡುವ ಕೆಲಸವು ದೊಡ್ಡದು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಹೊಡವಡು+ಅಲ್+ಏಕೆ; ಪೊಡೆ+ಪಡು=ಪೊಡೆವಡು; ಪೊಡೆ= ಹೊಟ್ಟೆ/ಒಡಲು/ಉದರ; ಪಡು=ಬೀಳು/ಕೆಡೆ/ಮಲಗು; ಪೊಡೆವಡು> ಹೊಡವಡು=ಅಡ್ಡಬೀಳು/ಇಡೀ ಮಯ್ಯನ್ನು ನೆಲದ ಮೇಲೆ ಒಡ್ಡಿ ತಲೆಬಾಗಿ ನಮಿಸುವುದು/ದಿಂಡುರುಳುವುದು; ಏಕೆ=ಯಾವುದಕ್ಕಾಗಿ/ಏತಕ್ಕಾಗಿ; ಹಿಡಿದು=ಕಯ್ಯಲ್ಲಿ ಮುಟ್ಟುತ್ತಾ/ಅಂಗಯ್ ಮೇಲೆ ಶಿವಲಿಂಗವನ್ನು ಇಟ್ಟುಕೊಂಡು; ಪೂಜೆ+ಇಸು+ಅಲ್+ಏಕೆ; ಪೂಜೆ=ದೇವರಿಗೆ ಮಾಡುವ ಬಹುಬಗೆಯ ಆಚರಣೆಗಳು/ಹೂಹಣ್ಣುಕಾಯಿಗಳನ್ನು ದೇವರ ವಿಗ್ರಹದ ಮುಂದೆ ಇಟ್ಟು, ಕರ್ಪೂರ, ಸಾಂಬ್ರಾಣಿ, ದೀಪದ ಆರತಿಯನ್ನು ಬೆಳಗುವುದು; ಪೂಜಿಸಲ್=ಪೂಜೆಯನ್ನು ಮಾಡಲು;

ಎಡೆ+ಆಡು+ಅಲ್+ಏಕೆ; ಎಡೆ=ನಡುವಣ ಜಾಗ/ಪ್ರದೇಶ; ಆಡು=ಚಲಿಸು/ತಿರುಗು; ಆಡಲ್=ಆಡಲು/ತಿರುಗಲು; ಎಡೆಯಾಡು=ಅತ್ತಿತ್ತ ಅಡ್ಡಾಡು/ಅಲೆದಾಡು/ಹೋಗಿಬರುತ್ತಿರುವುದು; ದೇಗುಲಕ್ಕೆ+ಅಯ್ಯಾ; ದೇಗುಲ=ದೇವ+ಕುಲ; ಕುಲ=ಮನೆ/ಇರುವಜಾಗ/ಆಲಯ; ದೇಗುಲ=ದೇವಾಲಯ/ದೇವರ ವಿಗ್ರಹ ಇರುವ ಮಂದಿರ; ಅಯ್ಯಾ=ಇತರರನ್ನು

ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ;

ಬಡವ+ಅರ್+ಅಂಧಕ+ಅರ್+ಇಂಗೆ; ಬಡವ=ಆಸ್ತಿಪಾಸ್ತಿ, ಸಂಪತ್ತು, ಹಣಕಾಸು ಇಲ್ಲದವನು; ಅಂಧಕ=ಕುರುಡ/ಕಣ್ಣು ಕಾಣದವನು; ಒಡಲ್+ಇಗೆ+ಅನ್ನ+ಅನ್+ಇಕ್ಕಿದಡೆ; ಒಡಲು=ಹೊಟ್ಟೆ/ಉದರ/ದೇಹ/ಶರೀರ/ಮಯ್; ಅನ್ನ=ಆಹಾರವಾಗಿ ತಿನ್ನುವ ಉಣ್ಣುವ ಎಲ್ಲಾ ಬಗೆಯ ತಿನಸು ಉಣಿಸುಗಳು; ಇಕ್ಕು=ನೀಡುವುದು/ಕೊಡುವುದು/ಇಡುವುದು/ಹಾಕುವುದು; ಇಕ್ಕಿದಡೆ=ನೀಡಿದರೆ/ಉಣಬಡಿಸಿದರೆ; ಹೊಡವಂಟನ್+ಆದ; ಹೊಡವಂಟನು=ನಮಸ್ಕರಿಸಿದವನು/ನಮಿಸಿದವನು/ದಿಂಡುರುಳಿದವನು; ಆದ=ಆದನು; ಮೂರು ಲೋಕ=ಮಾನವ ಜೀವಿಗಳಿರುವ 'ಭೂಲೋಕ', ದೇವತೆಗಳಿರುವ ದೇವಲೋಕ, ನಾಗದೇವತೆಗಳು ನೆಲೆಸಿರುವ ಪಾತಾಳಲೋಕ ಎಂಬ ಮೂರು ಲೋಕಗಳಿವೆ ಎಂಬ ಕಲ್ಪನೆಯು ಜನಮನದಲ್ಲಿದೆ; ಹೊಡವಂಟನಾದ ಮೂರು ಲೋಕಕ್ಕೆ=ಸಹಮಾನವರ ಬಗ್ಗೆ ಕರುಣೆಯನ್ನು ತೋರಿಸಿ, ಅವರ ಒಳಿತಿಗಾಗಿ ದುಡಿಯುವ ವ್ಯಕ್ತಿಯು ಮೂರು ಲೋಕದ ಮನ್ನಣೆಗೆ ಪಾತ್ರನಾಗುವನು ಎಂಬ ತಿರುಳಿನಲ್ಲಿ ಬಳಕೆಯಾಗಿದೆ;

ಬಡವರ್+ಅಂಧಕರಿಂಗೆ; ಒಡಲಿಗೆ+ಅನ್ನವನ್+ಇಕ್ಕದೆ+ಇದ್ದರೆ; ಅನ್ನವನ್=ಅನ್ನವನ್ನು; ಇಕ್ಕದೆ=ನೀಡದೆ/ಕೊಡದೆ/ಹಾಕದೆ; ಇಕ್ಕದಿದ್ದರೆ=ಕೊಡದೆ ಹೋದರೆ; ಹೊಡೆವಡಲಿಕೆ=ದೇವರ ಮುಂದೆ ದಿಂಡುರುಳುವ/ನಮಸ್ಕರಿಸುವ ಆಚರಣೆಯಿಂದ; ಹುರುಳ್+ಇಲ್ಲ+ಎಂದನ್+ಅಂಬಿಗ; ಹುರುಳು=ಸತ್ವ/ಒಳಿತು/ಲೇಸು/ಪ್ರಯೋಜನ;

ಹೊಡೆವಡಲಿಕೆ ಹುರುಳಿಲ್ಲ=ಸಹಮಾನವರ ಬಗ್ಗೆ ಕರುಣೆಯ ನಡೆನುಡಿಯಿಲ್ಲದವರು, ನೊಂದವರಿಗೆ ಹಸಿದವರಿಗೆ ನೆರವನ್ನು ನೀಡದವರು ಮಾಡುವ ದೇವರ ಪೂಜೆಯಿಂದ ಯಾವ ಪ್ರಯೋಜನವೂ ಇಲ್ಲ. ದೇವರ ಪೂಜೆಗಿಂತ ಸಹಮಾನವರ ಬಗೆಗಿನ ಕಾಳಜಿ ಮತ್ತು ಕರುಣೆಯ ನಡೆನುಡಿ ದೊಡ್ಡದು.



# ಅಕ್ಕಮಹಾದೇವಿ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಊರು | : | ಉಡುತಡಿ/ಉಡುಗಣಿ,<br>ಶಿಕಾರಿಪುರ ತಾಲ್ಲೂಕು,<br>ಶಿವಮೊಗ್ಗ ಜಿಲ್ಲೆ. |
| ದೊರೆತಿರುವ ವಚನಗಳು | : | ೪೩೭ |
| ವಚನಗಳ ಅಂಕಿತನಾಮ | : | ಚೆನ್ನಮಲ್ಲಿಕಾರ್ಜುನ |

೭. ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯಾ ನೀನು
ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು
ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯಾ ನೀನು
ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯಾ ನೀನು
ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯಾ ನೀನು
ಪರಿಣಾಮಿಗಳಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯಾ ನೀನು
ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯಾ ನೀನು
ಹೃದಯಕಮಲ ಅರಳದವರಲ್ಲಿ ಇರಲೊಲ್ಲೆಯಯ್ಯಾ ನೀನು
ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ
ಹೇಳಾ ಚೆನ್ನಮಲ್ಲಿಕಾರ್ಜುನಯ್ಯಾ.

ಒಳ್ಳೆಯ ನಡೆನುಡಿಗಳನ್ನು ಹೊಂದದಿರುವ ವ್ಯಕ್ತಿಗಳು ನೀಡುವ ವಸ್ತುಗಳನ್ನಾಗಲಿ ಇಲ್ಲವೇ ಬಹುಬಗೆಯ ಆಚರಣೆಗಳನ್ನೊಳಗೊಂಡು ಮಾಡುವ ಪೂಜೆಯನ್ನಾಗಲಿ ದೇವರು ಒಪ್ಪಿಕೊಳ್ಳುವುದಿಲ್ಲ ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣಶರಣೆಯರು ದೇಗುಲವನ್ನು ನಿರಾಕರಿಸಿ, ದೇವರನ್ನು ಒಪ್ಪಿಕೊಂಡಿದ್ದರು. ಗುಡಿಯ ಲಿಂಗವನ್ನು ಬಿಟ್ಟು, ಚಿಕ್ಕದಾದ ಶಿವಲಿಂಗವನ್ನು ತಮ್ಮ ಅಂಗಯ್ ಮೇಲೆ ಇಟ್ಟುಕೊಂಡು ಪೂಜಿಸತೊಡಗಿದ್ದರಿಂದ, ಅವರ ಮತ್ತು ಶಿವನ ನಡುವೆ ಪೂಜಾರಿಯ ಅಗತ್ಯವಿಲ್ಲದಂತಾಯಿತು. ಶಿವಶರಣಶರಣೆಯರು ಅಂಗಯ್ ಮೇಲಿಟ್ಟುಕೊಂಡು ಪೂಜಿಸುತ್ತಿದ್ದ ಇಲ್ಲವೇ ತಮ್ಮ ಕೊರಳಲ್ಲಿ ಕಟ್ಟಿಕೊಂಡಿದ್ದ ಶಿವಲಿಂಗ ಶಿವಶರಣಶರಣೆಯರ ಪಾಲಿಗೆ ಸಾಂಕೇತಿಕ ದೇವರು ಮಾತ್ರವಾಗಿತ್ತು.

ನಿಜಜೀವನದಲ್ಲಿ ಅವರ ಪಾಲಿನ ದೇವರು ಕಲ್ಲು, ಮಣ್ಣು, ಲೋಹ, ಮರದಿಂದ ಮಾಡಿದ ಮೂರ್ತಿಯಾಗಿರಲಿಲ್ಲ. ಸಹ ಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು

**ಉಂಟುಮಾಡುವಂತಹ ನಡೆನುಡಿಗಳನ್ನು ತಮ್ಮ ದೇವರೆಂದು ನಂಬಿದ್ದರು. ದೇವರನ್ನು ಪೂಜಿಸುವ ಮತ್ತು ದೇವರಿಗೆ ಕಾಣಿಕೆಯನ್ನು ಸಲ್ಲಿಸುವ ವ್ಯಕ್ತಿಗಳಲ್ಲಿ ಒಳ್ಳೆಯ ನಡೆನುಡಿಗಳು ಕಡ್ಡಾಯವಾಗಿ ಇರಲೇಬೇಕೆಂಬ ಮಾನದಂಡವನ್ನು ಹಾಕಿಕೊಂಡಿದ್ದರು.**

**ಒಳ್ಳೆಯ ನಡೆನುಡಿಗಳು ಎಂದರೆ "ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ ನಡೆನುಡಿಗಳನ್ನು ಹೊಂದಿರುವುದು".**

(ತನು=ಮಯ್/ದೇಹ/ಶರೀರ; ಕರಗು=ಗಟ್ಟಿಯಾದ ವಸ್ತುಗಳನ್ನು ನೀರು ಇಲ್ಲವೇ ಹಾಲು ಮುಂತಾದ ದ್ರವದಲ್ಲಿ ಹಾಕಿದಾಗ, ಅವು ನೆನೆದು ಒದ್ದೆಯಾಗಿ ಮೆದುವಾಗುವುದು ಇಲ್ಲವೇ ತನ್ನ ಆಕಾರವನ್ನೇ ಕಳೆದುಕೊಳ್ಳುವುದು; 'ತನು ಕರಗು' ಎಂಬ ನುಡಿಗಟ್ಟು "ಮಯ್ ಮುರಿದು ದುಡಿಮೆಯನ್ನು ಮಾಡುವುದು/ ವ್ಯಕ್ತಿಯು ತನ್ನ ಪಾಲಿನ ಕೆಲಸವನ್ನು ಒಲವು ನಲಿವುಗಳಿಂದ ಅಚ್ಚುಕಟ್ಟಾಗಿ ಮಾಡುವುದು" ಎಂಬ ತಿರುಳಿನಲ್ಲಿ ಬಳಕೆಯಾಗಿದೆ;

ತನು ಕರಗದವರು=ಮಯ್ಗಳ್ಳರು/ದೇಹವನ್ನು ದಂಡಿಸಿ ದುಡಿಯದವರು/ ತಮ್ಮ ಪಾಲಿನ ಕೆಲಸವನ್ನು ಒಲವು ನಲಿವುಗಳಿಂದ ಪ್ರಾಮಾಣಿಕವಾಗಿ ಮಾಡದವರು/ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡದವರು; ಮಜ್ಜನ+ಅನ್+ಒಲ್ಲೆ+ಅಯ್ಯಾ; ಮಜ್ಜನ=ಸ್ನಾನ/ಜಳಕ/ನೀರಿನಿಂದ ಮಯ್ಯನ್ನು ತೊಳೆಯುವುದು/ದೇವರ ವಿಗ್ರಹದ ಮೇಲೆ ನೀರು-ಹಾಲು-ಜೇನು ಮುಂತಾದ ದ್ರವಗಳನ್ನು ಎರೆದು ಮಾಡುವ ಆಚರಣೆ; ಅನ್=ಅನ್ನು; ಒಲ್+ಎ=ಒಲ್ಲೆ; ಒಲ್=ಒಪ್ಪು/ಸಮ್ಮತಿಸು/ಮೆಚ್ಚು/ಬಯಸು; ಒಲ್ಲೆ=ಒಪ್ಪುವುದಿಲ್ಲ/ಪಡೆಯುವುದಿಲ್ಲ/ ಸ್ವೀಕರಿಸುವುದಿಲ್ಲ; ಅಯ್ಯಾ=ಇತರರನ್ನು ಒಲವು ನಲಿವಿನಿಂದ ಕುರಿತು ಮಾತನಾಡುವಾಗ ಬಳಸುವ ಪದ;

ಮನ=ಮನಸ್ಸು; ಮನ ಕರಗದವರು=ಇತರರ ಸಂಕಟವನ್ನು ಕಂಡು ಮರುಕಗೊಂಡು ಅವರಿಗೆ ನೆರವಾಗದವರು/ಸಹಮಾನವರ ಹಸಿವು, ಬಡತನ, ನೋವನ್ನು ಕಂಡು ಕಾಣದಂತಿರುವವರು; ಪುಷ್ಪ+ಅನ್+ಒಲ್ಲೆ+ಅಯ್ಯಾ;

ಪುಷ್ಪ=ಹೂವು/ಕುಸುಮ; ಹದುಳ್+ಇಗ+ಅರ್+ಅಲ್ಲದ+ಅವರ್+ಅಲ್ಲಿ; ಹದುಳ್+ಇಗ; ಹದುಳು=ಒಲವು/ನಂಬಿಕೆ; ಹದುಳಿಗ=ನಂಬಿಕಸ್ತ/ಒಲವಿನಿಂದ ಕೂಡಿದ ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿ; ಹದುಳಿಗರಲ್ಲದವರು=ನಂಬಿಕೆಗೆ ಯೋಗ್ಯರಲ್ಲದವರು/ಒಳ್ಳೆಯ ನಡೆನುಡಿಯಿಲ್ಲದವರು; ಗಂಧ+ಅಕ್ಷತೆ+ ಅನ್+ಒಲ್ಲೆ+ಅಯ್ಯಾ; ಗಂಧ=ಚಂದನ/ಸುವಾಸನೆ/ಪರಿಮಳ; ಅಕ್ಷತೆ=ಅಕ್ಕಿಯ ಕಾಳು;

ಗಂಧಾಕ್ಷತೆ=ಚಂದನದ ಕೊರಡನ್ನು ನೀರಿನಲ್ಲಿ ತೆಯ್ದಾಗ ಬರುವ ಹಸಿಯೊಡನೆ ಕಲಸಿ ತಯಾರಿಸಿರುವ ಅಕ್ಕಿಯ ಕಾಳುಗಳು; ಅರಿವು=ತಿಳುವಳಿಕೆ/ಒಳ್ಳೆಯದು ಯಾವುದು–ಕೆಟ್ಟದ್ದು ಯಾವುದು ಎಂಬುದನ್ನು ಗುರುತಿಸಿ, ಒಳ್ಳೆಯ ಹಾದಿಯಲ್ಲಿ ನಡೆಯಬೇಕೆಂಬ ಎಚ್ಚರ; ಕಣ್+ತೆರೆಯದ+ಅವರ್+ಅಲ್ಲಿ; ತೆರೆ=ಬಿಚ್ಚು/ತೆಗೆ/ಅರಳು; ಕಣ್ದೆರೆ=ಕಣ್ಣನ್ನು ಬಿಡುವುದು/ಅರಳಿಸುವುದು.

ಕಣ್ದೆರೆ/ಕಣ್ಣನ್ನು ತೆರೆದು ನೋಡುವುದು ಎಂಬ ನುಡಿಗಟ್ಟು "ಒಳಿತನ್ನು ಕಾಣುವುದು/ಒಳ್ಳೆಯ ತಿಳಿವನ್ನು ಪಡೆಯುವುದು" ಎಂಬ ತಿರುಳಿನಲ್ಲಿ ಬಳಕೆಯಾಗಿದೆ; ಕಣ್ದೆರೆಯದವರು=ಒಳ್ಳೆಯ ತಿಳುವಳಿಕೆಯನ್ನು ಹೊಂದದಿರುವವರು/ಒಳ್ಳೆಯದು ಕೆಟ್ಟದ್ದರ ನಡುವಣ ವ್ಯತ್ಯಾಸವನ್ನು ತಿಳಿಯದೆ, ಕೆಟ್ಟ ನಡೆನುಡಿಗಳಿಂದ ಬಾಳುತ್ತಿರುವವರು; ಆರತಿ+ಅನ್+ಒಲ್ಲೆ+ಅಯ್ಯಾ; ಆರತಿ=ತಟ್ಟೆ ಇಲ್ಲವೇ ಇನ್ನಿತರ ಉಪಕರಣದಲ್ಲಿ ಅರಿಸಿನ, ಕುಂಕುಮ ಹೂವು ಮುಂತಾದ ವಸ್ತುಗಳನ್ನು ಇಟ್ಟುಕೊಂಡು ದೇವರ ಮುಂದೆ ಜ್ಯೋತಿಯನ್ನು ಬೆಳಗಿಸುತ್ತ ಮಾಡುವ ಪೂಜೆ;

ಭಾವ+ಶುದ್ಧ+ಇಲ್ಲದ+ಅವರ್+ಅಲ್ಲಿ; ಭಾವ=ಮನದಲ್ಲಿ ಮೂಡುವ ಒಳಮಿಡಿತಗಳು; ಶುದ್ಧ=ಒಳ್ಳೆಯ ರೀತಿಯಲ್ಲಿರುವುದು/ಸರಿಯಾಗಿರುವುದು/ತಪ್ಪಿಲ್ಲದಿರುವುದು/ಚೊಕ್ಕಟವಾಗಿರುವುದು/ಕೊಳಕಿಲ್ಲದಿರುವುದು; ಭಾವಶುದ್ಧವಿಲ್ಲದವರು=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕೆಂಬ ತುಡಿತವಿಲ್ಲದವರು/ಇತರರಿಗೆ ಕೇಡನ್ನು ಬಗೆಯುವ ಆಲೋಚನೆಗಳಿಂದ ಕೂಡಿದವರು; ಧೂಪ+ಅನ್+ಒಲ್ಲೆ+ಅಯ್ಯಾ; ಧೂಪ=ಹಾಲುಮಡ್ಡಿ/ಸಾಂಬ್ರಾಣಿ ಮುಂತಾದ ಸುವಾಸನೆಯ ಪುಡಿ. ಇದನ್ನು

ಕೆಂಡದ ಮೇಲೆ ಹಾಕಿದಾಗ ಪರಿಮಳದಿಂದ ಕೂಡಿದ ಹೊಗೆಯು ಎಲ್ಲಾ ಕಡೆ ಹರಡುತ್ತದೆ;

ಪರಿಣಾಮಿ+ಗಳ್+ಅಲ್ಲದ+ಅವರ್+ಅಲ್ಲಿ; ಪರಿಣಾಮಿ=ತಾಳ್ಮೆ/ಶಾಂತಿ/ ಸಮಚಿತ್ತದ ನಡೆನುಡಿಯಿಂದ ಸಹಮಾನವರಿಗೆ ಒಳಿತನ್ನು ಮಾಡುವವರು; ಪರಿಣಾಮಿಗಳಲ್ಲದವರು=ಉದ್ರೇಕ/ಆವೇಶದ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಹಾನಿಯನ್ನುಂಟು ಮಾಡುವವರು; ನೈವೇದ್ಯ+ಅನ್+ ಒಲ್ಲೆ+ಅಯ್ಯಾ; ನೈವೇದ್ಯ=ದೇವರ ವಿಗ್ರಹದ ಮುಂದೆ ಇಡುವ ಹಣ್ಣುಕಾಯಿ/ ಹಾಲು/ಬೇಯಿಸಿ ತಯಾರಿಸಿದ ಉಣಿಸು ತಿನಸುಗಳು;

ತ್ರಿಕರಣ=ದೇಹ-ಮನಸ್ಸು-ಮಾತು ಎಂಬ ಮೂರು ಅಂಗಗಳು; ಶುದ್ಧ+ಇಲ್ಲದ+ಅವರ್+ಅಲ್ಲಿ; ತ್ರಿಕರಣ ಶುದ್ಧವಿಲ್ಲದವರು=ಮನದಲ್ಲಿನ ಒಳಮಿಡಿತ, ಆಡುವ ಮಾತು ಮತ್ತು ಮಾಡುವ ಕೆಲಸದಲ್ಲಿ ಹೊಂದಾಣಿಕೆಯಿಲ್ಲದಿರುವವರು/ಆಲೋಚಿಸುವುದು ಒಂದು-ಆಡುವುದು ಮತ್ತೊಂದು-ಮಾಡುವುದು ಮಗದೊಂದು ಎಂಬ ವಂಚನೆಯ ನಡೆನುಡಿಯುಳ್ಳವರು/ಕಾಯಾ(ದೇಹ)-ವಾಚಾ(ಮಾತು)-ಮನಸಾ(ಮನಸ್ಸು) ಬೇರೆ ಬೇರೆಯಾಗಿ ನಡೆದುಕೊಳ್ಳುವವರು;

ತಾಂಬೂಲ+ಅನ್+ಒಲ್ಲೆ+ಅಯ್ಯಾ; ತಾಂಬೂಲ=ಅಡಕೆ, ಸುಣ್ಣ ಮುಂತಾದುವುಗಳ ಸಹಿತವಾದ ವೀಳೆಯದ ಎಲೆ; ಹೃದಯ=ಎದೆ; ಕಮಲ=ತಾವರೆ; 'ಹೃದಯಕಮಲ' ಎಂಬ ರೂಪಕವು 'ಮನಸ್ಸು' ಎಂಬ ತಿರುಳಿನಲ್ಲಿ ಬಳಕೆಯಾಗಿದೆ; ಅರಳದವರ್+ಅಲ್ಲಿ; ಅರಳು= ಬಿರಿಯುವುದು/ ಅಗಲವಾಗುವುದು/ವಿಕಾಸಗೊಳ್ಳುವುದು; ಹೃದಯಕಮಲ ಅರಳುವುದು=ಒಲವು ನಲಿವು ಕರುಣೆಯ ಒಳಮಿಡಿತಗಳಿಂದ ಕೂಡಿ ಸಹಮಾನವರ ಮತ್ತು ಸಮಾಜದ ಹಿತವನ್ನು ಬಯಸುವ ಮನಸ್ಸು/ಕಣ್ಣಮುಂದಿನ ಸಮಾಜದಲ್ಲಿ ಒಳ್ಳೆಯ ಕೆಲಸಗಳು ನಡೆದಾಗ, ಅದನ್ನು ಕಂಡು ಮುದಗೊಳ್ಳುವುದು;

ಹೃದಯಕಮಲ ಅರಳದವರು=ಮನದಲ್ಲಿ ಸಂಕುಚಿತವಾದ ಒಳಮಿಡಿತಗಳಿಂದ ಕೂಡಿದವರು/ಇತರರ ಒಳಿತಿನ ನಡೆನುಡಿಗಳನ್ನು ಕಂಡು ಕರುಬುವವರು;

ಇರಲ್+ಒಲ್ಲೆ+ಅಯ್ಯಾ; ಇರಲು=ನೆಲೆಸಲು/ವಾಸಿಸಲು; ಇರಲೊಲ್ಲೆ=ನೆಲೆಸಲು ಬಯಸುವುದಿಲ್ಲ; ಎನ್ನ್+ಅಲ್ಲಿ; ಎನ್ನ=ನನ್ನ;

ಎನ್ನಲ್ಲಿ=ನನ್ನಲ್ಲಿ/ನನ್ನ ನಡೆನುಡಿಯಲ್ಲಿ/ನನ್ನ ವ್ಯಕ್ತಿತ್ವದಲ್ಲಿ; ಏನ್+ಉಂಟು +ಎಂದು; ಏನ್=ಯಾವುದು; ಉಂಟು=ಇರುವುದು; ಎನ್ನಲ್ಲಿ ಏನುಂಟೆಂದು=ನನ್ನ ನಡೆನುಡಿಯಲ್ಲಿ ಯಾವ ಒಳ್ಳೆಯ ಗುಣವಿದೆಯೆಂದು ತಿಳಿದು; ಕರ+ಸ್ಥಲ+ಅನ್+ಇಂಬು+ಕೊಂಡೆ; ಕರ=ಕಯ್; ಸ್ಥಲ=ನೆಲೆ/ಜಾಗ; ಕರಸ್ಥಲ=ಅಂಗಯ್/ಹಸ್ತ; ಇಂಬು=ಎಡೆ/ಆಶ್ರಯ; ಇಂಬು+ಕೊಂಡೆ; ಇಂಬುಗೊಂಡೆ=ನೆಲೆಸಿದೆ; ಕರಸ್ಥಲವನಿಂಬುಗೊಂಡೆ=ನನ್ನ ಅಂಗಯ್ ಮೇಲೆ ನೀನು ನೆಲೆಸಿರುವೆ;

ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ="ನನ್ನ ನಡೆನುಡಿಯಲ್ಲಿ ಯಾವ ಒಳ್ಳೆಯ ಗುಣವನ್ನು ಕಂಡು ನನ್ನ ಅಂಗಯ್ ಅಲ್ಲಿ ನೀವು ನೆಲೆಸಿರುವಿರಿ" ಎಂದು ಅಕ್ಕಮಹಾದೇವಿಯು ಅಚ್ಚರಿ ಮತ್ತು ಆನಂದದಿಂದ ತನ್ನ ಮನದೊಡೆಯನಾದ ಚೆನ್ನಮಲ್ಲಿಕಾರ್ಜುನನನ್ನು ಕೇಳುತ್ತಿದ್ದಾಳೆ/ತಾನು ಒಲಿದಿರುವ ಚೆನ್ನಮಲ್ಲಿಕಾರ್ಜುನನ ಜತೆಯಲ್ಲಿ ಅಕ್ಕನು ಒಲವು ನಲಿವಿನ ನುಡಿಗಳನ್ನಾಡುತ್ತಿದ್ದಾಳೆ; ಹೇಳಾ=ಹೇಳುವಂತಹವನಾಗು/ಮಾರುತ್ತರವನ್ನು ನೀಡು; ಚೆನ್ನಮಲ್ಲಿಕಾರ್ಜುನ=ಅಕ್ಕಮಹಾದೇವಿಯ ಮೆಚ್ಚಿನ ದೇವರು/ಶಿವ/ ಅಕ್ಕಮಹಾದೇವಿಯು ರಚಿಸಿದ ವಚನಗಳ ಅಂಕಿತನಾಮ.



೮. ಧನದ ಮೇಲೆ ಬಂದವರೆಲ್ಲ
ಅನುಸರಿಗಳಲ್ಲದೆ
ಆಗುಮಾಡಬಂದವರಲ್ಲ

ಮನದ ಮೇಲೆ ಬಂದು ನಿಂದು
ಜರೆದು ನುಡಿದು
ಪಥವ ತೋರಬಲ್ಲಡಾತನೆ ಸಂಬಂಧಿ

ಹಾಗಲ್ಲದೆ ಅವರಿಚ್ಛೆಯ ನುಡಿದು
ತನ್ನುದರವ ಹೊರೆವ ಬಚ್ಚಣಿಗಳ
ಮಚ್ಚುವನೆ ಚೆನ್ನಮಲ್ಲಿಕಾರ್ಜುನ.

**ನಮ್ಮ ನಡೆನುಡಿಗಳಲ್ಲಿ ಕಂಡುಬರುವ ತಪ್ಪುಗಳನ್ನು ಕಂಡು ಆತಂಕಗೊಂಡು, "ಹಾಳಾಗಿ ಹೋಗುತ್ತಾರಲ್ಲ" ಎಂಬ ಸಂಕಟದಿಂದ ನೊಂದು, ಗದರಿಸಿ, ಬೆದರಿಸಿ, ಬಯ್ದು ತಿಳುವಳಿಕೆಯನ್ನು ಹೇಳಿ, ಜೀವನದಲ್ಲಿ ಒಳ್ಳೆಯ ದಾರಿಯಲ್ಲಿ ನಮ್ಮನ್ನು ನಡೆಯುವಂತೆ ಮಾಡುವವನೇ ನಿಜವಾದ ನೆಂಟ, ಗೆಳೆಯ, ಆತ್ಮೀಯ ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಧನ=ಹಣ/ಸಂಪತ್ತು/ಆಸ್ತಿಪಾಸ್ತಿ; ಅನುಸರಿ=ಹಿಂಬಾಲಿಸುವವನು/ಹೊಂದಿಕೊಂಡು ನಡೆವವನು; ಆಗುಮಾಡು=ನೆರವೇರಿಸು/ಈಡೇರಿಸು; ಧನದ ಮೇಲೆ ಬಂದವರು=ವ್ಯಕ್ತಿಯ ಬಳಿಯಿರುವ ಸಂಪತ್ತನ್ನು ನೋಡಿ, ಅದರಿಂದ ಅನುಕೂಲವನ್ನು ಪಡೆಯಬೇಕೆಂಬ ಉದ್ದೇಶದಿಂದ ಸಿರಿವಂತರ ಬಳಿಗೆ ಬಂದವರು/ಸಂಪತ್ತುಳ್ಳವರ ಬಳಿಗೆ ತಮ್ಮ ಹಿತಕ್ಕಾಗಿ ಬಂದವರು; ಅನುಸರಿಗಳಲ್ಲದೆ ಆಗುಮಾಡ ಬಂದವರಲ್ಲ=ಸಿರಿವಂತಿಕೆಯಲ್ಲಿ ಪಾಲನ್ನು ಪಡೆದು ಉಂಡು ತಿಂದು ಹೋಗುವವರೇ ಹೊರತು, ಒಳಿತನ್ನು ಮಾಡಲು ಬಂದವರಲ್ಲ;

ಮನ=ಮನಸ್ಸು; ಮನದ ಮೇಲೆ ಬಂದು=ವ್ಯಕ್ತಿಯ ನಡೆನುಡಿಗಳಲ್ಲಿ ಕಂಡುಬರುವ ತಪ್ಪು ಒಪ್ಪುಗಳನ್ನು ಒರೆಹಚ್ಚಿ ನೋಡಿ, ತಪ್ಪುಗಳನ್ನು ತಿದ್ದಿಕೊಳ್ಳುವಂತೆ ಅವನ ಮನಸ್ಸಿಗೆ ನಾಟುವಂತೆ ಹಿತನುಡಿಗಳನ್ನಾಡುವವರು;

ನಿಂದು=ನಿಂತುಕೊಂಡು/ಎಲ್ಲವನ್ನೂ ಚೆನ್ನಾಗಿ ಗಮನಿಸಿ; ಜರೆ=ನಿಂದಿಸು/ತೆಗಳು/ಬಯ್; ಜರೆದು ನುಡಿದು=ಕೆಟ್ಟ ನಡೆನುಡಿಗಳನ್ನು ಬಿಟ್ಟು ಒಳ್ಳೆಯ ರೀತಿಯಲ್ಲಿ ಬಾಳಬೇಕೆಂಬ ತಿಳುವಳಿಕೆಯನ್ನು ಹೇಳಿ; ಪಥ=ದಾರಿ/ಮಾರ್ಗ/ಹಾದಿ; ತೋರು=ಕಾಣಿಸು/ತಿಳಿಯುವಂತೆ ಮಾಡು; ಪಥವ ತೋರಬಲ್ಲಡೆ=ಜೀವನದಲ್ಲಿ ಒಳ್ಳೆಯ ರೀತಿಯಲ್ಲಿ ಬದುಕುವ ಹಾದಿಯನ್ನು ತೋರಿಸಲು ಶಕ್ತನಾದರೆ;

ಆತನೆ=ಅಂತಹ ವ್ಯಕ್ತಿಯೇ ಅಂದರೆ ಕೆಟ್ಟ ನಡೆನುಡಿಗಳನ್ನು ಕಟುನುಡಿಗಳಿಂದ ಅಲ್ಲಗಳೆದು, ಒಳಿತಿನ ಒಳಮಿಡಿತಗಳನ್ನು ಮನದಲ್ಲಿ ಮೂಡುವಂತೆ ಮಾಡಿ, ಜೀವನದಲ್ಲಿ ಒಳ್ಳೆಯ ನಡೆನುಡಿಗಳನ್ನು ಆಚರಣೆಗೆ ತರುವಂತೆ ಮಾಡುವವನೇ; ಸಂಬಂಧಿ=ನೆಂಟ/ಗೆಳೆಯ/ಆತ್ಮೀಯ;

ಹಾಗೆ+ಅಲ್ಲದೆ; ಹಾಗಲ್ಲದೆ=ಆ ರೀತಿಯಲ್ಲಿ ಮಾಡದೆ; ಅವರ್+ಇಚ್ಛೆಯ; ಅವರ=ಸಿರಿವಂತರ/ಸಂಪತ್ತುಳ್ಳವರ; ಇಚ್ಛೆ=ಬಯಕೆ/ಆಸೆ; ನುಡಿದು=ಹೇಳಿ; ತನ್ನ+ಉದರವ; ಉದರ=ಹೊಟ್ಟೆ/ಒಡಲು; ಹೊರೆ=ಕಾಪಾಡು/ಸಲಹು; ಬಚ್ಚಣೆ=ಸೋಗು/ತೋರಿಕೆಯ ನಟನೆ; ಬಚ್ಚಣಿ=ಮೋಸಗಾರ/ವಂಚಕ/ತೋರಿಕೆಯ ನಡೆನುಡಿಯವನು/ಒಳಗೊಂದು ಹೊರಗೊಂದು ಬಗೆಯ ನಡೆನುಡಿಯುಳ್ಳವನು;

ಅವರಿಚ್ಛೆಯ ನುಡಿದು ತನ್ನುದರವ ಹೊರವ ಬಚ್ಚಣಿಗಳು=ಸಿರಿವಂತರಲ್ಲಿ ಕಂಡುಬರುವ ಕೆಟ್ಟ ನಡೆನುಡಿಗಳನ್ನು ತಿದ್ದಿ ಸರಿಪಡಿಸಲು ಹೋಗದೆ, ಅವರ ಆಸೆ, ಬಯಕೆ, ಉದ್ದೇಶಗಳನ್ನೇ ದೊಡ್ಡದಾಗಿ ಹೊಗಳಿ ಕೊಂಡಾಡುತ್ತಾ, ಸಿರಿವಂತರ ತಾಳಕ್ಕೆ ತಕ್ಕಂತೆ ಕುಣಿಯುತ್ತಾ, ತಮ್ಮ ಹೊಟ್ಟೆಯ ಪಾಡನ್ನು ನೀಗಿಸಿಕೊಳ್ಳುವ ನಯವಂಚಕರು; ಮಚ್ಚು=ಮೆಚ್ಚು; ಮೆಚ್ಚು=ಒಲಿ/ಹೊಗಳು/ಕೊಂಡಾಡು/ಬಯಸು;

ಮಚ್ಚುವನೆ ಚೆನ್ನಮಲ್ಲಿಕಾರ್ಜುನ=ನಯವಂಚಕರನ್ನು ಚೆನ್ನಮಲ್ಲಿಕಾರ್ಜುನನು ಮೆಚ್ಚುವುದಿಲ್ಲ/ಕೆಟ್ಟ ನಡೆನುಡಿಯುಳ್ಳವರನ್ನು ದೇವರು ಒಪ್ಪಿಕೊಳ್ಳುವುದಿಲ್ಲ.

ದೇವರ ಮೆಚ್ಚುಗೆಗೆ ಪಾತ್ರನಾಗಬೇಕಾದರೆ ವ್ಯಕ್ತಿಯಲ್ಲಿ ಒಳ್ಳೆಯ ನಡೆನುಡಿಗಳು ಇರಬೇಕೆಂಬ ಇಂಗಿತವನ್ನು ಈ ನುಡಿಗಳು ಸೂಚಿಸುತ್ತವೆ.)



೯. ನಡೆಯದ ನುಡಿಗಡಣ ಮಾಡದ ಕಲಿತನ
ಚಿತ್ರದ ಸತಿಯ ಶೃಂಗಾರವದೇತಕ್ಕೆ ಪ್ರಯೋಜನ

ಎಲೆಯಿಲ್ಲದ ಮರನು ಜಲವಿಲ್ಲದ ನದಿಯು
ಗುಣಿಯಲ್ಲದ ಅವಗುಣಿಯ
ಸಂಗವದೇತಕ್ಕೆ ಪ್ರಯೋಜನ

ದಯವಿಲ್ಲದ ಧರ್ಮವು ಉಭಯವಿಲ್ಲದ ಭಕ್ತಿಯು
ನಯವಿಲ್ಲದ ಶಬ್ದವದೇತಕ್ಕೆ ಪ್ರಯೋಜನ
ಎನ್ನ ದೇವ ಚೆನ್ನಮಲ್ಲಿಕಾರ್ಜುನಾ.

**ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟು ಮಾಡುವಂತಹ ನಡೆನುಡಿಗಳನ್ನು ವ್ಯಕ್ತಿಯು ಹೊಂದದಿದ್ದರೆ, ಅಂತಹ ಬಾಳ್ವೆಯಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ಹೇಳಲಾಗಿದೆ.**

(ನಡೆ=ನಡವಳಿಕೆ/ಆಚರಣೆ/ವರ್ತನೆ/ಕೆಲಸ ಮಾಡುವಿಕೆ; ನುಡಿ=ಮಾತು/ಸೊಲ್ಲು; ಗಡಣ=ಗುಂಪು/ಸಮೂಹ/ರಾಶಿ;

ನಡೆಯದ ನುಡಿಗಡಣ=ಜೀವನದ ನಿತ್ಯ ವ್ಯವಹಾರಗಳಲ್ಲಿ ಇತರರಿಗೆ ಒಳಿತನ್ನು ಮಾಡದೆ, ಸತ್ಯ, ನೀತಿ, ನಿಯಮ, ಆದರ್ಶದ ಮಾತುಗಳನ್ನು ಮಾತ್ರ ಸದಾಕಾಲ ಆಡುತ್ತಿರುವುದು/ಕಾರ್ಯರೂಪಕ್ಕೆ ಬಾರದ ಮಾತುಗಳು/ಆಚರಿಸಿ ತೋರಿಸದ ನುಡಿಗಳು;

ಕಲಿತನ=ಪರಾಕ್ರಮ/ಶೂರತನ/ಕೆಚ್ಚು; ಮಾಡದ ಕಲಿತನ=ಕದನದಲ್ಲಿ ಇಲ್ಲವೇ ಆಪತ್ತು ಬಂದ ಸಮಯದಲ್ಲಿ ಕೆಚ್ಚಿನಿಂದ ಹೋರಾಡದೆ ಸುಮ್ಮನಿರುವುದು/ತಾನೊಬ್ಬ ಮಹಾಶೂರನೆಂದು ಬಡಾಯಿ ಕೊಚ್ಚಿಕೊಳ್ಳುತ್ತಾ, ಜೀವನರಂಗದ ಆಗುಹೋಗುಗಳಲ್ಲಿ ಯಾವುದೇ ಬಗೆಯ ಕೆಟ್ಟದ್ದನ್ನು ಹೋಗಲಾಡಿಸಲು ಹೋರಾಡದಿರುವುದು;

ಚಿತ್ರ=ಗೆರೆ/ಬಣ್ಣಗಳಿಂದ ರಚನೆಗೊಂಡಿರುವ ಆಕಾರ/ರೂಪ; ಸತಿ=ಹೆಣ್ಣು/ಹೆಂಗಸು; ಚಿತ್ರದ ಸತಿ=ಗೆರೆ/ಬಣ್ಣಗಳಿಂದ ಬಿಡಿಸಲಾಗಿರುವ ಹೆಣ್ಣಿನ ರೂಪ; ಶೃಂಗಾರ+ಅದು+ಏತಕ್ಕೆ; ಶೃಂಗಾರ=ಅಂದಚೆಂದದ ಅಲಂಕಾರ/ಸುಂದರವಾದ ಉಡುಗೆತೊಡುಗೆ/ನೋಡುವವರ ಕಣ್ಮನಗಳನ್ನು ಸೆಳೆಯುವಂತಹ ಚೆಲುವು; ಏತಕ್ಕೆ=ಯಾವುದಕ್ಕೆ; ಪ್ರಯೋಜನ=ವ್ಯಕ್ತಿಯ ಬದುಕಿಗೆ ನೆರವಾಗುವುದು/ಬೇಕಾಗುವುದು/ಒಳಿತನ್ನು ಉಂಟುಮಾಡುವುದು;

ಚಿತ್ರದ ಸತಿಯ ಶೃಂಗಾರವದೇತಕ್ಕೆ ಪ್ರಯೋಜನ=ಚಿತ್ರದಲ್ಲಿರುವ ಕಂಡುಬರುವ ಅಂದಚೆಂದದ ಹೆಣ್ಣನ್ನು ತನ್ನವಳನ್ನಾಗಿ ಪಡೆಯಲು ಆಗದು. ಏಕೆಂದರೆ ಚಿತ್ರದಲ್ಲಿ ಕಂಡುಬರುತ್ತಿರುವ ಹೆಣ್ಣು ಜೀವವಿಲ್ಲದ ಒಂದು ಜಡರೂಪ.

ಎಲೆ+ಇಲ್ಲದ; ಎಲೆ=ಮರಗಿಡಗಳಲ್ಲಿನ ದಳ/ಎಸಳು/ಪತ್ರೆ; ಜಲ+ಇಲ್ಲದ; ಜಲ=ನೀರು; ಗುಣಿ+ಅಲ್ಲದ; ಗುಣಿ=ಒಳ್ಳೆಯ ನಡೆನುಡಿಗಳುಳ್ಳವನು; ಗುಣಿಯಲ್ಲದ=ಗುಣವಂತನಲ್ಲದ/ನಿಜದ ನಡೆನುಡಿಗಳಿಲ್ಲದ; ಅವಗುಣಿ=ಕೆಟ್ಟ ನಡೆನುಡಿಯುಳ್ಳವನು/ನೀಚ ವ್ಯಕ್ತಿ; ಸಂಗ+ಅದು+ಏತಕ್ಕೆ; ಸಂಗ=ಸಹವಾಸ/ಒಡನಾಟ/ಗೆಳೆತನ;

ದಯೆ+ಇಲ್ಲದ; ದಯೆ=ಕರುಣೆ/ಅನುಕಂಪ/ಇತರರ ನೋವು ಸಂಕಟಗಳಿಗೆ ಮಿಡಿದು ನೆರವನ್ನು ನೀಡುವ ಮನಸ್ಸು; ಧರ್ಮ=ತನಗೆ ಒಳಿತನ್ನು ಬಯಸುವಂತೆಯೇ ಇತರರಿಗೂ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳು;

ದಯವಿಲ್ಲದ ಧರ್ಮ=ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವ ನಡೆನುಡಿ, ಆಚರಣೆ, ಸಂಪ್ರದಾಯ, ನಂಬಿಕೆ; ಉಭಯ+ಇಲ್ಲದ; ಉಭಯ=ಎರಡು; ಭಕ್ತಿ=ದೇವರ ಬಗೆಗಿನ ಒಲವು/ಒಳಿತಿನ ಕಡೆಗೆ ಮಯ್ ಮನಗಳನ್ನು ನೆಲೆಗೊಳಿಸುವಿಕೆ; ಉಭಯದಿಂದ ಕೂಡಿರುವ ಭಕ್ತಿ=ಅಂತರಂಗದ ಮನದಲ್ಲಿ ದೇವರ ಬಗ್ಗೆ ಒಲವು ಮತ್ತು ಬಹಿರಂಗದ ಸಾಮಾಜಿಕ ಜೀವನದಲ್ಲಿ ಸಹಮಾನವರಿಗೆ ಒಳಿತನ್ನು ಉಂಟು ಮಾಡುವಂತಹ ನಡೆನುಡಿಗಳು;

ಉಭಯವಿಲ್ಲದ ಭಕ್ತಿ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡದ ದೇವರ ಪೂಜೆ; ನಯ+ಇಲ್ಲದ; ನಯ=ಕೋಮಲವಾದ/ಇಂಪಾದ/ಒರಟಲ್ಲದ;

ಶಬ್ದ+ಅದು+ಏತಕ್ಕೆ; ಶಬ್ದ=ಮಾತು/ನುಡಿ; ನಯವಿಲ್ಲದ ಶಬ್ದ=ಕೇಳುಗರ ಮಯ್ ಮನಗಳನ್ನು ಗಾಸಿಗೊಳಿಸುವಂತಹ ಕೆಟ್ಟಮಾತು/ನಿಂದನೆಯ ನುಡಿ/ತೆಗಳಿಕೆಯ ಮಾತು;

"ದಯವಿಲ್ಲದ ಧರ್ಮ ಮತ್ತು ನಯವಿಲ್ಲದ ಶಬ್ದವದೇತಕ್ಕೆ ಪ್ರಯೋಜನ" ಎಂಬ ನುಡಿಗಳಲ್ಲಿ ನಾವು ಆಚರಿಸುವ 'ಧರ್ಮದಲ್ಲಿ' ಸಹಮಾನವರನ್ನು ಕರುಣೆಯಿಂದ ಕಾಣುವ ನಡೆನುಡಿಗಳಿರಬೇಕು ಮತ್ತು ನಾವು ಆಡುವ ಮಾತುಗಳಲ್ಲಿ ಕೇಳುಗರಿಗೆ ಅರಿವನ್ನು ಮತ್ತು ಮುದವನ್ನು ನೀಡುವ ಸಂಗತಿಗಳಿರಬೇಕೆಂಬ ಸೂಚನೆಯಿದೆ; ಎನ್ನ=ನನ್ನ; ಎನ್ನ ದೇವ ಚೆನ್ನಮಲ್ಲಿಕಾರ್ಜುನ=ನನ್ನ ನೆಚ್ಚಿನ ದೇವರಾದ ಚೆನ್ನಮಲ್ಲಿಕಾರ್ಜುನ.)



೧೦. ಪಂಚೇಂದ್ರಿಯಂಗಳೊಳಗೆ
ಒಂದಕ್ಕೆ ಪ್ರಿಯನಾದಡೆ ಸಾಲದೆ
ಸಪ್ತವ್ಯಸನಂಗಳೊಳಗೆ
ಒಂದಕ್ಕೆ ಪ್ರಿಯನಾದಡೆ ಸಾಲದೆ
ರತ್ನದ ಸಂಕಲೆಯಾದಡೇನು
ಬಂಧನ ಬಿಡುವುದೆ ಚೆನ್ನಮಲ್ಲಿಕಾರ್ಜುನಾ.

**ಮಾನವ ಜೀವಿಯ ಮಯ್ ಮನದಲ್ಲಿ ಮೂಡುವ ಕೆಟ್ಟ ಬಯಕೆ ಮತ್ತು ಚಟಗಳು ಅವನ ಇಡೀ ಬದುಕನ್ನೇ ಬಲಿತೆಗೆದುಕೊಳ್ಳುತ್ತವೆ ಎಂಬುದನ್ನು ತಿಳಿಸುತ್ತಾ, ವ್ಯಕ್ತಿಯು ತನ್ನ ಮಯ್ ಮನದ ಒಲವು ನಲಿವುಗಳಿಗೆ ಕಾರಣವಾಗಿರುವ ಪಂಚೇಂದ್ರಿಯಗಳನ್ನು ಹತೋಟಿಯಲ್ಲಿ ಇಟ್ಟುಕೊಂಡು, ಸಪ್ತವ್ಯಸನಗಳಿಂದ ದೂರವಾಗಿ ಬಾಳಬೇಕು ಎಂಬ ಇಂಗಿತವನ್ನು ಈ ವಚನದಲ್ಲಿ ಸೂಚಿಸಲಾಗಿದೆ.**

(ಪಂಚ+ಇಂದ್ರಿಯಂಗಳ+ಒಳಗೆ; ಪಂಚ=ಅಯ್ದು; ಇಂದ್ರಿಯ=ನೋಟ-ಶಬ್ದ-ಕಂಪು-ರುಚಿ-ಮುಟ್ಟುವಿಕೆಯ ಅರಿವನ್ನು ಪಡೆಯಲು ಕಾರಣವಾಗುವ ಅಂಗ; ಇಂದ್ರಿಯಂಗಳ=ಇಂದ್ರಿಯಗಳ; ಪಂಚೇಂದ್ರಿಯಗಳು=ಕಣ್ಣು-ಕಿವಿ-ಮೂಗು-ನಾಲಗೆ-ತೊಗಲು ಎಂಬ ಅಯ್ದು ಅಂಗಗಳು; ಒಳಗೆ=ಇವುಗಳಲ್ಲಿ; ಒಂದಕ್ಕೆ=ಒಂದು ಇಂದ್ರಿಯಕ್ಕೆ; ಪ್ರಿಯನು+ಆದಡೆ; ಪ್ರಿಯ=ಒಲವು/ಮಮತೆ/ಅಕ್ಕರೆ; ಆದಡೆ=ಆದರೆ;

ಒಂದಕ್ಕೆ ಪ್ರಿಯನಾದಡೆ=ಅಯ್ದು ಇಂದ್ರಿಯಗಳಲ್ಲಿ ಯಾವುದಾದರೂ ಒಂದು ಇಂದ್ರಿಯದ ಸೆಳತಕ್ಕೆ ಹೆಚ್ಚಾಗಿ ಸಿಲುಕಿದರೆ/ಒಳಗಾದರೆ; ಅಂದರೆ ಕಣ್ಣಿನ ಮೂಲಕ ಕೆಟ್ಟ ನೋಟಗಳನ್ನೇ ನೋಡುತ್ತಿರುವುದು/ಕಿವಿಯ ಮೂಲಕ ಕೆಟ್ಟ ಸುದ್ದಿಗಳನ್ನೇ ಕೇಳುತ್ತಿರುವುದು/ಮೂಗಿನ ಮೂಲಕ ಕೆಟ್ಟ ವಾಸನೆಯನ್ನೇ

ಮೂಸಿಸುತ್ತಿರುವುದು/ನಾಲಗೆಯ ಮೂಲಕ ಕೆಟ್ಟ ರುಚಿಯನ್ನೇ ಸವಿಯುತ್ತಿರುವುದು/ತೊಗಲಿನ ಮೂಲಕ ಕೆಟ್ಟದ್ದನ್ನೇ ಮುಟ್ಟಿ ಮುದಗೊಳ್ಳುತ್ತಿರುವುದು; ಸಾಲದೆ=ಸಾಕಲ್ಲವೇ;

ಒಂದಕ್ಕೆ ಪ್ರಿಯನಾದಡೆ ಸಾಲದೆ=ಒಂದು ಇಂದ್ರಿಯದ ಚಪಲತೆಗೆ ಗುರಿಯಾದರೂ ಸಾಕು, ಅಂತಹ ವ್ಯಕ್ತಿಯು ಸಾಮಾಜಿಕವಾಗಿ ಕೆಟ್ಟ ನಡೆನುಡಿಗಳಿಂದ ವರ್ತಿಸುತ್ತಾ, ತಾನೇ ತನ್ನ ಕಯ್ಯಾರ ತನ್ನ ಬದುಕನ್ನು ಹಾಳುಮಾಡಿಕೊಳ್ಳುತ್ತಾನೆ ಹಾಗೂ ತನ್ನನ್ನು ನಂಬಿದವರ ಬಾಳನ್ನು ನೋವು ಸಂಕಟಗಳಿಗೆ ದೂಡುತ್ತಾನೆ;

ಸಪ್ತ+ವ್ಯಸನಂಗಳ+ಒಳಗೆ; ಸಪ್ತ=ಏಳು; ವ್ಯಸನ=ಗೀಳು/ಚಟ; ವ್ಯಸನಂಗಳು=ವ್ಯಸನಗಳು;

ಸಪ್ತವ್ಯಸನಗಳು=ಏಳು ಬಗೆಯ ಚಟಗಳು- (೧) ಹಾದರ/ಹೆಣ್ಣುಗಂಡುಗಳ ಸಮಾಜ ಒಪ್ಪಿತವಲ್ಲದ ಕಾಮದ ನಂಟು (೨) ಜೂಜು/ಸಂಪತ್ತನ್ನು ಒಡ್ಡಿ ಆಡುವ ಆಟ (೩) ಬೇಟೆ/ಪ್ರಾಣಿಗಳನ್ನು ಮತ್ತು ಹಕ್ಕಿಗಳನ್ನು ಸೆರೆ ಹಿಡಿಯುವುದು, ಕೊಲ್ಲುವುದು (೪) ಕುಡಿತ/ಮಾದಕ ಪಾನೀಯಗಳ ಸೇವನೆ (೫) ಬಿರುನುಡಿ/ಬಯ್ಗುಳ/ಇತರರ ಮನಸ್ಸನ್ನು ನೋಯಿಸುವಂತೆ ಕೆಟ್ಟ ಮಾತುಗಳನ್ನಾಡುವುದು (೬) ದಂಡನೆ/ಪೀಡನೆ/ಕಿರುಕುಳ/ಇತರರ ಮಯ್ ಮನಗಳಿಗೆ ಪೆಟ್ಟನ್ನು ನೀಡಿ ಗಾಸಿಗೊಳಿಸುವಿಕೆ (೭) ಕಳ್ಳತನ/ಸಹಮಾನವರ ಮತ್ತು ಸಮಾಜದ ಆಸ್ತಿಪಾಸ್ತಿ/ಒಡವೆ ವಸ್ತು/ಹಣಕಾಸನ್ನು ದೋಚುವುದು/ ಲಪಟಾಯಿಸುವುದು;

ಸಪ್ತವ್ಯಸನಂಗಳೊಳಗೆ ಒಂದಕ್ಕೆ ಪ್ರಿಯನಾದಡೆ ಸಾಲದೆ=ಹಾದರ/ಜೂಜು/ ಬೇಟೆ/ಕುಡಿತ/ಬಿರುನುಡಿ/ದಂಡನೆ/ಕಳ್ಳತನವೆಂಬ ಈ ಏಳುಬಗೆಯ ಕೆಟ್ಟ ನಡೆನುಡಿಗಳಲ್ಲಿ ಯಾವುದಾದರೂ ಒಂದನ್ನು ಚಟವನ್ನಾಗಿ ಮಾಡಿಕೊಂಡರೆ ಸಾಕು, ಅಂತಹ ವ್ಯಕ್ತಿಯ ಬದುಕು ದುರಂತದಲ್ಲಿ ಕೊನೆಗೊಳ್ಳುತ್ತದೆ;

ರತ್ನ=ಬೆಲೆಬಾಳುವ ಹರಳು/ವಜ್ರ/ಮಣಿ; ಸಂಕಲೆ+ಆದಡೆ+ಏನು; ಸಂಕಲೆ=ಬೇಡಿ/ಕಬ್ಬಿಣದ ಸರಪಣಿ/ಕೋಳ; ಆದಡೆ+ಏನು; ಆದಡೇನು

=ಆಗಿದ್ದರೇನು; ಬಂಧನ=ಸೆರೆಗೆ ಒಳಗಾಗುವುದು/ಕಟ್ಟಿಗೆ ಸಿಲುಕುವುದು/ಹಿಡಿತಕ್ಕೆ ಗುರಿಯಾಗುವುದು; ಬಿಡುವುದೆ=ಹೋಗುವುದೆ;

ರತ್ನದ ಸಂಕಲೆಯಾದಡೇನು ಬಂಧನ ಬಿಡುವುದೆ=ವ್ಯಕ್ತಿಗೆ ತೊಡಿಸಿರುವ ಬೇಡಿಯು ರತ್ನದ ಮಣಿಗಳಿಂದ ಕಂಗೊಳಿಸುತ್ತಿದ್ದರೇನು, ಅದು ಅವನನ್ನು ಕಟ್ಟಿಹಾಕಿದೆಯಲ್ಲದೆ, ಅವನ ಬಿಡುಗಡೆಗೆ ನೆರವಾಗುವುದಿಲ್ಲ.

ಸಿರಿವಂತಿಕೆಯ ನೆಲೆಯಲ್ಲಿರುವ ವ್ಯಕ್ತಿಗಳು ಹಣವನ್ನು ಚೆಲ್ಲುತ್ತಾ ಬೆಳೆಸಿಕೊಂಡಿರುವ ಚಟಗಳು ಹೊರನೋಟಕ್ಕೆ ಅದ್ದೂರಿಯಾಗಿ/ಆಡಂಬರದಿಂದ ಕಂಗೊಳಿಸಿದರು, ಒಳಗೊಳಗೆ ಅವರನ್ನು ನಾಶ ಮಾಡುತ್ತಿರುತ್ತವೆ ಎಂಬ ಸಂಗತಿಯನ್ನು ಈ ರೂಪಕವು ಸೂಚಿಸುತ್ತದೆ.)



೧೧. ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದಡೆಂತಯ್ಯಾ
ಸಮುದ್ರದ ತಡಿಯಲೊಂದು ಮನೆಯ ಮಾಡಿ
ನೊರೆತೆರೆಗಳಿಗಂಜಿದಡೆಂತಯ್ಯಾ
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದಡೆಂತಯ್ಯಾ
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯಾ
ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದಡೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

ಯಾವುದೇ ಒಬ್ಬ ವ್ಯಕ್ತಿಯು "ತಾನು ಇಂತಹ ಕುಟುಂಬದಲ್ಲಿ ಇಲ್ಲವೇ ಇಂತಹ ಊರಿನಲ್ಲಿ ಹುಟ್ಟಬರಬೇಕು" ಎಂಬ ಉದ್ದೇಶವನ್ನು ಹೊಂದಿ ಈ ಜಗತ್ತಿಗೆ ಬಂದಿರುವುದಿಲ್ಲ. ಆದರೆ ಎಲ್ಲೋ ಒಂದು ಕಡೆ ಹುಟ್ಟಿದ ನಂತರ ಸಾಯುವ ತನಕ ಜೀವನದಲ್ಲಿ ಬರುವ ಎಡರುತೊಡರುಗಳನ್ನು ತಾನೇ ಎದುರಿಸಬೇಕಾಗುತ್ತದೆ. ಏಕೆಂದರೆ ನಿಸರ್ಗದಲ್ಲಿನ ಆಗುಹೋಗುಗಳು, ಮಾನವ ಸಮಾಜ ರೂಪಿಸಿಕೊಂಡಿರುವ ಸಂಪ್ರದಾಯ, ಆಚರಣೆ ಹಾಗೂ ಕಟ್ಟುಪಾಡುಗಳು ಮತ್ತು ಆಳುವ ಸರ್ಕಾರದ ಕಾನೂನು ಕಟ್ಟಲೆಗಳು ವ್ಯಕ್ತಿಯ ಮಯ್ ಮನದ ಮೇಲೆ ಬಹುಬಗೆಯಲ್ಲಿ ಪರಿಣಾಮವನ್ನು ಬೀರುತ್ತಿರುತ್ತವೆ.

ಇದರಿಂದಾಗಿ ಜೀವನದ ಉದ್ದಕ್ಕೂ ಒಂದಲ್ಲ ಒಂದು ಬಗೆಯ ಏರಿಳಿತಗಳಲ್ಲಿ, ತಾಕಲಾಟ ತೊಳಲಾಟಗಳಲ್ಲಿ ಮತ್ತು ಸೋಲು ಗೆಲುವುಗಳಲ್ಲಿ ಸಿಲುಕುವ ವ್ಯಕ್ತಿಯು ಎಂತಹ ಸನ್ನಿವೇಶಗಳಲ್ಲಿಯೂ ಕಂಗೆಡದೆ, ಎಚ್ಚರ ತಪ್ಪದೆ, ಬೀಗಿಬೆರೆಯದೆ ತನ್ನ ಬದುಕನ್ನು ಸಮಚಿತ್ತದಿಂದ ರೂಪಿಸಿಕೊಂಡು ಬಾಳಬೇಕಾದ ರೀತಿಯನ್ನು ಈ ವಚನದಲ್ಲಿ ಹೇಳಲಾಗಿದೆ.

(ಬೆಟ್ಟ=ಗಿರಿ/ಮಲೆ/ಕಲ್ಲುಬಂಡೆ ಮರಗಿಡಗಳಿಂದ ಕೂಡಿ ನೆಲಮಟ್ಟದಿಂದ

ಎತ್ತರೆತ್ತರವಾಗಿರುವ ಜಾಗ; ಮೇಲೆ+ಒಂದು; ಮನೆಯ ಮಾಡಿ=ಮನೆಯನ್ನು ಕಟ್ಟಿಕೊಂಡು ನೆಲೆಸಿರುವಾಗ; ಮೃಗ+ಗಳ್+ಇಗೆ+ಅಂಜಿದಡೆ+ಎಂತು+ಅಯ್ಯಾ; ಮೃಗ=ಪ್ರಾಣಿಗಳು, ಹಕ್ಕಿಗಳು, ಕೀಟಗಳು, ಜೀವಜಂತು; ಅಂಜು=ಹೆದರು/ಹಿಂಜರಿ/ಆತಂಕಪಡು; ಅಂಜಿದಡೆ=ಹೆದರಿಕೆಯಿಂದ ನಡುಗಿದರೆ/ಕಂಪಿಸಿದರೆ/ತಲ್ಲಣಿಸಿದರೆ; ಎಂತು=ಹೇಗೆ/ಏನು ತಾನೆ ಮಾಡುವುದು; ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ;

ಮೃಗಗಳಿಗಂಜಿದಡೆಂತಯ್ಯಾ=ಕಾಡು ಮೇಡುಗಳಿಂದ ಸುತ್ತುವರಿದಿರುವ ಬೆಟ್ಟದ ಮೇಲೆ ತಾನೇ ಕಟ್ಟಿಕೊಂಡ ಮನೆಯಲ್ಲಿ ನೆಲೆಸಿರುವಾಗ, ಅಲ್ಲಿನ ಪರಿಸರದಲ್ಲಿರುವ ಸಿಂಹ ಹುಲಿ ಚಿರತೆ ಆನೆ ಹಾವು ರಣಹದ್ದು ಮುಂತಾದ ಜೀವಿಗಳಿಂದ ಉಂಟಾಗುವ ಹಾನಿಯನ್ನು ನೆನೆನೆನೆದು ತಲ್ಲಣಗೊಳ್ಳುವುದರಿಂದ ಏನೂ ಪ್ರಯೋಜನವಿಲ್ಲ. ಏಕೆಂದರೆ ಈ ರೀತಿ ತಲ್ಲಣಗೊಳ್ಳುವುದರಿಂದ ಇತ್ತ ಬದುಕಲಾರದೆ ಅತ್ತ ಸಾಯಲಾರದೆ ಒದ್ದಾಡುವುದರಲ್ಲಿಯೇ ಜೀವನದ ಸಮಯವೆಲ್ಲವೂ ಕಳೆದುಹೋಗುತ್ತದೆ;

ಸಮುದ್ರ=ಕಡಲು/ಸಾಗರ; ತಡಿಯಲಿ+ಒಂದು; ತಡಿ=ದಡ/ದಂಡೆ/ತೀರ; ತಡಿಯಲಿ=ದಂಡೆಯಲ್ಲಿ/ಪಕ್ಕದಲ್ಲಿ/ಹತ್ತಿರದಲ್ಲಿ; ನೊರೆ+ತೆರೆ+ಗಳ್+ಇಗೆ+ಅಂಜಿದಡೆ+ಎಂತು+ಅಯ್ಯ; ನೊರೆ=ಸಾಗರದ ಅಲೆಗಳ ಬಡಿತದಿಂದ ಉಂಟಾಗುವ ಬೆಳ್ಳನೆಯ ನೀರಿನ ಕಣಗಳು; ತೆರೆ=ನೀರಿನ ಅಲೆ/ತರಂಗ;

ನೊರೆತೆರೆಗಳಿಗಂಜಿದಡೆಂತಯ್ಯಾ=ಗಾಳಿಯು ಬೀಸಿದಂತೆಲ್ಲಾ ಉಬ್ಬರವಿಳಿತಕ್ಕೆ ಒಳಗಾಗುವ ಕಡಲಿನ ಅಲೆಗಳು ದಡವನ್ನು ಅಪ್ಪಳಿಸುತ್ತಿರುವಾಗ ಕಡಲಂಚಿನ ಮನೆಯಲ್ಲಿನ ವ್ಯಕ್ತಿಗಳು “ಎಲ್ಲಿ ಕೊಚ್ಚಿಹೋಗುತ್ತೇವೆಯೋ” ಎಂಬ ಹೆದರಿಕೆಯಿಂದ ತತ್ತರಿಸುತ್ತಿದ್ದರೆ, ಅಂತಹ ನೆಮ್ಮದಿಗೆಟ್ಟ ಬದುಕಿನಿಂದ ಯಾವ ಪ್ರಯೋಜನವೂ ಇಲ್ಲ;

ಸಂತೆ+ಒಳಗೆ+ಒಂದು; ಸಂತೆ=ಸರಕುಗಳನ್ನು ಮಾರಲು/ಕೊಳ್ಳಲು ಜನರು ಜತೆಗೂಡುವ ಜಾಗ; ಶಬ್ದ=ದನಿ/ಸದ್ದು/ಸಪ್ಪಳ/ಗಲಾಟೆ/ಗದ್ದಲ; ನಾಚಿದಡೆ+ಎಂತು+ಅಯ್ಯಾ; ನಾಚು=ಹಿಂಜರಿಯುವುದು/ಹೆದರುವುದು/ಕುಗ್ಗುವುದು/ಮುದುಡಿಕೊಳ್ಳುವುದು; ನಾಚಿದೊಡೆ=ನಾಚಿಕೊಂಡರೆ;

ಶಬ್ದಕ್ಕೆ ನಾಚಿದಡೆಂತಯ್ಯಾ=ಸದ್ದುಗದ್ದಲಗಳಿಂದಲೇ ತುಂಬಿರುವ ಸಂತೆಯ ನಡುವೆ ಕಟ್ಟಿರುವ ಮನೆಯಲ್ಲಿದ್ದುಕೊಂಡು, ಸಂತೆಯಲ್ಲಿನ ಕೂಗಾಟ/ ಅರಚಾಟಗಳನ್ನು ಕೇಳಿ ಒದ್ದಾಡುವುದರಿಂದ ಯಾವ ಪ್ರಯೋಜನವೂ ಇಲ್ಲ; ಈ ಮೂರು ಸಂಗತಿಗಳನ್ನು ರೂಪಕವಾಗಿ ಬಳಸಿಕೊಂಡು ಜೀವನದಲ್ಲಿ ಬರುವ ಆಪತ್ತು, ನೋವು, ಸಂಕಟಗಳನ್ನು ನೇರವಾಗಿ ಎದುರಿಸಿ ಕೆಚ್ಚೆದೆಯಿಂದ ಬಾಳಬೇಕೆ ಹೊರತು, ಜೀವನದ ಸಮಸ್ಯೆಗಳಿಗೆ ಬೆನ್ನುಮಾಡಿ ಓಡಬಾರದು ಇಲ್ಲವೇ ಯಾವಾಗಲೂ ನರಳಬಾರದೆಂಬ ಸಂದೇಶವನ್ನು ಅಕ್ಕನು ನೀಡಿದ್ದಾಳೆ.

ಚೆನ್ನಮಲ್ಲಿಕಾರ್ಜುನದೇವ=ಅಕ್ಕನ ಒಲವಿನ ದೇವರು/ನೆಚ್ಚಿನ ನಲ್ಲ/ಶಿವ/ಈಶ್ವರ; ಕೇಳ್+ಅಯ್ಯಾ; ಕೇಳಯ್ಯಾ=ಕೇಳುವಂತಹವನಾಗು;

ಲೋಕದ+ಒಳಗೆ; ಲೋಕ=ಜಗತ್ತು/ಪ್ರಪಂಚ/ಸಮಾಜ/ಜನಸಮುದಾಯ; ಲೋಕದೊಳಗೆ ಹುಟ್ಟಿದ ಬಳಿಕ=ಲೋಕಜೀವನದಲ್ಲಿ ಜನರೊಡನೆ ವ್ಯವಹರಿಸುತ್ತಿರುವಾಗ/ಜನಸಮುದಾಯದೊಡನೆ ಬೆರೆತು ಬಾಳುತ್ತಿರುವಾಗ; ಸ್ತುತಿ=ಹೊಗಳಿಕೆ/ಮೆಚ್ಚುಗೆ; ನಿಂದೆ=ತೆಗಳಿಕೆ/ಕಡೆಗಣಿಸುವಿಕೆ/ಬಯ್ಯುವಿಕೆ; ಬಂದಡೆ=ಬಂದರೆ/ಒದಗಿದರೆ/ಕೇಳಿಬಂದರೆ; ಮನದಲ್ಲಿ=ಮನಸ್ಸಿನಲ್ಲಿ; ಕೋಪ=ಸಿಟ್ಟು/ಮುನಿಸು/ಆಕ್ರೋಶ; ತಾಳು=ಹೊಂದು/ಪಡೆ; ತಾಳದೆ=ಹೊಂದದೆ/ಪಡೆಯದೆ/ಒಳಗಾಗದೆ/ಈಡಾಗದೆ; ಸಮಾಧಾನಿ+ ಆಗಿರಬೇಕು; ಸಮಾಧಾನ=ಆತಂಕ ತಲ್ಲಣ ದುಗುಡಗಳಿಗೆ ಒಳಗಾಗದೆ ನೆಮ್ಮದಿಯಿಂದಿರುವುದು; ಸಮಾಧಾನಿ=ನೆಮ್ಮದಿಯಿಂದಿರುವ/ತಾಳ್ಮೆಯಿಂದಿರುವ ವ್ಯಕ್ತಿ;

ಜೀವನದ ಏಳುಬೀಳಿನ ಪ್ರಸಂಗಗಳಲ್ಲಿ ಕೇಳಿಬರುವ ಹೊಗಳಿಕೆಗೆ ಹಿಗ್ಗದೆ, ತೆಗಳಿಕೆಗೆ ಕುಗ್ಗದೆ, ಸೋಲು ಗೆಲುವುಗಳು ಮತ್ತು ಮಾನ ಅಪಮಾನಗಳು ಸಾಮಾಜಿಕ ಜೀವನದಲ್ಲಿ ಮಾನವರಿಗೆ ಬರುವ ವಾಸ್ತವಗಳೆಂಬುದನ್ನು ಅರಿತು ಸಮಚಿತ್ತದಿಂದ ಅಂದರೆ ಮನಸ್ಸಿನಲ್ಲಿ ಆತಂಕ, ತಲ್ಲಣ, ಕಳವಳ, ತಳಮಳ, ಉದ್ವೇಗ, ಅಹಂಕಾರದ ಒಳ ಮಿಡಿತಗಳಿಗೆ ಒಳಗಾಗದೆ ಬಾಳುವುದನ್ನು ಕಲಿಯಬೇಕು ಎಂಬುದನ್ನು "ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು" ಎಂಬ ನುಡಿಗಳು ಸೂಚಿಸುತ್ತಿವೆ.)



೧೨. ಹೆದರದಿರು ಮನವೆ ಬೆದರದಿರು ತನುವೆ
ನಿಜವನರಿತು ನಿಶ್ಚಿಂತನಾಗಿರು
ಫಲವಾದ ಮರನ ಕಲ್ಲಲಿ ಇಡುವುದೊಂದು ಕೋಟಿ
ಎಲವದ ಮರನ ಇಡುವರೊಬ್ಬರ ಕಾಣೆ
ಭಕ್ತಿಯುಳ್ಳವರ ಬಯ್ವರೊಂದು ಕೋಟಿ
ಭಕ್ತಿಯಿಲ್ಲದವರ ಬಯ್ವರೊಬ್ಬರ ಕಾಣೆ
ನಿಮ್ಮ ಶರಣರ ನುಡಿಯೆ ಎನಗೆ ಗತಿ ಸೋಪಾನ
ಚೆನ್ನಮಲ್ಲಿಕಾರ್ಜುನಾ.

**ಒಳ್ಳೆಯ ನಡೆನುಡಿಗಳಿಂದ ಕೂಡಿ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಲೆಂದು ದುಡಿಯುವ ವ್ಯಕ್ತಿಗಳ ಜೀವನದಲ್ಲಿ ಹೆಜ್ಜೆಹೆಜ್ಜೆಗೂ ನೋವಿನಿಂದ ನರಳುವ, ಕಡೆಗಣಿಸುವಿಕೆಗೆ ಗುರಿಯಾಗುವ, ಸುಳ್ಳು ಆರೋಪಕ್ಕೆ ಒಳಗಾಗುವಂತಹ ಅವಮಾನದ ಪ್ರಸಂಗಗಳು ಎದುರಾಗುತ್ತಲೇ ಇರುತ್ತವೆ. ಆದುದರಿಂದ ಜೀವನದಲ್ಲಿ ಬರುವ ಎಡರು ತೊಡರುಗಳಿಗೆ ಕುಗ್ಗದೆ ಕುಸಿಯದೆ ದಿಟ್ಟತನದಿಂದ ಒಳಿತಿನ ಹಾದಿಯಲ್ಲೇ ಮುನ್ನಡೆಯಬೇಕೆಂಬ ಇಂಗಿತವನ್ನು ಈ ವಚನ ಸೂಚಿಸುತ್ತದೆ.**

(ಹೆದರದೆ+ಇರು; ಹೆದರು=ಅಂಜು/ಹಿಂಜರಿ/ಹಿಮ್ಮೆಟ್ಟು; ಮನ=ಮನಸ್ಸು; ಬೆದರು=ಬೆಚ್ಚು/ಆತಂಕಗೊಳ್ಳು/ನಡುಗು/ತಲ್ಲಣಿಸು; ತನು=ಮಯ್/ದೇಹ/ಶರೀರ; ನಿಜ+ಅನ್+ಅರಿತು; ನಿಜ=ದಿಟ/ಸತ್ಯ/ವಾಸ್ತವ; ನಿಜವನ್=ನಿಜವನ್ನು; ಅರಿ=ತಿಳಿ/ಗೊತ್ತುಮಾಡಿಕೊಳ್ಳುವುದು; ಅರಿತು=ತಿಳಿದುಕೊಂಡು; ಅನ್=ಅನ್ನು; ನಿಶ್ಚಿಂತನ್+ಆಗಿ+ಇರು; ನಿಶ್ಚಿಂತೆ=ಚಿಂತೆಯಿಲ್ಲದಿರುವಿಕೆ/ನೆಮ್ಮದಿ; ನಿಶ್ಚಿಂತನಾಗಿರು=ಯಾವುದೇ ಬಗೆಯ ಆತಂಕ, ತಲ್ಲಣ, ನಿರಾಶೆಗೆ ಒಳಗಾಗದೆ ನೆಮ್ಮದಿಯಿಂದಿರು;

ಫಲ+ಆದ; ಫಲ=ಹಣ್ಣು/ಬೆಳೆ; ಫಲವಾದ ಮರನ=ರೆಂಬೆ ಕೊಂಬೆಗಳ ತುಂಬಾ ಹೂವು ಹೀಚುಕಾಯಿ ಹಣ್ಣುಗಳಿಂದ ಕಂಗೊಳಿಸುತ್ತಿರುವ ಮರವನ್ನು/ ಮಾನವರು ತಿನ್ನುವಂತಹ ಹಣ್ಣುಗಳನ್ನು ಬಿಟ್ಟಿರುವ ಮರವನ್ನು; ಕಲ್ಲಲಿ=ಕಲ್ಲಿನಲ್ಲಿ; ಇಡುವುದು+ಒಂದು; ಇಡು=ಹೊಡೆ/ಎಸೆ/ಮಡಗು; ಕಲ್ಲಲಿ ಇಡುವುದು =ಹಣ್ಣುಕಾಯಿಗಳನ್ನು ಉದುರಿಸಲೆಂದು ಕಲ್ಲನ್ನು ಎಸೆಯುವರು/ ಹೊಡೆಯುವರು; ಕೋಟಿ=ಒಂದು ನೂರು 'ಲಕ್ಷ'ವನ್ನು ಸೂಚಿಸುವ ಅಂಕಿ/ ಹೆಚ್ಚಿನ ಮಂದಿ;

ಫಲವಾದ ಮರನ ಕಲ್ಲಲಿ ಇಡುವುದೊಂದು ಕೋಟಿ=ಈ ಪ್ರಸಂಗವು ಒಂದು ರೂಪಕವಾಗಿ ಬಳಕೆಯಾಗಿದೆ. ಕುಟುಂಬದ ಮತ್ತು ಸಮಾಜದ ನೆಲೆಯಲ್ಲಿ ಇತರರ ಒಳಿತಿಗಾಗಿ ದುಡಿಯುವ ಇಲ್ಲವೇ ಇತರರ ಸಂಕಟಕ್ಕೆ ಮರುಗಿ ನೆರವನ್ನು ನೀಡುವ ವ್ಯಕ್ತಿಗಳನ್ನು ಎಲ್ಲರೂ ಕಿತ್ತು ತಿನ್ನತೊಡಗುತ್ತಾರೆ. ಒಳ್ಳೆಯವರ ಬಳಿ ಇರುವುದನ್ನೆಲ್ಲಾ ಪಡೆದುಕೊಂಡ ನಂತರ, ಅವರನ್ನೇ ಕಡೆಗಣಿಸಿ ನಿಂದಿಸಿ ದೂರತಳ್ಳುತ್ತಾರೆ ಎಂಬ ತಿರುಳಿನಲ್ಲಿ ಬಳಕೆಯಾಗಿದೆ.

ಎಲವದ ಮರ=ಬೂರಗ/ಬೂರಲ/ದೂದಿ ಮರ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಈ ಮರದಲ್ಲಿ ಬಿಡುವ ಕಾಯಿಯ ಒಳಗಡೆ ಅರಳೆಯ/ ಹತ್ತಿಯ ನೂಲಿನಂತಹ ಎಳೆಗಳಿರುತ್ತವೆ. ಎಲವದ ಕಾಯಿ/ಹಣ್ಣಿನಲ್ಲಿ ಯಾವುದೇ ಬಗೆಯ ರಸವಾಗಲಿ ಇಲ್ಲವೇ ರುಚಿಯಾಗಲಿ ಇರುವುದಿಲ್ಲ; ಇಡು+ಅರ್+ಒಬ್ಬರ; ಇಡುವರು=ಹೊಡೆಯುವವರು/ಕಲ್ಲನ್ನು ಎಸೆಯುವವರು; ಒಬ್ಬರ=ಒಬ್ಬ ವ್ಯಕ್ತಿಯನ್ನಾದರೂ; ಕಾಣ್+ಎ; ಕಾಣ್=ನೋಡು; ಕಾಣೆ=ನೋಡಿಲ್ಲ/ಕಂಡಿಲ್ಲ;

ಎಲವದ ಮರನ ಇಡುವರೊಬ್ಬರ ಕಾಣೆ=ಈ ಪ್ರಸಂಗವು ಒಂದು ರೂಪಕವಾಗಿ ಬಳಕೆಯಾಗಿದೆ. ಎಲವದ ಮರದ ಕಾಯಿ/ಹಣ್ಣುಗಳನ್ನು ಮಾನವರು ತಿನ್ನುವುದಿಲ್ಲ. ಆದುದರಿಂದ ತಮಗೆ ಉಪಯೋಗವಿಲ್ಲದ ಮರದ ಬಳಿಗೆ ಯಾರೊಬ್ಬರೂ ಹೋಗುವುದಿಲ್ಲ. ಅಂತೆಯೇ ಕುಟುಂಬದಲ್ಲಾಗಲಿ ಇಲ್ಲವೇ ಸಮಾಜದ ನೆಲೆಯಲ್ಲಾಗಲಿ ನೀಚರ, ಕೇಡಿಗಳ, ಸೋಂಬೇರಿಗಳ, ಇನ್ನೊಬ್ಬರ ನೋವಿಗೆ ಮಿಡಿಯದವರ ಬಳಿಗೆ ಯಾರೊಬ್ಬರೂ ಸುಳಿಯುವುದಿಲ್ಲ. ಅವರನ್ನು

ಯಾರೊಬ್ಬರೂ ಕಾಡುವುದಿಲ್ಲ, ಬೇಡುವುದಿಲ್ಲ, ಅವರ ತಂಟೆಗೆ ಹೋಗುವುದಿಲ್ಲ ಎಂಬ ತಿರುಳಿನಲ್ಲಿ ಬಳಕೆಯಾಗಿದೆ;

ಭಕ್ತಿ+ಉಳ್ಳವರ; ಭಕ್ತಿ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿ/ದೇವರ ಬಗೆಗಿನ ಒಲವು; ಉಳ್ಳವರು=ಹೊಂದಿರುವವರು; ಭಕ್ತಿಯುಳ್ಳವರ=ಒಳ್ಳೆಯ ನಡೆನುಡಿಯುಳ್ಳವರನ್ನು; ಬಯ್ವರ್+ಒಂದು ಕೋಟಿ; ಬಯ್=ತೆಗಳು/ನಿಂದಿಸು; ಬಯ್ವರ್=ನಿಂದಿಸುತ್ತಾರೆ/ತೆಗಳುತ್ತಾರೆ/ಕಡೆಗಣಿಸುತ್ತಾರೆ/ಅಲ್ಲಗಳೆಯುತ್ತಾರೆ; ಬಯ್ವರ್+ಒಬ್ಬರ ಕಾಣೆ;

ಶರಣ=ಶಿವನ ಬಗ್ಗೆ ಒಲವುಳ್ಳವನು/ಒಳ್ಳೆಯ ನಡೆನುಡಿಯಿಂದ ಬಾಳ್ವೆ ನಡೆಸುವುದನ್ನೇ ಶಿವನೆಂದು ತಿಳಿದವನು; ನುಡಿ=ಮಾತು; ಶಿವಶರಣರ ನುಡಿ=ಮಾನವ ಜೀವನದ ವಾಸ್ತವವನ್ನು ತಿಳಿಸುವ ವಚನಗಳು; ಎನಗೆ=ನನಗೆ; ಗತಿ=ದಾರಿ ತೋರುತ್ತವೆ/ಕಯ್ ಹಿಡಿದು ನಡೆಸುತ್ತವೆ; ಸೋಪಾನ=ಮೆಟ್ಟಿಲು/ಹಂತ;

ಶರಣರ ನುಡಿಯೆ ಎನಗೆ ಗತಿ ಸೋಪಾನ=ಶಿವಶರಣರ ನುಡಿಗಳು ನನ್ನ ಪಾಲಿಗೆ ಒಳ್ಳೆಯ ರೀತಿಯಲ್ಲಿ ಚಿಂತಿಸಲು ಮತ್ತು ಒಳ್ಳೆಯ ನಡೆನುಡಿಗಳಿಂದ ಬಾಳಲು ಆಸರೆಯಾಗಿವೆ.



# ಅಮುಗಿ ದೇವಯ್ಯ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಊರು | : | ಹುಟ್ಟಿದ ಊರು ಸೊನ್ನಲಿಗೆ/ ಸೊನ್ನಲಾಪುರ. ಅನಂತರ ಬಸವಣ್ಣನವರು ಇದ್ದ ಕಲ್ಯಾಣ ನಗರಕ್ಕೆ ಬಂದು ನೆಲೆಸಿದರು. |
| ಕಸುಬು | : | ನೆಯ್ಗೆ/ನೂಲಿನಿಂದ ಬಟ್ಟೆಯುನ್ನು ನೇಯುವುದು. |
| ದೊರೆತಿರುವ ವಚನಗಳು | : | ೩೧ |
| ವಚನಗಳ ಅಂಕಿತನಾಮ | : | ಸಿದ್ಧ ಸೋಮನಾಥಲಿಂಗ |

೧೩. ಜ್ಞಾನದಲರಿದಡೇನಯ್ಯ
ಕ್ರೀಯನಾಚರಿಸದನ್ನಕ್ಕ
ನೆನೆದ ಮಾತ್ರದಲಿ ಅಹುದೆ
ಕಾರ್ಯದಲಲ್ಲದೆ
ಕುರುಡ ಕಾಣ ಪಥವ
ಹೆಳವ ನಡೆಯಲರಿಯ
ಒಂದಿಲ್ಲದಿರ್ದಡೊಂದಾಗದು
ಜ್ಞಾನವಿಲ್ಲದಿರ್ದ ಕ್ರೀ ಜಡನು
ಕ್ರೀಯಿಲ್ಲದ ಜ್ಞಾನ ವಾಗ್ಜಾಲ ಭ್ರಾಂತು
ಇದು ಕಾರಣ
ಸಿದ್ಧ ಸೋಮನಾಥಲಿಂಗವ ಕೂಡುವ
ಶರಣಂಗೆ ಎರಡೂ ಬೇಕು.

ವ್ಯಕ್ತಿಯು ಜೀವನವನ್ನು ಚೆನ್ನಾಗಿ ರೂಪಿಸಿಕೊಂಡು ನೆಮ್ಮದಿಯಿಂದ ಬಾಳಬೇಕಾದರೆ ಒಳ್ಳೆಯ ತಿಳುವಳಿಕೆಯನ್ನು ತನ್ನದಾಗಿಸಿಕೊಳ್ಳುವ ಮತ್ತು ಒಳ್ಳೆಯ ಕಸುಬನ್ನು ಮಾಡುವ ಎರಡು ಗುಣಗಳನ್ನು ಹೊಂದಿರಬೇಕು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

ಒಳ್ಳೆಯ ತಿಳುವಳಿಕೆ ಎಂದರೆ "ಜೀವನದಲ್ಲಿ ಯಾವುದು ಸರಿ-ಯಾವುದು ತಪ್ಪು; ಯಾವುದನ್ನು ಮಾಡಬೇಕು-ಯಾವುದನ್ನು ಮಾಡಬಾರದು; ಯಾವುದು ನೀತಿ-ಯಾವುದು ಅನೀತಿ; ಯಾವುದು ದಿಟ-ಯಾವುದು ಸಟೆ ಎಂಬುದನ್ನು ವಿಂಗಡಿಸಿ ನೋಡಿ ಅರಿತುಕೊಳ್ಳುವುದು."

ಒಳ್ಳೆಯ ಕಸುಬು ಎಂದರೆ "ವ್ಯಕ್ತಿಯು ತನಗೆ ಒಳ್ಳೆಯದಾಗಲೆಂದು ಮಾಡುವ ಕೆಲಸವು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಿರಬೇಕು."

(ಜ್ಞಾನದಲ್+ಅರಿದಡೆ+ಏನ್+ಅಯ್ಯಾ; ಜ್ಞಾನ=ತಿಳುವಳಿಕೆ/ವಿದ್ಯೆ; ಜ್ಞಾನದಲ್=ತಿಳುವಳಿಕೆಯಲ್ಲಿ/ವಿದ್ಯೆಯಲ್ಲಿ; ಅರಿ=ಕಲಿ/ತಿಳಿ; ಅರಿದಡೆ=ಕಲಿತರೆ/ತಿಳಿದುಕೊಂಡರೆ; ಏನು=ಯಾವುದು/ಯಾವ ಪ್ರಯೋಜನ; ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ;

ಕ್ರೀ+ಅನ್+ ಆಚರಿಸದ+ಅನ್ನಕ್ಕ; ಕ್ರೀ=ಕ್ರಿಯೆ/ಕೆಲಸ/ಕಸಬು/ಕಾರ್ಯ; ಅನ್=ಅನ್ನು; ಕ್ರೀಯನ್=ಕೆಲಸವನ್ನು/ಕಸುಬನ್ನು/ಕಾರ್ಯವನ್ನು; ಆಚರಿಸು=ನಡೆಸು/ನೆರವೇರಿಸು/ಈಡೇರಿಸು; ಆಚರಿಸದ=ಮಾಡದ/ನಡೆಸದ/ನೆರವೇರಿಸದ; ಅನ್ನಕ್ಕ=ವರೆಗೆ/ತನಕ;

ಜ್ಞಾನದಲರಿದಡೇನಯ್ಯಾ ಕ್ರೀಯನಾಚರಿದನ್ನಕ್ಕ=ವ್ಯಕ್ತಿಯು ತಾನು ಕಲಿತ ವಿದ್ಯೆಯಿಂದ/ಪಡೆದ ತಿಳುವಳಿಕೆಯಿಂದ ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು, ಏಳಿಗೆಯನ್ನು, ನೆಮ್ಮದಿಯನ್ನು, ಆನಂದವನ್ನು ಉಂಟುಮಾಡುವ ಕೆಲಸದಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕು. ಒಳ್ಳೆಯ ರೀತಿಯಲ್ಲಿ ದುಡಿಮೆಯನ್ನು ಮಾಡದೆ ಕೇವಲ ವಿದ್ಯೆಯನ್ನು ಕಲಿಯುವುದರಿಂದ/ಅರಿವನ್ನು ಪಡೆದುಕೊಳ್ಳುವುದರಿಂದ ಯಾವ ಪ್ರಯೋಜನವೂ ಇಲ್ಲ;

ನೆನೆ=ಮನದಲ್ಲಿ ಕಲ್ಪಿಸಿಕೊಳ್ಳುವುದು/ಊಹಿಸಿಕೊಳ್ಳುವುದು/ಸ್ಮರಿಸಿಕೊಳ್ಳುವುದು; ಮಾತ್ರ=ಕೇವಲ/ಬರಿಯ; ಅಹುದು=ಆಗುವುದು/ನೆರವೇರುವುದು/ಈಡೇರುವುದು/ಉಂಟಾಗುವುದು; ಅಹುದೆ=ಈಡೇರುತ್ತದೆಯೇ/ನೆರವೇರುತ್ತದೆಯೇ/ಕಯ್ಗೂಡುತ್ತದೆಯೇ/ದೊರೆಯುತ್ತದೆಯೇ; ಕಾರ್ಯದಲ್+ಅಲ್ಲದೆ; ಕಾರ್ಯ=ಕೆಲಸ/ಕ್ರಿಯೆ/ಆಚರಣೆ; ಕಾರ್ಯದಲ್=ಕೆಲಸದಲ್ಲಿ/ಕಾರ್ಯದಲ್ಲಿ/ಕ್ರಿಯೆಯಲ್ಲಿ; ಅಲ್ಲದೆ=ಹಾಗೆ ಮಾಡದೆ;

ನೆನೆದ ಮಾತ್ರದಲಿ ಅಹುದೆ ಕಾರ್ಯದಲಲ್ಲದೆ= ವ್ಯಕ್ತಿಯು ತನ್ನ ಮನದಲ್ಲಿ ಕಲ್ಪಿಸಿಕೊಂಡ ಕಾರಣದಿಂದಲೇ ಜೀವನದಲ್ಲಿ ಬಯಸಿದ್ದೆಲ್ಲವೂ ಕಯ್ಗೂಡುವುದಿಲ್ಲ. ಮನದಲ್ಲಿ ಮೂಡಿದ ಆಸೆಯು ಈಡೇರಬೇಕಾದರೆ, ಅದಕ್ಕೆ ತಕ್ಕಂತೆ ಒಳ್ಳೆಯ ಕೆಲಸದಲ್ಲಿ ವ್ಯಕ್ತಿಯು ತನ್ನನ್ನು ತೊಡಗಿಸಿಕೊಂಡು ಬಯಸಿದ್ದನ್ನು ಪಡೆಯುವ ತನಕ ಎಡೆಬಿಡದೆ ಪ್ರಾಮಾಣಿಕವಾಗಿ ದುಡಿಯಬೇಕು;

ಕುರುಡ=ಕಣ್ಣುಗಳ ಮೂಲಕ ಏನನ್ನೂ ನೋಡಲಾಗದವನು/ಕಣ್ಣಿನ ದಿಟ್ಟಿ ಇಲ್ಲದವನು; ಕಾಣ್=ನೋಡು; ಕಾಣ=ನೋಡನು/ನೋಡುವುದಕ್ಕೆ ಆಗುವುದಿಲ್ಲ; ಪಥ=ದಾರಿ/ಮಾರ್‍ಗ/ಹಾದಿ; ಹೆಳವ=ಕಾಲಿಲ್ಲದವನು/ಕಾಲುಗಳಲ್ಲಿ ನಡೆಯಲು ಬೇಕಾದ ಕಸುವು ಇಲ್ಲದವನು; ನಡೆ+ಅಲ್+ಅರಿಯ; ನಡೆ=ಚಲಿಸು/ಮುಂದೆ ಸಾಗು; ನಡೆಯಲ್=ನಡೆದುಕೊಂಡು ಹೋಗಲು/ಅಡಿಗಳನ್ನಿಟ್ಟು ಮುಂದೆ ಮುಂದೆ ಸಾಗಲು; ಅರಿಯ=ತಿಳಿಯನು/ಕಸುವು ಇಲ್ಲದವನು;

ಕುರುಡ ಕಾಣ ಪಥವ ಹೆಳವ ನಡೆಯಲರಿಯ=ಕುರುಡನು ತಾನು ಸಾಗಿಹೋಗ ಬೇಕಾಗಿರುವ ದಾರಿಯನ್ನು ಕಾಣಲಾರ. ಹೆಳವನು ದಾರಿಯಲ್ಲಿ ನಡೆಯಲಾರ. ಆದುದರಿಂದ ಕುರುಡನ ಹೆಗಲ ಮೇಲೆ ಹೆಳವನು ಕುಳಿತುಕೊಂಡು, ಸಾಗಬೇಕಾದ ಹಾದಿಯ ಜಾಡನ್ನು ಕುರುಡನಿಗೆ ಹೇಳುತ್ತ, ಇಬ್ಬರೂ ಒಬ್ಬರಿಗೊಬ್ಬರು ನೆರವಾದಾಗ ಮಾತ್ರ ತಲುಪಬೇಕಾದ ಜಾಗವನ್ನು ಇಬ್ಬರೂ ಮುಟ್ಟಲು ಆಗುತ್ತದೆ; ಕುರುಡ ಮತ್ತು ಹೆಳವನು ಜತೆಗೂಡಿ ಸಾಗಬೇಕಾದ ಈ ಪ್ರಸಂಗವನ್ನು ವಚನಕಾರನು ಅರಿವು ಮತ್ತು ಕ್ರಿಯೆ ಜತೆಗೂಡಿದಾಗ ಮಾತ್ರ ವ್ಯಕ್ತಿಯು ಜೀವನದಲ್ಲಿ ಮುನ್ನಡೆಯಲು ಆಗುತ್ತದೆಯೆಂಬುದನ್ನು ನಿರೂಪಿಸಲು ಒಂದು ರೂಪಕವಾಗಿ ಬಳಸಿಕೊಂಡಿದ್ದಾನೆ.

ಒಂದು+ಇಲ್ಲದೆ+ಇರ್ದೊಡೆ+ಒಂದು+ಆಗದು; ಇರ್ದೊಡೆ=ಇದ್ದರೆ; ಇಲ್ಲದಿರ್ದೊಡೆ=ಇಲ್ಲದಿದ್ದರೆ; ಆಗು=ದೊರಕುವುದು/ಹೊಂದುವುದು/ ಪಡೆಯುವುದು; ಆಗದು=ದೊರಕುವುದಿಲ್ಲ/ಹೊಂದುವುದಿಲ್ಲ/ಸಿಗುವುದಿಲ್ಲ;

ಒಂದಿಲ್ಲದಿರ್ದೊಡೊಂದಾಗದು=ಎರಡರಲ್ಲಿ ಅಂದರೆ ಅರಿವು ಮತ್ತು ಕ್ರಿಯೆಗಳಲ್ಲಿ ಯಾವುದೇ ಒಂದು ಇಲ್ಲದಿದ್ದರೆ, ಜೀವನದಲ್ಲಿ ಒಳ್ಳೆಯದನ್ನು ಮಾಡಲಾಗುವುದಿಲ್ಲ/ ಪಡೆಯಲಾಗುವುದಿಲ್ಲ;

ಜ್ಞಾನ+ಇಲ್ಲದೆ+ಇರ್ದ; ಇರ್ದ=ಇರುವ; ಜಡ=ಚಟುವಟಿಕೆಯಿಲ್ಲದ್ದು/ ಉಸಿರಿಲ್ಲದ್ದು/ಚೇತನವಿಲ್ಲದ್ದು; ಜ್ಞಾನವಿಲ್ಲದಿರ್ದ ಕ್ರೀ ಜಡನು=ಅರಿವನ್ನು/ ತಿಳುವಳಿಕೆಯನ್ನು ಪಡೆಯದೆ ಮಾಡುವ ಕೆಲಸದಿಂದ ಯಾರಿಗೂ ಒಳಿತಾಗುವುದಿಲ್ಲ; ಕ್ರೀ+ಇಲ್ಲದ; ವಾಕ್=ನುಡಿ/ಮಾತು/ಸೊಲ್ಲು; ಜಾಲ=ಹಕ್ಕಿ

ಮೀನು ಮುಂತಾದುವನ್ನು ಹಿಡಿಯಲೆಂದು ನೂಲಿನಿಂದ ಹೆಣೆದಿರುವ ವಸ್ತು/ಬಲೆ; ವಾಗ್ಜಾಲ=ಮಾತಿನ ಬಲೆ/ಮಾತಿನ ಮೋಡಿಯಿಂದ ಜನರನ್ನು ಮರುಳುಗೊಳಿಸುವುದು/ವಂಚಿಸುವುದು/ವಶಪಡಿಸಿಕೊಳ್ಳುವುದು; ಭ್ರಾಂತು=ತಪ್ಪು ತಿಳುವಳಿಕೆ/ಇಲ್ಲದ್ದನ್ನು ಇದೆಯೆಂದು–ಇರುವುದನ್ನು ಇಲ್ಲವೆಂದು ನಂಬಿರುವುದು;

ಕ್ರೀಯಿಲ್ಲದ ಜ್ಞಾನ ವಾಗ್ಜಾಲ ಭ್ರಾಂತು=ಮಾನವ ಸಮುದಾಯ ಉಳಿದು ಬೆಳೆದು ಬಾಳುವುದಕ್ಕೆ ಅಗತ್ಯವಾದ ಕೆಲಸವನ್ನು ಮಾಡದೆ, ಮಾತನ್ನ ಸೊಗಸಾಗಿ ಆಡುವುದರಿಂದಲೇ ಒಳಿತನ್ನು ಮಾಡುತ್ತೇನೆ ಎಂಬುದೊಂದು ತಪ್ಪು ತಿಳುವಳಿಕೆ. ಅಂದರೆ ಕೇವಲ ಮಾತುಗಾರಿಕೆ/ಮಾತಿನ ಚತುರತೆ/ಮಾತಿನ ಮೋಡಿಯಿಂದಲೇ ಜೀವನದಲ್ಲಿ ಏಳಿಗೆಯನ್ನು ಮತ್ತು ನೆಮ್ಮದಿಯನ್ನು ಪಡೆಯಲಾಗುವುದಿಲ್ಲ;

ಕಾರಣ=ನಿಮಿತ್ತ/ಉದ್ದೇಶ/ಸಲುವಾಗಿ; ಇದು ಕಾರಣ=ಈ ರೀತಿ ಅರಿವು ಮತ್ತು ಕ್ರಿಯೆಗಳೆರಡೂ ಜೀವನಕ್ಕೆ ತುಂಬಾ ಅಗತ್ಯವಾದುದರಿಂದ; ಸಿದ್ಧ ಸೋಮನಾಥಲಿಂಗ=ಶಿವ/ಈಶ್ವರ/ದೇವರ ಹೆಸರು/ಅಮುಗಿದೇವಯ್ಯನ ವಚನಗಳ ಅಂಕಿತನಾಮ; ಕೂಡು=ಸೇರು/ಜತೆಯಾಗು; ಶರಣಂಗೆ=ಶರಣನಿಗೆ; ಶರಣ=ಒಳ್ಳೆಯ ನಡೆನುಡಿಗಳಿಂದ ಶಿವನನ್ನು ಪೂಜಿಸುವವನು;

ಸಿದ್ಧ ಸೋಮನಾಥಲಿಂಗವ ಕೂಡುವ ಶರಣಂಗೆ ಎರಡೂ ಬೇಕು=ದೇವರನ್ನು ಒಲಿಸಿಕೊಳ್ಳುವ ಶಿವಶರಣನು ತನ್ನ ಜೀವನದ ಉದ್ದಕ್ಕೂ ಒಳ್ಳೆಯ ಅರಿವನ್ನು ಹೊಂದುವ ಮತ್ತು ಒಳ್ಳೆಯ ದುಡಿಮೆಯನ್ನು ಮಾಡುವ ಎರಡು ಗುಣಗಳನ್ನು ಹೊಂದಿರಬೇಕು.



# ಅಮುಗೆ ರಾಯಮ್ಮ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಊರು | : | ಸೊನ್ನಲಾಪುರ |
| ಗಂಡ | : | ಅಮುಗೆ ದೇವಯ್ಯ |
| ಕಸುಬು | : | ನೆಯ್ಗೆಯ ಕಾಯಕ |
| ದೊರೆತಿರುವ ವಚನಗಳು | : | ೧೧೬ |
| ವಚನಗಳ ಅಂಕಿತನಾಮ | : | ಅಮುಗೇಶ್ವರ/ಅಮುಗೇಶ್ವರ ಲಿಂಗ |

೧೪. ಎನ್ನ ಕಣ್ಣೊಳಗಣ ಕಟ್ಟಿಗೆಯ
ಮುರಿವವರನಾರನೂ ಕಾಣೆ
ಎನ್ನ ಕಾಲೊಳಗಣ ಮುಳ್ಳ
ತೆಗೆವವರನಾರನೂ ಕಾಣೆ
ಎನ್ನ ಅಂಗದಲ್ಲಿಪ್ಪ ಅಹಂಕಾರವ
ಸುಡುವವರನಾರನೂ ಕಾಣೆ
ಎನ್ನ ಮನದಲ್ಲಿಪ್ಪ ಮಾಯಾ ಪ್ರಪಂಚುವ
ಕೆಡಿಸುವವರನಾರನೂ ಕಾಣೆನಯ್ಯಾ
ಆದ್ಯರ ವೇದ್ಯರ ವಚನಗಳಿಂದ
ಅರಿದೆವೆಂಬರು ಅರಿಯಲಾರರು ನೋಡಾ
ಎನ್ನ ಕಣ್ಣೊಳಗಣ ಕಟ್ಟಿಗೆಯ
ನಾನೆ ಮುರಿಯಬೇಕು
ಎನ್ನ ಕಾಲೊಳಗಣ ಮುಳ್ಳ
ನಾನೆ ತೆಗೆಯಬೇಕು
ಎನ್ನ ಅಂಗದಲ್ಲಿಪ್ಪ ಅಹಂಕಾರವ
ನಾನೆ ಸುಡಬೇಕು
ಎನ್ನ ಮನದಲ್ಲಿಪ್ಪ ಮಾಯಾಪ್ರಪಂಚವ
ನಾನೆ ಕಳೆಯಬೇಕು
ಅಮುಗೇಶ್ವರಲಿಂಗವ ನಾನೆ ಅರಿಯಬೇಕು.

**ಪ್ರತಿಯೊಬ್ಬ ವ್ಯಕ್ತಿಯು ತನ್ನ ಜೀವನದಲ್ಲಿ ಬರುವ ಎಡರು ತೊಡರುಗಳನ್ನು ತಾನೇ ಎದುರಿಸಿ; ತನ್ನನ್ನು ಕಾಡುವ ನೋವು, ಸಂಕಟ, ಆಪತ್ತನ್ನು ತಾನೇ ನಿವಾರಿಸಿಕೊಂಡು; ತನ್ನ ಮಯ್ ಮನದಲ್ಲಿ ತುಡಿಯುವ ಒಳಮಿಡಿತಗಳನ್ನು ತಾನೇ ಹತೋಟಿಯಲ್ಲಿಟ್ಟುಕೊಂಡು; ತನ್ನ ವ್ಯಕ್ತಿತ್ವವನ್ನು ಒಳ್ಳೆಯ ರೀತಿಯಲ್ಲಿ ರೂಪಿಸಿಕೊಳ್ಳುವ ಹೊಣೆಗಾರಿಕೆಯನ್ನು ತಾನೇ ಹೊರಬೇಕೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಎನ್ನ=ನನ್ನ; ಕಣ್ಣು+ಒಳಗಣ; ಒಳಗಣ=ಒಳಗಿರುವ/ಒಳಗೆ ಚುಚ್ಚಿಕೊಂಡಿರುವ; ಕಟ್ಟಿಗೆ=ಮರದ ತೆಳ್ಳಗಿನ ಹಾಗೂ ಚಿಕ್ಕದಾದ ಚೂರು/ಸಿವುರು/ಚೆಕ್ಕೆ; ಮುರಿವ+ಅವರನ್+ಆರನೂ; ಮುರಿ=ಕೀಳು/ಈಚೆಗೆ ತೆಗೆ; ಆರು=ಯಾರು; ಆರನೂ=ಯಾರೊಬ್ಬರನ್ನೂ; ಕಾಣ್+ಎ; ಕಾಣು=ನೋಡು; ಕಾಣೆ=ನೋಡಿಲ್ಲ/ ಕಂಡಿಲ್ಲ;

ಕಾಲ್+ಒಳಗಣ; ಕಾಲು=ಅಡಿ/ಪಾದ; ಕಾಲೊಳಗಣ=ಪಾದಕ್ಕೆ ಹೊಕ್ಕಿಕೊಂಡಿರುವ; ಮುಳ್ಳು+ಅ; ಮುಳ್ಳು=ಹರಿತವಾದ ಮೊನೆಯುಳ್ಳ ವಸ್ತು; ಮುಳ್ಳ=ಮುಳ್ಳನ್ನು; ತೆಗೆವ+ಅವರನ್+ಆರನೂ; ತೆಗೆ=ಈಚೆಗೆ ಕೀಳು/ಹೊರಕ್ಕೆ ಬರುವಂತೆ ಮಾಡು; ತೆಗೆವವರನ್=ತೆಗೆಯುವವರನ್ನು;

ಅಂಗ+ಅಲ್ಲಿ+ಇಪ್ಪ; ಅಂಗ=ದೇಹ/ಶರೀರ/ಮಯ್; ಇಪ್ಪ=ಇರುವ/ ನೆಲೆಗೊಂಡಿರುವ; ಅಹಂಕಾರ=ಎಲ್ಲವೂ ನನ್ನಿಂದಲೇ ನಡೆಯುತ್ತಿದೆ/ನಾನೇ ಎಲ್ಲರಿಗಿಂತ ಮೇಲು ಎಂಬ ಒಳಮಿಡಿತ/ನಾನತ್ವ/ಮಯ್ಯಿನ ಅಂದ ಮತ್ತು ಕಸುವು, ಕಲಿತ ವಿದ್ಯೆ, ಗಳಿಸಿದ ಸಂಪತ್ತು, ಪಡೆದಿರುವ ಗದ್ದುಗೆ, ಸಮಾಜದಲ್ಲಿರುವ ಜಾತಿಮತಗಳ ನೆಲೆಯಲ್ಲಿ ತಾನೇ ಇತರರಿಗಿಂತ ದೊಡ್ಡವನು ಎಂಬ ಸೊಕ್ಕಿನ ನಡೆನುಡಿ; ಸುಡುವ+ಅವರನ್+ಆರನೂ; ಸುಡು=ಬೆಂಕಿಯಲ್ಲಿ ಬೇಯಿಸು/ನಾಶಪಡಿಸು/ಇಲ್ಲದಂತೆ ಮಾಡು; ಸುಡುವವರನ್=ಇಲ್ಲದಂತೆ ಮಾಡುವವರನ್ನು;

ಮನ+ಅಲ್ಲಿ+ಇಪ್ಪ; ಮನ=ಮನಸ್ಸು; ಮನದಲ್ಲಿ=ಮನಸ್ಸಿನಲ್ಲಿ/ಮನದೊಳಗೆ; ಮಾಯಾ=ಮಾಯೆಯಿಂದ ಕೂಡಿದ; ಮಾಯೆ=ಮಯ್ ಮನಗಳಲ್ಲಿ

ಬಯಕೆಗಳನ್ನು ಕೆರಳಿಸಿ, ತಮ್ಮತ್ತ ಸೆಳೆಯುವಂತಹ ವಸ್ತು, ಜೀವಿ, ಸಂಗತಿಗಳು; ಪ್ರಪಂಚು=ಬದುಕು/ಸಂಸಾರ/ಜೀವನ; ಪ್ರಪಂಚುವ=ಪ್ರಪಂಚವನ್ನು/ಬದುಕನ್ನು/ಜೀವನವನ್ನು;

ಮಾಯಾ ಪ್ರಪಂಚ=ಮಾನವ ಜೀವಿಗಳ ಮಯ್ ಮನದಲ್ಲಿ ಬಗೆಬಗೆಯಾದ ವ್ಯಾಮೋಹಗಳನ್ನು ಉಂಟುಮಾಡಿ ಕಾಮನೆಗಳನ್ನು ಕೆರಳಿಸಿ, ತೊಳಲಾಡುವಂತೆ ಮಾಡುವ ವಸ್ತು, ಜೀವಿ, ಸಂಗತಿಗಳಿಂದ ತುಂಬಿರುವ ಜಗತ್ತು/ಬದುಕು/ಜೀವನ; ಕೆಡಿಸುವ+ಅವರನ್+ಆರನೂ; ಕೆಡಿಸು= ನಾಶಗೊಳಿಸು/ಅಳಿಸಿಹಾಕು/ಇಲ್ಲದಂತೆ ಮಾಡು; ಕಾಣೆನ್+ಅಂಯ್ಯಾ; ಕೆಡಿಸುವವರನ್=ಹೋಗಲಾಡಿಸುವವರನ್ನು; ಕಾಣೆನು=ನೋಡಿಲ್ಲ/ಕಂಡಿಲ್ಲ; ಅಯ್ಯಾ=ವ್ಯಕ್ತಿಗಳೊಡನೆ ಮಾತನಾಡುವಾಗ ಒಲವು ನಲಿವಿನ ಸೂಚಕವಾಗಿ ಬಳಸುವ ಪದ;

ಆದ್ಯರು=ಹಿಂದಿನವರು/ಪೂರ್‍ವಿಕರು/ಹಿರಿಯರು; ವೇದ್ಯರು=ತಿಳಿದವರು/ಅರಿತವರು/ಲೋಕದ ನಡೆನುಡಿಗಳನ್ನು ಒರೆಹಚ್ಚಿ ನೋಡಿ, ಯಾವುದು ಒಳಿತು-ಯಾವುದು ಕೆಡುಕು ಎಂಬುದನ್ನು ಜನಸಮುದಾಯಕ್ಕೆ ಹೇಳಿದವರು; ವಚನ+ಗಳ್+ಇಂದ; ವಚನ=ನುಡಿ/ಮಾತು; ಅರಿದೆವು+ಎಂಬರು; ಅರಿ=ತಿಳಿ; ಅರಿದೆವು=ತಿಳಿದುಕೊಂಡೆವು/ಅರಿತುಕೊಂಡೆವು; ಎಂಬರು=ಎನ್ನುವವರು/ಎಂದು ಹೇಳುವವರು; ಅರಿಯಲ್+ಆರರು; ಆರು=ಶಕ್ತಿಯುಳ್ಳವನಾಗು/ಕಸುವು ಉಳ್ಳವನಾಗು; ಆರರು=ಶಕ್ತಿಯಿಲ್ಲದವರು; ಅರಿಯಲ್=ತಿಳಿಯಲು; ಅರಿಯಲಾರರು=ತಿಳಿಯಲಾರರು/ತಿಳಿಯುವದಕ್ಕೆ ಆಗುವುದಿಲ್ಲ; ನೋಡು+ಆ; ನೋಡಾ=ಚೆನ್ನಾಗಿ ಆಲೋಚಿಸಿದಾಗ ತಿಳಿದುಬರುವ ಸಂಗತಿ;

"ಆದ್ಯರ ವೇದ್ಯರ ವಚನಗಳಿಂದ ಅರಿದೆವೆಂಬರು ಅರಿಯಲಾರರು ನೋಡಾ" ಎಂಬ ಈ ನುಡಿಗಳು ಯಾವುದೇ ಒಬ್ಬ ವ್ಯಕ್ತಿಯು ಇತರರು ಆಡಿರುವ ನುಡಿಗಳನ್ನು ಕೇಳಿದ ಮಾತ್ರಕ್ಕೆ ಇಲ್ಲವೇ ಬರೆದಿರುವ ವಿಚಾರಗಳನ್ನು ಓದಿದ ಮಾತ್ರಕ್ಕೆ ಅವನಲ್ಲಿರುವ ಕೆಟ್ಟಗುಣಗಳು ತೊಲಗುವುದಿಲ್ಲ. ಕೇಳುವುದರಿಂದ ಇಲ್ಲವೇ ಓದುವುದರಿಂದ ಪಡೆದ ಅರಿವನ್ನು ವ್ಯಕ್ತಿಯು ತನ್ನ ನಿಜದ ಬದುಕಿನಲ್ಲಿ

ಅಳವಡಿಸಿಕೊಂಡು ಆಚರಣೆಗೆ ತಂದಾಗ ಮಾತ್ರ ವಚನಗಳನ್ನು ತಿಳಿದಂತಾಗುತ್ತದೆ ಎಂಬ ಇಂಗಿತವನ್ನು ಸೂಚಿಸುತ್ತಿವೆ;

ನಾನೆ=ನನ್ನಿಂದಲೇ/ನಾನು ಮಾಡುವ ಪ್ರಯತ್ನದಿಂದಲೇ/ನಾನು ಮಾಡುವ ಕಾಯಕದಿಂದಲೇ/ನಾನು ತೊಡುವ ಸಂಕಲ್ಪದಿಂದಲೇ/ನನ್ನ ಪರಿಶ್ರಮದಿಂದಲೇ/ನನ್ನ ಮಯ್ ಮನಗಳನ್ನು ಹತೋಟಿಯಲ್ಲಿಟ್ಟುಕೊಂಡು ಆಡುವ ಮಾತು ಮತ್ತು ಕೆಲಸಗಳಿಂದಲೇ; ಅಂಗ+ಅಲ್ಲಿ+ಇಪ್ಪ; ಇಪ್ಪ=ಇರುವ/ನೆಲೆಗೊಂಡಿರುವ; ಮನ+ಅಲ್ಲಿ+ಇಪ್ಪ; ಕಳೆ=ಬಿಡು/ತೊರೆ/ತಳ್ಳು;

ಎನ್ನ ಮನದಲ್ಲಿಪ್ಪ ಮಾಯಾಪ್ರಪಂಚವ ನಾನೆ ಕಳೆಯಬೇಕು=ನನ್ನ ಮನದಲ್ಲಿ ಯಾವಾಗಲೂ ತುಡಿಯುತ್ತಿರುವ ಬಯಕೆ/ಕಾಮನೆ/ವ್ಯಾಮೋಹವನ್ನು ನಾನೇ ಹತೋಟಿಯಲ್ಲಿಟ್ಟುಕೊಂಡು, ಕೆಟ್ಟ ಆಸೆಗಳನ್ನು ಅಂದರೆ ನನ್ನನ್ನು ಒಳಗೊಂಡಂತೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಹಾನಿಯನ್ನುಂಟುಮಾಡುವಂತಹ ಒಳಮಿಡಿತಗಳನ್ನು ಬಿಡಬೇಕು; ಕಳೆಯಬೇಕು=ಬಿಡಬೇಕು/ತೊರೆಯಬೇಕು/ಹೊರದೂಡಬೇಕು;

ಅಮುಗೇಶ್ವರ=ಅಮುಗೆ ರಾಯಮ್ಮನ ಮೆಚ್ಚಿನ ದೇವರ ಹೆಸರು/ಅಮುಗೆ ರಾಯಮ್ಮನ ವಚನಗಳ ಅಂಕಿತನಾಮ; ಅಮುಗೇಶ್ವರಲಿಂಗವ ಅರಿಯಬೇಕು=ಒಳ್ಳೆಯ ನಡೆನುಡಿಗಳನ್ನೇ ದೇವರೆಂದು ತಿಳಿದು ಬಾಳಬೇಕು.)



೧೫. ಕನ್ನವನಿಕ್ಕುವ ಕಳ್ಳನು
ಕನ್ನಗಳ್ಳನೆಂದು ಉಸುರುವನೆ

ಅನ್ಯರ ಕೂಡೆ
ಬಣ್ಣ ಬಚ್ಚಣೆಯ ಮಾತಾಡುವ

ಅಣ್ಣ ಅಪ್ಪ ಎಂಬ ಕುನ್ನಿಗಳ
ಮೆಚ್ಚುವನೆ ಅಮುಗೇಶ್ವರಲಿಂಗವು.

**ಯಾವುದೇ ವ್ಯಕ್ತಿಯಾಗಲಿ ತಾನು ಮಾಡುವ ಕೆಟ್ಟ ಕೆಲಸವನ್ನು ಇತರರ ಮುಂದೆ ಬಹಿರಂಗವಾಗಿ ಹೇಳಿಕೊಳ್ಳುವುದಿಲ್ಲ. ಇದಕ್ಕೆ ಬದಲಾಗಿ ತನ್ನ ನೀಚತನವನ್ನು ಮುಚ್ಚಿಟ್ಟುಕೊಂಡು, ಅತಿ ವಿನಯದಿಂದ ಕೂಡಿದ ಸೋಗಿನ ಮಾತುಗಳ ಮೂಲಕ ಜನರನ್ನು ಮರುಳುಗೊಳಿಸುವುದರಲ್ಲಿ ತೊಡಗಿರುತ್ತಾನೆ. ಆದುದರಿಂದ ವ್ಯಕ್ತಿಗಳ ಗುಣ/ಅವಗುಣಗಳನ್ನು ಅವರು ಮಾಡುವ ಒಳಿತು/ಕೆಡುಕಿನ ಕೆಲಸಗಳಿಂದ ತಿಳಿಯಬೇಕೆ ಹೊರತು, ಅವರು ಆಡುವ ಮಾತುಗಳಿಂದಲ್ಲ ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಕನ್ನ+ಅನ್+ಇಕ್ಕುವ; ಕನ್ನ=ಗೋಡೆಯಲ್ಲಿ ಕೊರೆದಿರುವ ಕಂಡಿ/ರಂಧ್ರ; ಅನ್=ಅನ್ನು; ಇಕ್ಕು=ಹಾಕು; ಕನ್ನವನಿಕ್ಕುವುದು=ಮನೆಯಲ್ಲಿರುವ ಒಡವೆ ವಸ್ತುಗಳನ್ನು ಕಳವು ಮಾಡುವ ಉದ್ದೇಶದಿಂದ ಒಬ್ಬ ವ್ಯಕ್ತಿಯು ನುಸುಳಿ ಒಳನುಗ್ಗಲು ಅನುವಾಗುವಂತೆ ಮನೆಯ ಗೋಡೆಯಲ್ಲಿ ಕಂಡಿಯನ್ನು ಕೊರೆಯುವುದು; ಕಳ್ಳ=ಇತರರ ಒಡವೆ ವಸ್ತುಗಳನ್ನು ಅಪಹರಿಸುವವನು/ ದೋಚುವವನು/ಲಪಟಾಯಿಸುವವನು; ಕನ್ನ+ಕಳ್ಳ=ಕನ್ನಗಳ್ಳ; ಕನ್ನಗಳ್ಳ=ಗೋಡೆಯಲ್ಲಿ ಕಂಡಿಯನ್ನು ಕೊರೆದು ಕಳವನ್ನು ಮಾಡುವ ವ್ಯಕ್ತಿ; ಉಸುರು=ಹೇಳು/ನುಡಿ; ಉಸುರುವನೆ=ಹೇಳುತ್ತಾನೆಯೆ/ನುಡಿಯುತ್ತಾನೆಯೆ;

ಕನ್ನವನಿಕ್ಕುವ ಕಳ್ಳನು ಕನ್ನಗಳ್ಳನೆಂದು ಉಸುರುವನೆ=ಕೆಟ್ಟ ಕೆಲಸಗಳನ್ನು ಮಾಡುವ ಯಾವುದೇ ವ್ಯಕ್ತಿಯು ತನ್ನನ್ನು ತಾನು ಕೆಟ್ಟವನೆಂದು

ಹೇಳಿಕೊಳ್ಳುವುದಿಲ್ಲ. ಇದಕ್ಕೆ ಬದಲಾಗಿ ಸಮಾಜದಲ್ಲಿ ತನ್ನನ್ನು ಒಳ್ಳೆಯ ವ್ಯಕ್ತಿಯೆಂದೇ ತೋರಿಸಿಕೊಳ್ಳಲು ಪ್ರಯತ್ನಿಸುತ್ತಿರುತ್ತಾನೆ;

ಅನ್ಯ=ಬೇರೆ/ಮತ್ತೊಂದು; ಅನ್ಯರ=ಬೇರೆಯವರ/ಇತರರ; ಕೂಡೆ=ಜತೆಯಲ್ಲಿ/ಸಂಗಡದಲ್ಲಿ/ಒಡನಾಟದಲ್ಲಿ; ಬಣ್ಣ=ರಂಗು/ಅಂದ/ಚೆಂದ/ಚೆಲುವು; ಬಚ್ಚಣೆ=ಸೋಗು/ತೋರಿಕೆಯ ನಟನೆ; ಮಾತು+ಆಡುವ; ಬಣ್ಣಬಚ್ಚಣೆಯ ಮಾತು=ಇತರರನ್ನು ಮರಳುಮಾಡುವಂತೆ ಆಡುವಂತಹ ತೋರಿಕೆಯ/ಸೋಗಿನ ಮಾತುಗಳು; ಎಂಬ=ಎನ್ನುವ/ಎಂದು ನುಡಿಯುವ; ಅಣ್ಣ ಅಪ್ಪ ಎಂಬ=ಇತರರೊಡನೆ ಮಾತನಾಡುವಾಗ, ಅವರ ಮೆಚ್ಚುಗೆಯನ್ನು ಪಡೆಯುವುದಕ್ಕಾಗಿ ಇಲ್ಲವೇ ಅವರಿಂದ ತಮಗೆ ಬೇಕಾದ ಒಡವೆ ವಸ್ತುಗಳನ್ನು ಪಡೆಯಲೆಂದು ಅತಿಯಾದ ಒಲವು, ನಲಿವು, ವಿನಯವನ್ನು ತೋರಿಸುತ್ತಾ, 'ಅಣ್ಣ/ಅಪ್ಪ' ಎಂಬ ಹಿರಿಯತನವನ್ನು ಸೂಚಿಸುವ ಪದಗಳನ್ನಾಡುವುದು;

ಕುನ್ನಿ=ನಾಯಿಮರಿ/ನಾಯಿ; ಮೆಚ್ಚು=ಒಲಿ/ಹೊಗಳು/ಕೊಂಡಾಡು/ಒಪ್ಪು; ಮೆಚ್ಚುವನೆ=ಮೆಚ್ಚುತ್ತಾನೆಯೆ;

ಅಣ್ಣ ಅಪ್ಪ ಎಂಬ ಕುನ್ನಿಗಳ ಮೆಚ್ಚುವನೆ= ಬಣ್ಣಬಣ್ಣದ ಮಾತುಗಳನ್ನಾಡುತ್ತಾ ಜನರನ್ನು ವಂಚಿಸುವ ಕೆಟ್ಟ ನಡೆನುಡಿಯುಳ್ಳ ವ್ಯಕ್ತಿಗಳನ್ನು ದೇವರಾದ ಅಮುಗೇಶ್ವರನು ಒಪ್ಪುವುದಿಲ್ಲ. ಏಕೆಂದರೆ ದೇವರು ಮೆಚ್ಚಿಕೊಳ್ಳುವುದು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ ನಿಜದ ನಡೆನುಡಿಯುಳ್ಳವರನ್ನು ಮಾತ್ರ ಎಂಬ ಇಂಗಿತವನ್ನು ಈ ವಾಕ್ಯ ಸೂಚಿಸುತ್ತದೆ.

'ಕುನ್ನಿ' ಎಂಬ ಪದವನ್ನು 'ನೀಚ/ಕೇಡಿ/ವಂಚಕ' ಎಂಬ ರೂಪಕದ ತಿರುಳಿನಲ್ಲಿ ಬಯ್ಗುಳವಾಗಿ ಬಳಸಲಾಗಿದೆ; ಅಮುಗೇಶ್ವರ=ಅಮುಗೆ ರಾಯಮ್ಮನ ಮೆಚ್ಚಿನ ದೇವರ ಹೆಸರು/ಅಮುಗೆ ರಾಯಮ್ಮನ ವಚನಗಳ ಅಂಕಿತನಾಮ.)



೧೬. ಕಾವಿ ಕಾಷಾಂಬರವ ಹೊದ್ದು
ಕಾಮವಿಕಾರಕ್ಕೆ ತಿರುಗುವ
ಕರ್ಮಿಗಳ ಮುಖವ ನೋಡಲಾಗದು

ಜಂಗಮವಾಗಿ ಜಗದಿಚ್ಛೆಯ ನುಡಿವ
ಜಂಗುಳಿಗಳ ಮುಖವ ನೋಡಲಾಗದು

ಲಿಂಗೈಕ್ಯರೆನಿಸಿಕೊಂಡು
ಅಂಗವಿಕಾರಕ್ಕೆ ತಿರುಗುವ
ಲಿಂಗದ್ರೋಹಿಗಳ ಮುಖವ ನೋಡಲಾಗದು
ಕಾಣಾ ಅಮುಗೇಶ್ವರಲಿಂಗವೆ.

**ಸರ್ವಸಂಗ ಪರಿತ್ಯಾಗಿಗಳಂತೆ ಉಡುಗೆ ತೊಡುಗೆಯನ್ನು ತೊಟ್ಟು, ನಯವಾದ ನಡೆನುಡಿಗಳಿಂದ ಜನಸಮುದಾಯವನ್ನು ಮರುಳುಗೊಳಿಸುತ್ತ, ಒಳಗೊಳಗೆ ಅಂದರೆ ಜನರ ಕಣ್ಣಿಗೆ ಕಾಣದಂತೆ ಕೆಟ್ಟ ಕೆಲಸಗಳಲ್ಲಿ ತೊಡಗಿರುವಂತಹ ವಂಚಕರ ಜತೆಯಲ್ಲಿ ಯಾವುದೇ ಬಗೆಯ ಒಡನಾಟವನ್ನು ಇಟ್ಟುಕೊಳ್ಳಬಾರದು/ ವ್ಯವಹಾರವನ್ನು ಮಾಡಬಾರದು ಎಂಬ ಎಚ್ಚರಿಕೆಯನ್ನು ಈ ವಚನದಲ್ಲಿ ನೀಡಲಾಗಿದೆ.**

(ಕಾವಿ=ಕೆಂಪು ಬಣ್ಣದ ಮಣ್ಣು/ಕೆಂಪನೆಯ ಬಣ್ಣ; ಕಾಷಾಯ+ಅಂಬರವ; ಕಾಷಾಯ=ಕೆಂಪನೆಯ ಬಣ್ಣದ; ಅಂಬರ=ಬಟ್ಟೆ/ಅರಿವೆ/ವಸ್ತ್ರ; ಕಾವಿ ಕಾಷಾಂಬರ=ಕೆಂಪನೆಯ ಬಣ್ಣದ ಬಟ್ಟೆ/ಉಡುಗೆ; 'ಕೆಂಪನೆಯ ಬಣ್ಣ' ಎಂಬ ಒಂದೇ ಬಗೆಯ ತಿರುಳನ್ನು ಹೊಂದಿರುವ 'ಕಾವಿ' ಮತ್ತು 'ಕಾಷಾಯ' ಎಂಬ ಪದಗಳು ಒಟ್ಟಿಗೆ ಬಳಕೆಯಾಗಿವೆ; ಹೊದ್ದು=ಉಟ್ಟುಕೊಂಡು/ಮಯ್ ಮೇಲೆ ಹಾಕಿಕೊಂಡು;

ಕಾವಿ ಕಾಷಾಂಬರವ ಹೊದ್ದುಕೊಳ್ಳುವುದು=ಆಸ್ತಿಪಾಸ್ತಿ, ಹಣಕಾಸು, ಸಂಪತ್ತಿನ ಒಡೆತನವನ್ನು ವ್ಯಕ್ತಿಗತವಾಗಿ ನಿರಾಕರಿಸಿ, ಹೆಣ್ಣಿನೊಡನೆ ಕಾಮದ ನಂಟನ್ನು

ಬಿಟ್ಟು, ಹುಟ್ಟಿ ಬೆಳೆದ ಕುಟುಂಬದ ನೆಲೆಯಿಂದ ದೂರಸರಿದು, ಸಹಮಾನವರ ಮತ್ತು ಸಮಾಜದ ಒಳಿತಿಗಾಗಿ ಬಾಳುವ ನಿಲುವನ್ನು ತಳೆದ ಸಂಕೇತವಾಗಿ ಕಾವಿಬಟ್ಟೆಯನ್ನು ಉಟ್ಟುಕೊಳ್ಳುವ ಆಚರಣೆಯು ನಮ್ಮ ಸಮಾಜದಲ್ಲಿದೆ. ರಿಸಿಮುನಿಗಳು, ಜಾತಿ ಜಗದ್ಗುರುಗಳು ಮತ್ತು ದೇವಮಾನವರು ಕಾವಿಬಟ್ಟೆಯನ್ನು ಉಡುತ್ತಾರೆ;

ಕಾಮ=ಹೆಣ್ಣು-ಗಂಡಿನ ದೇಹಗಳ ನಂಟು/ಮಿಲನ; ವಿಕಾರ=ಈಗಿರುವ ರೂಪ/ಆಕಾರ ಹಾಳಾಗಿ ಕೆಟ್ಟ ರೂಪವನ್ನು ತಳೆಯುವುದು/ಬದಲಾವಣೆ/ಮಾರ್ಪಾಡು; ಕಾಮವಿಕಾರ=ಹೆಣ್ಣಿನ ದೇಹದೊಡನೆ ಕೂಡಬೇಕೆಂಬ ಒಳಮಿಡಿತದಿಂದ ಮಯ್ ಮನಗಳು ನೂರಾರು ಬಗೆಗಳಲ್ಲಿ ಹಂಬಲಿಸುವುದು/ಕುದಿಯುತ್ತಿರುವುದು; ತಿರುಗುವ=ಅಲೆಯುವ/ಹುಡುಕಾಡುವ/ಹೊಂಚುಹಾಕುವ; ಕರ್ಮಿ=ಕೆಟ್ಟ/ನೀಚ/ಪಾಪದ ಕೆಲಸಗಳಲ್ಲಿ ತೊಡಗಿದವನು; ನೋಡಲು+ಆಗದು; ಆಗದು=ಆಗುವುದಿಲ್ಲ;

ಕರ್ಮಿಗಳ ಮುಖವ ನೋಡಲಾಗದು=ಒಳಗೊಂದು ಹೊರಗೊಂದು ಬಗೆಯ ನಡೆನುಡಿಗಳನ್ನುಳ್ಳ ವ್ಯಕ್ತಿಗಳೊಡನೆ ಯಾವುದೇ ರೀತಿಯಲ್ಲಿಯೂ ವ್ಯವಹರಿಸಬಾರದು/ಒಡನಾಡಬಾರದು;

ಜಂಗಮ+ಆಗಿ; ಜಂಗಮ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳಲ್ಲಿ ಶಿವನನ್ನು ಕಾಣುವ ಮತ್ತು ಜನರ ಮನಸ್ಸಿನಲ್ಲಿ ಒಳ್ಳೆಯ ನಡೆನುಡಿಗೆ ಪ್ರೇರಣೆಯಾಗುವಂತಹ ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಮೂಡಿಸುವವನು/ತಿಳಿಯ ಹೇಳುವವನು;

ಜಂಗಮವಾಗಿ=ಒಳ್ಳೆಯ ನಡೆನುಡಿಗಳಿಂದ ಕೂಡಿದವನಾಗಿ ಮತ್ತು ಶಿವನನ್ನು ಒಲಿದಿರುವ ವ್ಯಕ್ತಿಯಾಗಿದ್ದುಕೊಂಡು; ಜಗದ+ಇಚ್ಛೆಯ; ಜಗ=ಲೋಕ/ಪ್ರಪಂಚ/ಜನಸಮುದಾಯ; ಇಚ್ಛೆ=ಆಸೆ/ಬಯಕೆ/ಹಂಬಲ; ನುಡಿ=ಹೇಳು; ಜಂಗುಳಿ=ನಾಡಾಡಿ/ಅಲೆಮಾರಿ/ಎಲ್ಲಿಯೂ ಒಂದೆಡೆ ನಿಲ್ಲದೆ ಯಾವಾಗಲೂ ಊರಿಂದೂರಿಗೆ ಅಲೆಯುತ್ತಿರುವವನು;

ಜಂಗಮವಾಗಿ ಜಗದಿಚ್ಛೆಯ ನುಡಿವ ಜಂಗುಳಿಗಳು=ಹೊರನೋಟಕ್ಕೆ ಶಿವನನ್ನು ಓಲಯಿಸುವ/ಸತ್ಯರೂಪಿಯಾದ ಶಿವನಿಗಾಗಿ ಹಂಬಲಿಸುವವನಂತೆ ನಟಿಸುತ್ತಾ,

ಸಮಾಜದಲ್ಲಿ ಜಾತಿಬಲ, ಹಣಬಲ, ಗದ್ದುಗೆಯ ಬಲವುಳ್ಳವರನ್ನು ಹಾಡಿ ಹೊಗಳುತ್ತ, ಅವರ ತಾಳಕ್ಕೆ ತಕ್ಕಂತೆ ನಡೆದುಕೊಳ್ಳುವ ಜಂಗಮ ರೂಪದಲ್ಲಿರುವ ನೀಚ ವ್ಯಕ್ತಿಗಳು; 'ಜಂಗುಳಿ' ಎಂಬ ಪದ 'ನೀಚ/ಕೆಲಸಕ್ಕೆ ಬಾರದವನು' ಎಂಬ ತಿರುಳಿನ ಬಯ್ಗುಳವಾಗಿ ಬಳಕೆಯಾಗಿದೆ;

ಲಿಂಗ+ಐಕ್ಯರು+ಎನಿಸಿಕೊಂಡು; ಲಿಂಗ=ಶಿವನ ಸಂಕೇತವಾದ ಕಲ್ಲು/ಮಣ್ಣು/ಮರದ ವಿಗ್ರಹ; ಐಕ್ಯ=ಒಂದಾಗುವುದು/ಲೀನವಾಗುವುದು/ಸೇರಿಕೊಳ್ಳುವುದು/ಬೆರೆತುಹೋಗುವುದು; ಲಿಂಗೈಕ್ಯರು=ಒಳ್ಳೆಯ ನಡೆನುಡಿಗಳಿಂದ ಬಾಳುವುದರಲ್ಲಿ ಶಿವನನ್ನು ಕಾಣುತ್ತಿರುವ ವ್ಯಕ್ತಿಗಳು;

ಅಂಗ=ದೇಹ/ಶರೀರ/ಮಯ್; ಅಂಗವಿಕಾರ=ಮಯ್ ಮನಗಳಲ್ಲಿ ಕೆರಳುವಂತಹ ಕೆಟ್ಟಬಯಕೆ/ಕಾಮನೆ/ಹಂಬಲ; ದ್ರೋಹಿ=ವಂಚಕ/ಮೋಸಗಾರ/ಕೇಡಿಗ/ನಂಬಿಸಿ ಕಯ್ ಕೊಡುವವನು; ಲಿಂಗದ್ರೋಹಿ=ಶಿವನ ಹೆಸರಿನಲ್ಲಿ ಜನಸಮುದಾಯವನ್ನು ವಂಚಿಸುತ್ತಿರುವ ವ್ಯಕ್ತಿ;

ಲಿಂಗೈಕ್ಯರೆನಿಸಿಕೊಂಡು ಅಂಗವಿಕಾರಕ್ಕೆ ತಿರುಗುವ ಲಿಂಗದ್ರೋಹಿಗಳು =ಸಮಾಜದಲ್ಲಿ ಜನರ ಕಣ್ಣಿಗೆ ಶಿವನನ್ನು ಒಲಿದವರಂತೆ ಹೊರನೋಟಕ್ಕೆ ಕಾಣಿಸಿಕೊಳ್ಳುತ್ತಿದ್ದು, ಒಳಗೊಳಗೆ ಅಂದರೆ ಜನರಿಗೆ ಗೊತ್ತಾಗದಂತೆ ಕೆಟ್ಟಕೆಲಸಗಳಲ್ಲಿ ಮಗ್ನರಾಗಿ, ತಮ್ಮ ಮಯ್ ಮನಗಳಲ್ಲಿ ತುಡಿಯುತ್ತಿರುವ ಕಾಮನೆಗಳನ್ನು ಹಿಂಗಿಸಿಕೊಳ್ಳುತ್ತಿರುವ ವಂಚಕರು;

ಕಾಣ್+ಆ; ಕಾಣ್=ನೋಡು/ತಿಳಿ; ಕಾಣಾ=ನೋಡುವಂತಹವನಾಗು; ಅಮುಗೇಶ್ವರ=ಅಮುಗೆ ರಾಯಮ್ಮನ ಮೆಚ್ಚಿನ ದೇವರ ಹೆಸರು/ಅಮುಗೆ ರಾಯಮ್ಮನ ವಚನಗಳ ಅಂಕಿತನಾಮ.)



# ಆಯ್ದಕ್ಕಿ ಮಾರಯ್ಯ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ. |
| ಊರು | : | ಅಮರೇಶ್ವರ ಗ್ರಾಮ, ಲಿಂಗಸುಗೂರು ತಾಲ್ಲೂಕು ರಾಯಚೂರು ಜಿಲ್ಲೆ. |
| ಹೆಂಡತಿ | : | ಆಯ್ದಕ್ಕಿ ಲಕ್ಕಮ್ಮ. |
| ಕಸುಬು | : | ಮಾರಯ್ಯನು ಕಲ್ಯಾಣ ಪಟ್ಟಣದಲ್ಲಿದ್ದ ಬಸವಣ್ಣನವರ ಮಹಾಮನೆಯ ಅಂಗಳದಿಂದ ಆಯ್ದುಕೊಂಡು ತಂದ ಅಕ್ಕಿಯಿಂದ, ಉಣಿಸು ತಿನಸುಗಳನ್ನು ತಯಾರಿಸಿ ಮಾರಯ್ಯ ಮತ್ತು ಲಕ್ಕಮ್ಮ ದಂಪತಿ ಶಿವಶರಣಶರಣೆಯರಿಗೆ ದಾಸೋಹವನ್ನು ಮಾಡುತ್ತಿದ್ದರು. |
| ದೊರೆತಿರುವ ವಚನಗಳು | : | ೩೧ |
| ವಚನಗಳ ಅಂಕಿತನಾಮ | : | ಅಮರೇಶ್ವರಲಿಂಗ. |

೧೭. ಕಾಯಕದಲ್ಲಿ ನಿರತನಾದಡೆ
ಗುರುದರ್ಶನವಾದಡೂ ಮರೆಯಬೇಕು
ಲಿಂಗಪೂಜೆಯಾದಡೂ ಮರೆಯಬೇಕು
ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು
ಕಾಯಕವೆ ಕೈಲಾಸವಾದ ಕಾರಣ
ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು.

**ವ್ಯಕ್ತಿಯು ತಾನು ಕಯ್ಗೊಂಡಿರುವ ಕಾಯಕದಲ್ಲಿ ತಲ್ಲೀನತೆಯಿಂದ ತೊಡಗಿಕೊಳ್ಳಬೇಕೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

**ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣಶರಣೆಯರ ನಿಲುವಿನಲ್ಲಿ 'ಕಾಯಕ' ಎಂದರೆ "ವ್ಯಕ್ತಿಯು ಮಾಡುವ ಕೆಲಸವು ಅವನಿಗೆ ಮತ್ತು ಅವನ ಕುಟುಂಬಕ್ಕೆ ಒಲವು ನಲಿವು ನೆಮ್ಮದಿಯನ್ನು ತಂದುಕೊಡುವಂತೆಯೇ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಿದ್ದು, ಒಟ್ಟು ಜನಸಮುದಾಯದ ಹಿತಕ್ಕೆ ನೆರವಾಗುವಂತಿರುವ ದುಡಿಮೆ."**

(ಕಾಯಕ+ಅಲ್ಲಿ; ಕಾಯಕ=ಕಸುಬು/ಕೆಲಸ/ಗೆಯ್ಮೆ/ದುಡಿಮೆ; ನಿರತನ್+ಆದಡೆ; ನಿರತ=ಮಗ್ನವಾಗುವುದು/ತಲ್ಲೀನಗೊಳ್ಳುವುದು/ತೊಡಗಿಸಿಕೊಳ್ಳುವುದು; ನಿರತನ್=ತಲ್ಲೀನಗೊಂಡವನು/ತೊಡಗಿಸಿಕೊಂಡವನು/ಮಗ್ನನಾದವನು; ಆದಡೆ=ಆದರೆ/ಆಗಿರುವಾಗ;

ಕಾಯಕದಲ್ಲಿ ನಿರತನಾದಡೆ=ಕೆಲಸವೊಂದನ್ನು ಕಯ್ಗೊಂಡು, ಅದನ್ನು ಒಲವು ನಲಿವುಗಳಿಂದ ಮಾಡಬೇಕೆಂಬ ಆಸೆಯಿಂದ ಕೂಡಿ, ಅದರಲ್ಲಿಯೇ ತನ್ನ ಮಯ್ ಮನವನ್ನು ತೊಡಗಿಸಿಕೊಂಡು ದುಡಿಯುತ್ತಿರುವಾಗ;

ಗುರುದರ್ಶನ+ಆದಡೂ; ಗುರು=ವಿದ್ಯೆಯನ್ನು ಕಲಿಸುವ/ಅರಿವನ್ನು ಮೂಡಿಸುವ/ಒಳ್ಳೆಯ ವ್ಯಕ್ತಿತ್ವವನ್ನು ರೂಪಿಸುವ ವ್ಯಕ್ತಿ; ದರ್ಶನ=ನೋಡುವಿಕೆ/ಕಾಣುವಿಕೆ; ಆದಡೂ=ಆದರೂ; ಮರೆ=ನೆನಪಿಲ್ಲದಿರುವುದು/ನೆನಪಾಗದಿರುವುದು/ಗಮನವಿಲ್ಲದಿರುವುದು;

ಗುರುದರ್ಶನವಾದಡೂ ಮರೆಯಬೇಕು=ದುಡಿಮೆಯ ಸಮಯದಲ್ಲಿ ಗುರು ತನ್ನ ಬಳಿ ಬಂದರೂ, ದುಡಿಮೆಯನ್ನು ಕಯ್ ಬಿಟ್ಟು, ಗುರುವನ್ನು ಉಪಚರಿಸಲು ಹೋಗಬಾರದು. ಏಕೆಂದರೆ ಗುರುಸೇವೆಗಿಂತಲೂ ಕಯ್ಗೊಂಡಿರುವ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿ ಮುಗಿಸುವುದು ಮೊದಲ ಗುರಿಯಾಗಿರಬೇಕು ಎಂಬ ತಿರುಳಿನಲ್ಲಿ ಈ ಸೊಲ್ಲು ಬಳಕೆಯಾಗಿದೆ;

ಲಿಂಗ+ಪೂಜೆ+ಆದಡೂ; ಲಿಂಗ=ದೇವರೆಂದು ನಂಬಿರುವ ಶಿವನ ಸಂಕೇತದ ಕಲ್ಲು, ಮಣ್ಣು, ಮರ, ಲೋಹದ ವಿಗ್ರಹ; ಪೂಜೆ= ದೇವರನ್ನು ಒಲಿಸಿಕೊಳ್ಳಲು/ದೇವರ ಬಗ್ಗೆ ಒಲವನ್ನು ತೋರಿಸಲು ಮಾಡುವ ಬಹುಬಗೆಯ ಆಚರಣೆಗಳು;

ಲಿಂಗಪೂಜೆಯಾದಡೂ ಮರೆಯಬೇಕು=ಲಿಂಗವನ್ನು ಪೂಜಿಸುವುದಕ್ಕಿಂತಲೂ ಈಗ ಮಾಡುತ್ತಿರುವ ದುಡಿಮೆಯು ದೊಡ್ಡದು ಎಂಬುದನ್ನು ಅರಿತಿರಬೇಕು;

ಜಂಗಮ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳಲ್ಲಿ ಶಿವನನ್ನು ಕಾಣುವ ಮತ್ತು ಜನರ ಮನಸ್ಸಿನಲ್ಲಿ ಒಳ್ಳೆಯ ನಡೆನುಡಿಗೆ ಪ್ರೇರಣೆಯಾಗುವಂತಹ ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಮೂಡಿಸುವವನು/ತಿಳಿಯಹೇಳುವವನು; ಮುಂದೆ=ತನ್ನ ಎದುರಿಗೆ/ಬಳಿಯಲ್ಲಿ; ನಿಂದು+ಇದ್ದಡೂ; ನಿಂದು=ನಿಂತುಕೊಂಡು; ಇದ್ದಡೂ=ಇದ್ದರೂ; ಹಂಗು=ನಂಟು/ಒಡನಾಟ; ಹಂಗ=ಹಂಗನ್ನು/ಯಾವುದೇ ಬಗೆಯ ವ್ಯವಹಾರವನ್ನು/ಒಡನಾಟವನ್ನು/ನಂಟನ್ನು; ಹರಿ=ಕಡಿ/ಕತ್ತರಿಸು/ತುಂಡುಮಾಡು;

ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು=ಜಂಗಮನು ತನ್ನ ಬಳಿಸಾರಿ ಬಂದು ನಿಂದಿದ್ದರೂ, ಅವನೊಡನೆ ಯಾವುದೇ ಮಾತುಕತೆಯನ್ನಾಡದೆ, ಅವನತ್ತ ಗಮನ ಹರಿಸದೆ, ವ್ಯಕ್ತಿಯು ತಾನು ಮಾಡುತ್ತಿರುವ ಕೆಲಸದಲ್ಲಿ ತೊಡಗಿರಬೇಕು;

ಕಾಯಕವೆ=ಕಯ್ಗೊಂಡಿರುವ ಕೆಲಸವೇ/ಮಾಡುತ್ತಿರುವ ದುಡಿಮೆಯೇ; ಕೈಲಾಸ+ಆದ; ಕೈಲಾಸ=ಹಿಮಾಲಯ ಪರ್ವತದ ಸಾಲುಗಳಲ್ಲಿರುವ ಒಂದು ಬೆಟ್ಟ/ಶಿವನನ್ನು ಪೂಜಿಸುವ ವ್ಯಕ್ತಿಗಳಿಗೆ, ಈ ಗಿರಿ ಪ್ರಾಂತ್ಯದಲ್ಲಿ ಶಿವನು ತನ್ನ

ಗಣಗಳ ಜತೆಗೂಡಿ ನೆಲೆಸಿದ್ದಾನೆ. ಆದುದರಿಂದ ತಾವು ಸಾವನ್ನಪ್ಪಿದ ನಂತರ, ಶಿವನ ಬಳಿಸಾರಬೇಕೆಂಬ ಹಂಬಲವಿದೆ. ಏಕೆಂದರೆ ಇದು ಮಾನವಜೀವಿಗೆ ಒಲವು ನಲಿವು ನೆಮ್ಮದಿಯನ್ನು ನೀಡುವ ನೆಲೆ ಎಂಬ ನಂಬಿಕೆ ಜನಮನದಲ್ಲಿದೆ;

ಕಾಯಕವೇ ಕೈಲಾಸ=ಇದು ಒಂದು ನುಡಿಗಟ್ಟಾಗಿ ಬಳಕೆಯಲ್ಲಿದೆ. ವ್ಯಕ್ತಿಯು ತನ್ನ ಪಾಲಿನ ಕಾಯಕವನ್ನು ಒಲವು ನಲಿವು ಮತ್ತು ಪ್ರಾಮಾಣಿಕತನದಿಂದ ಮಾಡಿದರೆ, ಅದು ಅವನ ಬದುಕಿನ ಏಳಿಗೆಗೆ ಕಾರಣವಾಗುವುದರ ಜತೆಜತೆಗೆ ಸಹಮಾನವರಿಗೆ ಮತ್ತು ಸಮಾಜಕ್ಕೂ ಒಳಿತನ್ನುಂಟುಮಾಡಿ, ಜನರು ವಾಸಮಾಡುತ್ತಿರುವ ನೆಲೆಯನ್ನೇ 'ಕೈಲಾಸ'ವನ್ನಾಗಿ ಅಂದರೆ ಒಲವು, ನಲಿವು ಮತ್ತು ನೆಮ್ಮದಿಯ ಬೀಡನ್ನಾಗಿ ಮಾಡುತ್ತದೆ ಎಂಬ ತಿರುಳನ್ನು ಒಳಗೊಂಡಿದೆ;

ಅಮರೇಶ್ವರಲಿಂಗ+ಆಯಿತ್ತು+ಆದಡೂ; ಅಮರೇಶ್ವರಲಿಂಗ=ಶಿವನ ಹೆಸರು/ ಆಯ್ದಕ್ಕಿ ಮಾರಯ್ಯನ ವಚನಗಳಲ್ಲಿ ಬಳಕೆಯಾಗಿರುವ ಅಂಕಿತನಾಮ/ಆಯ್ದಕ್ಕಿ ಮಾರಯ್ಯನ ಮೆಚ್ಚಿನ ದೇವರು; ಆಯಿತ್ತು=ಆಗಿರುವುದು; ಆಯಿತ್ತಾದಡೂ=ಆಗಿರುವುದಾದರೂ; ಕಾಯಕದ+ಒಳಗು; ಒಳಗು=ಒಳಪಟ್ಟಿದೆ/ ಸೇರಿದೆ;

ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು=ದೇವರಾದ ಅಮರೇಶ್ವರ ಲಿಂಗದ ಪೂಜೆಯಾಗಿದ್ದರೂ ಅದು ಕೂಡ ಮಾಡುವ ಕಾಯಕದಲ್ಲೇ ಸೇರಿಕೊಂಡಿದೆ. ಅಂದರೆ ಮಾಡುತ್ತಿರುವ ಕಾಯಕವನ್ನು ಬಿಟ್ಟು ಅಮರೇಶ್ವರಲಿಂಗವನ್ನು ಪೂಜಿಸಬೇಕಾದ ಅಗತ್ಯವಿಲ್ಲ.)



# ಆಯ್ದಕ್ಕಿ ಲಕ್ಕಮ್ಮ

| | | |
|---|---|---|
| ಕಾಲ | : | ಕ್ರಿಶ. ಹನ್ನೆರಡನೆಯ ಶತಮಾನ. |
| ಊರು | : | ಅಮರೇಶ್ವರ ಗ್ರಾಮ, ಲಿಂಗಸುಗೂರು ತಾಲ್ಲೂಕು, ರಾಯಚೂರು ಜಿಲ್ಲೆ. |
| ಗಂಡ | : | ಆಯ್ದಕ್ಕಿ ಮಾರಯ್ಯ |
| ಕಸುಬು | : | ಮಾರಯ್ಯನು ಕಲ್ಯಾಣ ಪಟ್ಟಣದಲ್ಲಿದ್ದ ಬಸವಣ್ಣನವರ ಮಹಾಮನೆಯ ಅಂಗಳದಿಂದ ಆಯ್ದುಕೊಂಡು ತಂದ ಅಕ್ಕಿಯಿಂದ, ಉಣಿಸು ತಿನಸುಗಳನ್ನು ತಯಾರಿಸಿ ಮಾರಯ್ಯ ಮತ್ತು ಲಕ್ಕಮ್ಮ ದಂಪತಿ ಶಿವಶರಣಶರಣೆಯರಿಗೆ ದಾಸೋಹವನ್ನು ಮಾಡುತ್ತಿದ್ದರು. |
| ದೊರೆತಿರುವ ವಚನಗಳು | : | ೨೫ |
| ವಚನಗಳ ಅಂಕಿತನಾಮ | : | ಮಾರಯ್ಯ ಪ್ರಿಯ ಅಮರೇಶ್ವರಲಿಂಗ |

ಮಾರಯ್ಯನು ಆಯ್ದು ತಂದ ಅಕ್ಕಿಯಿಂದ ತಿನಸು ಉಣಿಸುಗಳನ್ನು ತಯಾರು ಮಾಡಿ, ಪ್ರತಿದಿನ ತಮ್ಮ ಮನೆಗೆ ಬರುವ ಶಿವಶರಣ ಶರಣೆಯರಿಗೆ ದಾಸೋಹ ಮಾಡುವುದನ್ನೇ ಆಯ್ದಕ್ಕಿ ಲಕ್ಕಮ್ಮ ಮತ್ತು ಆಯ್ದಕ್ಕಿ ಮಾರಯ್ಯ ದಂಪತಿಗಳು ತಮ್ಮ ಕಾಯಕವನ್ನಾಗಿ ಮಾಡಿಕೊಂಡಿದ್ದರು. 'ದಾಸೋಹ' ಎಂದರೆ ಜಂಗಮರ ಸೇವೆಯನ್ನು ಮಾಡುವುದು/ಹಸಿದು ಬಂದವರಿಗೆ ಅನ್ನವನ್ನು ನೀಡುವುದು.

ಬತ್ತ, ರಾಗಿ, ಜೋಳ ಮುಂತಾದ ಬೆಳೆಗಳನ್ನು ಕುಯ್ದು, ಅರಿಗಳನ್ನು ಒಣಗಿಸಿ, ಹೊರೆಗಳನ್ನು ಕಟ್ಟುವಾಗ ಹೊರೆಯಿಂದ ಕಳಚಿಕೊಂಡು ಹೊಲಗದ್ದೆಗಳಲ್ಲಿ ಬಿದ್ದಿರುವ ತೆನೆಯನ್ನು 'ಅಕ್ಕಲು' ಎಂದು ಕರೆಯುತ್ತಾರೆ. ಇಂತಹ ತೆನೆಗಳನ್ನು ಬಡವರು ಆಯ್ದುಕೊಂಡು ತಂದು ತಮ್ಮ ಹೊಟ್ಟೆಪಾಡನ್ನು ನೀಗಿಸಿಕೊಳ್ಳುತ್ತಾರೆ. ಈ ರೀತಿ ಬಿದ್ದಿರುವ ತೆನೆಗಳನ್ನು ಆಯ್ದುಕೊಳ್ಳುವ ಕೆಲಸವನ್ನು 'ಅಕ್ಕಲಾಯುವುದು' ಎನ್ನುತ್ತಾರೆ. ಚೆಲ್ಲಾಡಿ ಬಿದ್ದಿರುವ ಅಕ್ಕಿಯನ್ನು ಆಯ್ದು ತರುವುದು ಇದನ್ನೇ ಹೋಲುವಂತಹ ಒಂದು ಕಸುಬು ಆಗಿರಬಹುದು.

ಕಲ್ಯಾಣ ಪಟ್ಟಣದಲ್ಲಿದ್ದ ಬಸವಣ್ಣನವರ ಮಹಾಮನೆಗೆ ನಾಡಿನ ಎಲ್ಲಾ ಕಡೆಗಳಿಂದಲೂ ಬರುತ್ತಿದ್ದ ಸಾವಿರಾರು ಮಂದಿ ಶಿವಶರಣ ಶರಣೆಯರಿಗೆ ಪ್ರತಿನಿತ್ಯವೂ ದಾಸೋಹ ನಡೆಯುತ್ತಿತ್ತು. ಅಂತಹ ಸಮಯದಲ್ಲಿ ಅಲ್ಲಲ್ಲಿ ಹರಡಿಕೊಂಡಂತೆ ಮಹಾಮನೆಯ ಅಂಗಳದಲ್ಲಿ ಚೆಲ್ಲಾಡಿ ಬಿದ್ದಿರುತ್ತಿದ್ದ ಅಕ್ಕಿಯನ್ನು ಆಯ್ದು ತರುತ್ತಿದ್ದ ಮಾರಯ್ಯನಿಗೆ ಆಯ್ದಕ್ಕಿ ಮಾರಯ್ಯನೆಂಬ ಹೆಸರು ಬಂದಿತ್ತು. ಅಮರೇಶ್ವರ ಗ್ರಾಮದವರಾದ ಈ ದಂಪತಿಗಳು ಕಲ್ಯಾಣ ಪಟ್ಟಣದಲ್ಲಿ ಬಸವಣ್ಣನವರು ಮಾಡುತ್ತಿದ್ದ ಸಾಮಾಜಿಕ ಒಳಿತಿನ ಕೆಲಸಗಳ ಸುದ್ದಿಯನ್ನು ಕೇಳಿ, ತಮ್ಮ ಊರನ್ನು ಬಿಟ್ಟು ಕಲ್ಯಾಣಕ್ಕೆ ಬಂದು ನೆಲಸಿದ್ದರು. ಆಯ್ದಕ್ಕಿ ಲಕ್ಕಮ್ಮ ಮತ್ತು ಆಯ್ದಕ್ಕಿ ಮಾರಯ್ಯನವರ ಕುಟುಂಬದಲ್ಲಿ ಒಂದು ದಿನ ನಡೆದ ಪ್ರಸಂಗವೊಂದರ ಚಿತ್ರಣವು ಈ ಮುಂದಿನ ನಾಲ್ಕು ವಚನಗಳಲ್ಲಿ ರೂಪುಗೊಂಡಿದೆ.



೧೮. ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ
ಭಾವಶುದ್ಧವಾಗಿ ಮಹಾಶರಣರ
ತಿಪ್ಪೆಯ ತಪ್ಪಲ ಅಕ್ಕಿಯ ತಂದು
ನಿಶ್ಚೈಸಿ ಮಾಡಬೇಕು ಮಾರಯ್ಯ ಪ್ರಿಯ ಅಮರೇಶ್ವರಲಿಂಗಕ್ಕೆ
ಬೇಗ ಹೋಗು ಮಾರಯ್ಯಾ.

**ಬಸವಣ್ಣನವರ ಮಹಾಮನೆಯ ಅಂಗಳದಿಂದ ಎಂದಿನಂತೆ ಅಕ್ಕಿಯನ್ನು ಆಯ್ದು ತರಲು ಹೋಗಬೇಕಾಗಿದ್ದ ಮಾರಯ್ಯನು ಅಂದು ಹೋಗಿರಲಿಲ್ಲ. ಆಗ ಲಕ್ಕಮ್ಮನು ತನ್ನ ಗಂಡನಿಗೆ ಅಲ್ಲಿಗೆ ಹೋಗಿಬರಬೇಕಾಗಿರುವುದನ್ನು ನೆನಪಿಸುತ್ತಾಳೆ.**

(ಕಾಯಕ=ದುಡಿಮೆ/ಕಸುಬು/ಕೆಲಸ; ನಿಂದು+ಇತ್ತು; ನಿಂದು=ನಡೆಯದೆ/ಮುಂದುವರಿಯದೆ/ಮುಂದೆ ಸಾಗದೆ; ಇತ್ತು=ಇರುವುದು; ನಿಂದಿತ್ತು=ನಿಂತುಹೋಗಿದೆ; ಹೋಗು+ಅಯ್ಯಾ; ಹೋಗು=ತೆರಳು/ನಡೆ; ಅಯ್ಯಾ=ವ್ಯಕ್ತಿಗಳನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಕೆಯಾಗುವ ಪದ; ಎನ್ನ+ಆಳ್ದನೆ; ಎನ್ನ=ನನ್ನನ್ನು; ಆಳ್=ಗಂಡಸು; ಆಳ್ದನ್=ಗಂಡ/ಪತಿ; ಆಳ್ದನೆ=ಆಳುತ್ತಿರುವವನೆ/ಒಡೆಯನೆ;

ಭಾವಶುದ್ಧ+ಆಗಿ; ಭಾವ=ಮನಸ್ಸಿನ ಒಳಮಿಡಿತ/ಮನದ ಇಂಗಿತ/ಮನದ ಆಶಯ/ಮನದೊಳಗೆ ಮೂಡುವ ಸಂಗತಿಗಳು/ಸಂವೇದನೆಗಳು; ಶುದ್ಧ=ಮಡಿ/ಶುಚಿ/ಚೊಕ್ಕಟ/ನಿರ್ಮಲ;

ಭಾವಶುದ್ಧ=ಒಳ್ಳೆಯ ಒಳಮಿಡಿತಗಳಿಂದ ಕೂಡಿದ ಮನಸ್ಸು/ಒಳಿತನ್ನು ಮಾಡಬೇಕೆಂಬ ಇಂಗಿತದಿಂದ ಕೂಡಿರುವ ಮನಸ್ಸು; ಭಾವಶುದ್ಧವಾಗಿ =ಒಳ್ಳೆಯ ಮನಸ್ಸಿನಿಂದ/ಉದ್ದೇಶದಿಂದ ಕೂಡಿ;

ಮಹಾ=ದೊಡ್ಡ/ಹಿರಿಯ; ಶರಣ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು/ಶಿವನನ್ನು ಪೂಜಿಸುವವನು/

ಶಿವನಿಗೆ ಒಲಿದವನು; ಮಹಾಶರಣ=ಬಸವಣ್ಣನವರನ್ನು 'ಮಹಾಶರಣ' ಎಂಬ ಹೆಸರಿನಿಂದ ಇತರರು ಕರೆಯುತ್ತಿದ್ದರು/ಹೆಸರಿಸಿದ್ದರು;

ತಿಪ್ಪೆ=ಕಸದ ರಾಶಿ/ಗುಡ್ಡೆ; ತಪ್ಪಲು=ಹತ್ತಿರ/ಸಮೀಪ/ಬಳಿ;

ಅಕ್ಕಿ=ಬತ್ತದ ಹೊಟ್ಟನ್ನು ತೆಗೆದ ನಂತರ ದೊರೆಯುವ ಕಾಳು; ಮಹಾಶರಣರ ತಿಪ್ಪೆಯ ತಪ್ಪಲ ಅಕ್ಕಿ=ಬಸವಣ್ಣನವರ ಮಹಾಮನೆಯ ಅಂಗಳದಲ್ಲಿ ಇನ್ನಿತರ ಕಸಕಡ್ಡಿಗಳ ನಡುವೆ ಹರಡಿಕೊಂಡಂತೆ ಬಿದ್ದಿರುವ ಅಕ್ಕಿ/ಅಕ್ಕಿಯ ಕಾಳುಗಳು; ತಂದು=ತೆಗೆದುಕೊಂಡು ಬಂದು/ಆಯ್ದುಕೊಂಡು ಬಂದು;

ನಿಶ್ಚೈಸಿ=ನಿಶ್ಚಯಿಸಿ/ತೀರ್ಮಾನಿಸಿ/ಗೊತ್ತುಮಾಡಿ ಕೊಂಡು; ನಿಶ್ಚೈಸಿ ಮಾಡಬೇಕು=ಮೊದಲೇ ಗೊತ್ತುಪಡಿಸಿ ಕೊಂಡಿರುವ ಕೆಲಸವನ್ನು ಮಾಡಬೇಕಾಗಿದೆ; ಮಾರಯ್ಯ=ಆಯ್ದಕ್ಕಿ ಲಕ್ಕಮ್ಮನ ಗಂಡನ ಹೆಸರು; ಪ್ರಿಯ=ನಲ್ಲ/ಒಲವು ನಲಿವಿನಿಂದ ಕೂಡಿರುವ ವ್ಯಕ್ತಿ; ಅಮರ+ಈಶ್ವರ; ಅಮರ=ಸಾವಿಲ್ಲದವನು/ದೇವತೆ; ಈಶ್ವರ=ಶಿವ/ಒಡೆಯ;

ಅಮರೇಶ್ವರ=ಅಮರೇಶ್ವರ ಎಂಬ ಊರಿನಲ್ಲಿದ್ದ ಲಿಂಗದ ಹೆಸರು/ಆಯ್ದಕ್ಕಿ ಮಾರಯ್ಯ ಮತ್ತು ಲಕ್ಕಮ್ಮ ದಂಪತಿಗಳ ಮೆಚ್ಚಿನ ದೇವರ ಹೆಸರು; ಆಯ್ದಕ್ಕಿ ಲಕ್ಕಮ್ಮನು 'ಮಾರಯ್ಯ ಪ್ರಿಯ ಅಮರೇಶ್ವರಲಿಂಗ' ಎಂಬುದನ್ನು ತಾನು ರಚಿಸಿದ ವಚನಗಳಲ್ಲಿ ಅಂಕಿತನಾಮವನ್ನಾಗಿ ಬಳಸಿದ್ದಾಳೆ.)



೧೯. ಆಸೆಯೆಂಬುದು ಅರಸಂಗಲ್ಲದೆ
ಶಿವಭಕ್ತರಿಗುಂಟೆ ಅಯ್ಯಾ
ರೋಷವೆಂಬುದು ಯಮದೂತರಿಗಲ್ಲದೆ
ಅಜಾತರಿಗುಂಟೆ ಅಯ್ಯಾ
ಈಸಕ್ಕಿಯಾಸೆ ನಿಮಗೇಕೆ
ಈಶ್ವರನೊಪ್ಪ
ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ
ದೂರ ಮಾರಯ್ಯ.

**ದಾಸೋಹಕ್ಕೆ ಬೇಕಾಗಿರುವುದಕ್ಕಿಂತಲೂ ಹೆಚ್ಚಾಗಿ ಅಕ್ಕಿಯನ್ನು ಆಯ್ದುಕೊಂಡು, ಅಕ್ಕಿಯ ದೊಡ್ಡ ಗಂಟನ್ನು ಹೊತ್ತು ಮನೆಗೆ ಬಂದ ಮಾರಯ್ಯನನ್ನು ಕಂಡು ಅಚ್ಚರಿ ಹಾಗೂ ಆತಂಕದಿಂದ ಲಕ್ಕಮ್ಮನು ಶಿವಶರಣರಾದವರು ಈ ಬಗೆಯಲ್ಲಿ ಆಸೆಯ ಸುಳಿಗೆ ಒಳಗಾಗಬಾರದೆಂಬ ಎಚ್ಚರಿಕೆಯನ್ನು ನೀಡುತ್ತಾಳೆ.**

(ಆಸೆ+ಎಂಬುದು; ಆಸೆ=ವ್ಯಕ್ತಿಯ ಒಲವು ನಲಿವಿಗೆ ಕಾರಣವಾಗುವ ಎಲ್ಲವನ್ನೂ ಹೆಚ್ಚುಹೆಚ್ಚಾಗಿ ಪಡೆಯಬೇಕೆಂಬ ಒಳಮಿಡಿತ/ಬಯಕೆ; ಎಂಬುದು=ಎನ್ನುವುದು; ಅರಸಂಗೆ+ಅಲ್ಲದೆ; ಅರಸಂಗೆ=ಅರಸನಿಗೆ; ಅರಸ=ರಾಜ/ದೊರೆ/ಆಳುವವನು/ಒಡೆಯ; ಅಲ್ಲದೆ=ಹೊರತುಪಡಿಸಿ; ಶಿವಭಕ್ತರಿಗೆ+ಉಂಟೆ; ಭಕ್ತ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು;

ಶಿವಭಕ್ತ=ಶಿವನನ್ನು ಪೂಜಿಸುವವನು/ಒಳ್ಳೆಯ ನಡೆನುಡಿಗಳಲ್ಲಿ ಶಿವನನ್ನು ಕಾಣುವವನು; ಉಂಟೆ=ಇರುತ್ತದೆಯೇ/ಇರುವುದೇ;

ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ=ನಾಡಿಗೆ ಅರಸನಾದವನು ಸದಾಕಾಲ ನಾಡಿನ ಎಲ್ಲೆಗಳನ್ನು ವಿಸ್ತರಿಸುವ/ಇತರರನ್ನು ಸದೆಬಡಿದು ಚಿನ್ನಬೆಳ್ಳಿ ನಗನಾಣ್ಯಗಳನ್ನು ಒಟ್ಟುಗೂಡಿಸಿ ತನ್ನ ಬೊಕ್ಕಸದ ಸಂಪತ್ತನ್ನು ಹೆಚ್ಚುಮಾಡಿಕೊಳ್ಳುವ ಒಳಮಿಡಿತಗಳಿಂದ ಕೂಡಿರುತ್ತಾನೆ. ಆದುದರಿಂದ ಆಸೆಯೆಂಬುದು ಅರಸನಿಗೆ ಸಹಜವಾದ ಒಳಮಿಡಿತ. ಆದರೆ ಸಹಮಾನವರೊಡನೆ ಹಂಚಿ ಉಣ್ಣಬೇಕೆಂಬ/ಎಲ್ಲರ ಒಳಿತಿನೊಡನೆ ತನ್ನ ಒಳಿತನ್ನು ಕಾಣಬೇಕೆಂಬ ಒಳಮಿಡಿತಗಳಿಂದ ಕೂಡಿರುವ ಶಿವಶರಣನಿಗೆ ತಾನೊಬ್ಬನೇ ಎಲ್ಲವನ್ನೂ ಪಡೆದುಕೊಳ್ಳಬೇಕೆಂಬ ಆಸೆಯು ಇರಬಾರದು ಎಂಬ ತಿರುಳನ್ನು ಈ ಸೊಲ್ಲು ಒಳಗೊಂಡಿದೆ;

ರೋಷ+ಎಂಬುದು; ರೋಷ=ಸಿಟ್ಟು/ಕೋಪ/ಆಕ್ರೋಶ; ಯಮದೂತರಿಗೆ+ಅಲ್ಲದೆ; ಯಮ=ಜಗತ್ತಿನಲ್ಲಿರುವ ಮಾನವ ಜೀವಿಗಳ ಪ್ರಾಣವನ್ನು ಕೊಂಡೊಯ್ದು, ಅವರು ತಮ್ಮ ಜೀವನದಲ್ಲಿ ಮಾಡಿರುವ ತಪ್ಪುಒಪ್ಪುಗಳಿಗೆ ತಕ್ಕಂತೆ ನರಕದಲ್ಲಿ ದಂಡನೆ ಇಲ್ಲವೇ ಸ್ವರ್ಗದಲ್ಲಿ ನಲಿವನ್ನು ನೀಡುವ ದೇವತೆ. ಈ ರೀತಿ ಒಬ್ಬ ದೇವತೆಯು ಮತ್ತೊಂದು ಲೋಕದಲ್ಲಿ ಇದ್ದಾನೆ ಎಂಬುದು ಜನಮನದಲ್ಲಿರುವ ಒಂದು ನಂಬಿಕೆಯಾಗಿದೆ;

ದೂತ=ಸೇವಕ/ಆಳು; ಯಮದೂತ=ಯಮನ ಆದೇಶಕ್ಕೆ ತಕ್ಕಂತೆ ಜಗದ ಜೀವಿಗಳ ಮಯ್ಯಲ್ಲಿರುವ ಪ್ರಾಣವನ್ನು ಸೆಳೆದು, ಯಮನ ಬಳಿಗೆ ಪ್ರಾಣವಾಯುವನ್ನು ಕೊಂಡೊಯ್ಯುವ ಸೇವಕ/ಆಳು; ಅಜಾತರಿಗೆ+ಉಂಟೆ; ಅಜಾತ=ಶಿವ/ಈಶ್ವರ/ಹುಟ್ಟು ಸಾವಿಲ್ಲದವನು; ಉಂಟೆ=ಇದೆಯೇ/ಇರುವುದೇ; 'ಅಜಾತರಿಗುಂಟೆ' ಎಂಬ ಪದಕಂತೆಯು ಒಳ್ಳೆಯ ನಡೆನುಡಿಗಳನ್ನುಳ್ಳ ವ್ಯಕ್ತಿಗಳಲ್ಲಿ ಕೇಡುಗಳಿಗೆ/ತಪ್ಪುಗಳಿಗೆ ಕಾರಣವಾಗುವಂತಹ ಸಿಟ್ಟು/ಸಿಡುಕು/ಕೋಪದ ಒಳಮಿಡಿತಗಳು ಇರುವುದಿಲ್ಲವೆಂಬ ತಿರುಳನ್ನು ಹೊಂದಿದೆ;

ಈಸು+ಅಕ್ಕಿ+ಆಸೆ; ಈಸು=ಈ ಪ್ರಮಾಣದ ಈ ಪಾಟಿ; ನಿಮಗೆ+ಏಕೆ; ಈಶ್ವರನ್+ಒಪ್ಪ; ಈಶ್ವರ=ಶಿವ/ದೇವರು; ಒಪ್ಪು=ಸಮ್ಮತಿಸು/ಮೆಚ್ಚು; ಒಪ್ಪ=ಒಪ್ಪುವುದಿಲ್ಲ/ಮೆಚ್ಚುವುದಿಲ್ಲ;

ಈಶ್ವರನೊಪ್ಪ=ಶಿವಶರಣಶರಣೆಯರ ಪಾಲಿಗೆ ಶಿವಪೂಜೆ ಎಂಬುದು ಸಾಮಾಜಿಕವಾದ ಒಳ್ಳೆಯ ನಡೆನುಡಿಗಳಿಂದ ಕೂಡಿದ ವರ್ತನೆಯಾಗಿತ್ತು. ಯಾವ ಬಗೆಯ ಕಾಯಕವು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವುದೋ ಅಂತಹುದನ್ನು ಮಾತ್ರ ಶಿವನು ಒಪ್ಪುತ್ತಾನೆ. ಸಮಾಜಕ್ಕೆ ಒಳಿತನ್ನು ಮಾಡದ/ಕೇಡನ್ನು ಬಗೆಯುವ/ಹಾನಿಮಾಡುವ ಯಾವುದೇ ಕಾಯಕವನ್ನು ಶಿವನು ಒಪ್ಪುವುದಿಲ್ಲವೆಂಬ ನಿಲುವು ಶಿವಶರಣ ಶರಣೆಯರಲ್ಲಿತ್ತು;

ದೂರ=ಸೇರದುದು/ಹೊರತಾದುದು; ಮಾರಯ್ಯಪ್ರಿಯ ಅಮಲೇಶ್ವರಲಿಂಗಕ್ಕೆ ದೂರ=ಅತಿಯಾಸೆಯಿಂದ ಮಾಡುವ ಯಾವುದೇ ಬಗೆಯ ಕೆಲಸವನ್ನು ದೇವರು ಒಪ್ಪುವುದಿಲ್ಲ/ಸ್ವೀಕರಿಸುವುದಿಲ್ಲ.)



೨೦. ಒಮ್ಮನವ ಮೀರಿ
ಇಮ್ಮನದಲ್ಲಿ ತಂದಿರಿ

ಇದು ನಿಮ್ಮ ಮನವೊ
ಬಸವಣ್ಣನ ಅನುಮಾನದ ಚಿತ್ತವೊ

ಈ ಮಾತು ಮಾರಯ್ಯ ಪ್ರಿಯ ಅಮರೇಶ್ವರಲಿಂಗಕ್ಕೆ
ಸಲ್ಲದ ಬೋನ
ಅಲ್ಲಿಯೇ ಸುರಿದು ಬನ್ನಿ ಮಾರಯ್ಯಾ.

**ಆಸೆಯ ಸುಳಿಗೆ ಸಿಲುಕಿ ತನ್ನ ಗಂಡನು ಮಾಡಿರುವ ಕೆಲಸವನ್ನು 'ತಪ್ಪು' ಎಂದು ಗುರುತಿಸಿ ಹೇಳುವುದರ ಜತೆಗೆ, ಗಂಡನು ಮಾಡಿರುವ ತಪ್ಪನ್ನು ತಿದ್ದಿ ಸರಿಪಡಿಸುವುದಕ್ಕಾಗಿ, ಅವನು ಹೆಚ್ಚಾಗಿ ತಂದಿರುವ ಅಕ್ಕಿಯನ್ನು ಮತ್ತೆ ಕೊಂಡುಹೋಗಿ ಬಸವಣ್ಣನವರ ಮಹಾಮನೆಯ ಅಂಗಳದಲ್ಲೇ ಸುರಿದು ಬರುವಂತೆ ಲಕ್ಕಮ್ಮನು ಸೂಚಿಸುತ್ತಾಳೆ.**

(ಒರ್+ಮನ=ಒರ್ಮನ/ಒಮ್ಮನ; ಒರ್=ಒಂದು; ಮನ=ಮನಸ್ಸು; ಒಮ್ಮನ=ಚಂಚಲತೆಯಿಲ್ಲದೆ ಅಂದರೆ ಅತ್ತಿತ್ತ ತುಯ್ದಾಡದೆ ಮನಸ್ಸಿನಲ್ಲಿ ತಳೆಯುವ ಒಂದೇ ಬಗೆಯ ನಿಲುವು/ತೀರ್ಮಾನ; ಮೀರಿ=ದಾಟಿ/ಕಡೆಗಣಿಸಿ;

ಇಮ್ಮನ+ಅಲ್ಲಿ; ಇರ್+ಮನ=ಇರ್ಮನ>ಇಮ್ಮನ; ಇರ್=ಎರಡು; ಇಮ್ಮನ=ಯಾವುದೇ ಒಂದು ಕೆಲಸವನ್ನು ಮಾಡುವುದೋ ಬೇಡವೋ ಎಂಬ ತೊಳಲಾಟದಿಂದ ಕೂಡಿದ ಮನಸ್ಸು/ಮನದಲ್ಲಿ ಮೂಡುವ ಇಬ್ಬಗೆಯ ಒಳಮಿಡಿತಗಳು; ತಂದಿರಿ=ತೆಗೆದುಕೊಂಡು ಬಂದಿರುವಿರಿ; ಇದು ನಿಮ್ಮ ಮನವೊ=ಈ ಕೆಲಸವನ್ನು ನೀವು ಉದ್ದೇಶಪಟ್ಟು ಮಾಡಿರುವಿರೋ;

ಅನುಮಾನ=ಸಂದೇಹ/ಸಂಶಯ/ಅಪನಂಬಿಕೆ; ಚಿತ್ತ=ಮನಸ್ಸು/ಉದ್ದೇಶ;

ಬಸವಣ್ಣನ ಅನುಮಾನದ ಚಿತ್ತವೊ=ಬಸವಣ್ಣನವರು ನಿಮ್ಮ ನಡೆನುಡಿಯನ್ನು ಒರೆಹಚ್ಚಿ ನೋಡಲೆಂದು ಇಂತಹ ಕೆಲಸವನ್ನು ಮಾಡಿದ್ದಾರೆಯೋ ಅಂದರೆ ಹೆಚ್ಚು ಅಕ್ಕಿಯನ್ನು ಅಂಗಳದಲ್ಲಿ ಚೆಲ್ಲುವಂತೆ ಮಾಡಿ, ನಿಮ್ಮ ಮನದಲ್ಲಿ ಆಸೆಯೆಂಬುದು ಹತೋಟಿಯಲ್ಲಿ ಇರುವುದೋ/ಇಲ್ಲವೋ ಎಂಬುದನ್ನು ತಿಳಿಯಲೆಂದು ಬಸವಣ್ಣನವರೇ ಹೂಡಿರುವ ಹುನ್ನಾರ ಇದಾಗಿರಬಹುದೇ;

ಈ ಮಾತು=ಈ ಬಗೆಯ ನುಡಿಗಳು/ಹೆಚ್ಚಿನ ಪ್ರಮಾಣದಲ್ಲಿ ಅಕ್ಕಿಯನ್ನು ತಂದಿರುವೆನೆಂಬ ನುಡಿಗಳು; ಸಲ್ಲು=ತಕ್ಕುದಾಗಿರು/ಯೋಗ್ಯವಾಗಿರು; ಸಲ್ಲದ=ತಕ್ಕುದಲ್ಲದ/ಯೋಗ್ಯವಲ್ಲದ/ಒಪ್ಪಿಗೆಯಾಗದ/ಸಮ್ಮತವಲ್ಲದ; ಬೋನ=ಅನ್ನ/ಆಹಾರ;

ಮಾರಯ್ಯಪ್ರಿಯ ಅಮಲೇಶ್ವರಲಿಂಗಕ್ಕೆ ಸಲ್ಲದ ಬೋನ=ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆದು ಸಂಪಾದಿಸಿದ ಸಂಪತ್ತಿನಲ್ಲಿ ಮಾಡುವ ಯಾವುದೇ ಬಗೆಯ ದೇವರ ಪೂಜೆ/ಜಂಗಮರ ಸೇವೆ/ದಾನದ ಕೆಲಸಗಳನ್ನು ದೇವರು ಮೆಚ್ಚುವುದಿಲ್ಲ/ಒಪ್ಪಿಸಿಕೊಳ್ಳುವುದಿಲ್ಲ;

ಅಲ್ಲಿಯೇ=ಎಲ್ಲಿಂದ ಆಯ್ದು ತಂದಿರುವಿರೋ ಆ ಜಾಗದಲ್ಲಿಯೇ ಅಂದರೆ ಬಸವಣ್ಣನವರ ಮಹಾಮನೆಯ ಅಂಗಳದಲ್ಲಿಯೇ; ಸುರಿ=ಚೆಲ್ಲು/ಹಾಕು; ಸುರಿದು ಬನ್ನಿ=ಹಾಕಿ ಬನ್ನಿರಿ.)



೨೧. ಸಂದಣಿಗೊಂಡು ಮನ ಹರುಷದಿಂದ
ಬಸವಣ್ಣನ ಅಂಗಳಕ್ಕೆ ಹೋಗಿ

ತಿಪ್ಪೆಯ ತಪ್ಪಲಲ್ಲಿ ಬಿದ್ದಿದ್ದ ತಂಡುಲವ ಕಟ್ಟಿಕೊಂಡು
ಎಯಿದಾಗಿ ತರಲು ಎಯಿದಾಗಿ ಬಂದಿತ್ತಲ್ಲಾ

ನಮಗೆ ಎಂದಿನಂದವೆ ಸಾಕು
ಮತ್ತೆ ಕೊಂಡು ಹೋಗಿ ಅಲ್ಲಿಯೆ ಸುರಿ

ಮಾರಯ್ಯಪ್ರಿಯ ಅಮರೇಶ್ವರಲಿಂಗ ಕೊಟ್ಟ
ಕಾಯಕವೆ ಸಾಕು ಮಾರಯ್ಯಾ.

**ಈ ಮೊದಲು ನೀವು ಪ್ರತಿನಿತ್ಯವೂ ಬಸವಣ್ಣನವರ ಮನೆಯ ಅಂಗಳದಿಂದ ದಾಸೋಹಕ್ಕೆ ಬೇಕಾದ ಅಕ್ಕಿಯನ್ನು ಆಯ್ದು ತರುತ್ತಿದ್ದುದು ನಮಗೆ ಸಾಕಾಗುತ್ತಿತ್ತು ಹಾಗೂ ಮನಸ್ಸಿಗೆ ನೆಮ್ಮದಿಯನ್ನೂ ನೀಡುತ್ತಿತ್ತು. ಆಯ್ದಕ್ಕಿಯಿಂದ ಶಿವಶರಣಶರಣೆಯರ ದಾಸೋಹವನ್ನು ನಮ್ಮಂತೆಯೇ ನಿತ್ಯವೂ ಮಾಡುವವರ ಪಾಲಿಗೆ ದೊರೆಯಬೇಕಾಗಿದ್ದ ಅಕ್ಕಿಯನ್ನು ಹೆಚ್ಚಿನ ಆಸೆಗೆ ಒಳಗಾಗಿ ನಾವು ತಂದು ಬಳಸುವುದು ಸರಿಯಲ್ಲ. ಹೆಚ್ಚಾದ ಅಕ್ಕಿಯನ್ನು ಅಲ್ಲಿಯೇ ಹಾಕಿಬನ್ನಿರೆಂದು ಮಾರಯ್ಯನಿಗೆ ಲಕ್ಕಮ್ಮನು ಸೂಚಿಸುತ್ತಾಳೆ.**

(ಸಂದಣಿ+ಕೊಂಡು; ಸಂದಣಿ=ಸಡಗರ/ಉತ್ಸಾಹ/ಹುಮ್ಮಸ್ಸು/ಹುರುಪು; ಕೊಂಡು=ಹೊಂದಿ/ಪಡೆದು/ಕೂಡಿ; ಸಂದಣಿಗೊಂಡು=ಸಡಗರದಿಂದ/ಉತ್ಸಾಹದಿಂದ ಕೂಡಿ; ಮನ=ಮನಸ್ಸು; ಹರುಷದ+ಇಂದ; ಹರುಷ=ಆನಂದ/ಹಿಗ್ಗು/ಉಲ್ಲಾಸ; ಅಂಗಳ=ಮನೆಯ ಮುಂದಿರುವ ದೊಡ್ಡದಾಗ ಜಾಗ/ಬಯಲು/ತೆರೆದ ಆವರಣ; ಬಸವಣ್ಣನ ಅಂಗಳ=ಬಸವಣ್ಣನವರ ಮಹಾಮನೆಯ ಮುಂದಿನ ಬಯಲು/ಜಾಗ;

ತಿಪ್ಪೆಯ ತಪ್ಪಲು+ಅಲ್ಲಿ; ತಿಪ್ಪೆಯ ತಪ್ಪಲು=ಕಸಕಡ್ಡಿಗಳಿಂದ ಕೂಡಿರುವ ಮನೆಯ ಮುಂದಣ ಅಂಗಳ/ಬಯಲಾಗಿರುವ ಜಾಗ/ತೆರೆದ ಜಾಗ; ಬಿದ್ದು+ಇದ್ದ;

ಬಿದ್ದಿದ್ದ=ಬಿದ್ದಿರುವ; ತಂಡುಲ=ಅಕ್ಕಿ; ಕಟ್ಟಿಕೊಂಡು=ಸಂಗ್ರಹಿಸಿಕೊಂಡು; ಎಯಿದು+ಆಗಿ; ಎಯ್ದು=ಪಡೆ/ಹೊಂದು/ಸೇರು/ಚೆನ್ನಾಗಿ/ಪೂರ್ತಿಯಾಗಿ/ಅತಿಶಯವಾಗಿ;

ಎಯಿದಾಗಿ ತರಲು=ಪಡೆದುಕೊಂಡು ತರುತ್ತಿದ್ದಾಗ; ಬಂದಿತ್ತು+ಅಲ್ಲಾ; ಅಲ್ಲಾ=ಅಲ್ಲವೇ; ಎಯಿದಾಗಿ ಬಂದಿತ್ತಲ್ಲಾ=ಎಲ್ಲವೂ ಚೆನ್ನಾಗಿತ್ತಲ್ಲವೇ; ಎಂದಿನ+ಅಂದವೆ; ಎಂದಿನ=ಪ್ರತಿದಿನದಂತೆ/ಎಲ್ಲಾ ದಿನಗಳಂತೆ; ಅಂದ=ರೀತಿ/ಬಗೆ;

ಎಂದಿನಂದವೆ ಸಾಕು=ಈ ಮೊದಲು ಪ್ರತಿನಿತ್ಯ ಮಾತ್ರ ತರುತ್ತಿದ್ದುದೇ ನೆಮ್ಮದಿಯಾಗಿತ್ತು; ಮತ್ತೆ=ತಿರುಗಿ/ಮರಳಿ; ಕೊಂಡು ಹೋಗಿ=ತೆಗೆದುಕೊಂಡು ಹೋಗಿ; ಅಲ್ಲಿಯೆ=ಬಸವಣ್ಣನವರ ಮಹಾಮನೆಯ ಅಂಗಳದಲ್ಲಿಯೆ; ಸುರಿ=ಹಾಕು/ಚೆಲ್ಲು/ಹರಡು; ಕಾಯಕ=ಕಸುಬು/ಕೆಲಸ)



# ಉರಿಲಿಂಗಪೆದ್ದಿ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಊರು | : | ಹುಟ್ಟಿದ್ದು ಆಂಧ್ರಪ್ರದೇಶ.<br>ಅನಂತರ ಬಸವಣ್ಣನವರು ಇದ್ದ<br>ಕಲ್ಯಾಣನಗರಕ್ಕೆ ಬಂದು ನೆಲೆಸುತ್ತಾರೆ. |
| ಹೆಂಡತಿ | : | ಕಾಳವ್ವೆ |
| ದೊರೆತಿರುವ ವಚನಗಳು | : | ೩೫೮ |
| ವಚನಗಳ ಅಂಕಿತನಾಮ | : | ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ. |

೨೨. ಅಮೃತ ಸರ್ವರಿಗೂ
ಅಮೃತವಾಗಿಪ್ಪುದಲ್ಲದೆ
ಕೆಲಬರಿಗೆ ಅಮೃತವಾಗಿ
ಕೆಲಬರಿಗೆ ವಿಷವಾಗದು ನೋಡಾ

ಎಂತು ಅಂತೆ
ಶ್ರೀಗುರು ಸರ್ವರಿಗೆಯೂ
ಗುರುವಾಗಿರಬೇಕಯ್ಯಾ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಗುರುವಾದವನು ತನ್ನ ಬಳಿ ಬಂದ ಮಕ್ಕಳನ್ನು ಜಾತಿ, ಮತ, ಲಿಂಗ, ಸಂಪತ್ತು, ಗದ್ದುಗೆ, ಪ್ರಾಂತ್ಯದ ಹಿನ್ನೆಲೆಯಲ್ಲಿ ಒಬ್ಬರು ಮೇಲು ಇಲ್ಲವೇ ಮತ್ತೊಬ್ಬರು ಕೀಳು ಎಂದು ತಾರತಮ್ಯ ಮಾಡದೆ, ಎಲ್ಲರಿಗೂ ವಿದ್ಯೆಯನ್ನು ಒಲವಿನಿಂದ ಹೇಳಿಕೊಡಬೇಕು ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ಅಮೃತ=ಜನಮನದ ಕಲ್ಪನೆಯಲ್ಲಿ ರೂಪುಗೊಂಡಿರುವ ಒಂದು ಬಗೆಯ ಪಾನೀಯ. ಇದನ್ನು ಕುಡಿದ ವ್ಯಕ್ತಿಗಳು ಅಮರರಾಗುತ್ತಾರೆ ಅಂದರೆ ಸಾವಿಲ್ಲದವರಾಗುತ್ತಾರೆ ಎಂಬ ದಂತಕತೆಯು ಜನಸಮುದಾಯದ ಮನದಲ್ಲಿದೆ; ಸರ್ವ=ಸಕಲ/ಎಲ್ಲ/ಸಮಸ್ತ/ಎಲ್ಲವನ್ನು ಒಳಗೊಂಡಿರುವುದು; ಸರ್ವರಿಗೂ= ಎಲ್ಲರಿಗೂ/ಸಕಲರಿಗೂ/ಸಮಸ್ತರಿಗೂ/ಇರುವ ಜನರೆಲ್ಲರಿಗೂ; ಅಮೃತ+ಆಗಿ+ ಇಪ್ಪುದು+ಅಲ್ಲದೆ; ಆಗು=ಇರು/ವರ್ತಿಸು; ಇಪ್ಪುದು=ಇರುವುದು; ಆಗಿರ್ಪುದು =ಆಗಿರುವುದು;

ಅಮೃತ ಸರ್ವರಿಗೂ ಅಮೃತವಾಗಿಪ್ಪುದು=ಕುಡಿದವರೆಲ್ಲರಿಗೂ 'ಅಮೃತವು' ಒಳ್ಳೆಯದನ್ನೇ ಉಂಟುಮಾಡುತ್ತದೆ;

ಅಲ್ಲದೆ=ಅದಕ್ಕೆ ಹೊರತಾಗಿ/ಬದಲಾಗಿ; ಕೆಲ=ತುಸು/ಕೊಂಚ/ಸ್ವಲ್ಪ; ಕೆಲಬರಿಗೆ=ಕೆಲವರಿಗೆ ಮಾತ್ರ; ಅಮೃತ+ಆಗಿ; ವಿಷ+ಆಗದು; ವಿಷ=ನಂಜು/ಗರಳ/ಸೇವಿಸಿದವರಿಗೆ ಸಾವನ್ನು ಉಂಟುಮಾಡುವ ವಸ್ತು; ಆಗದು=ಆಗುವುದಿಲ್ಲ; ನೋಡು=ಕಾಣು/ತಿಳಿ; ನೋಡಾ=ವಿಚಾರಿಸಿ ತಿಳಿಯುವುದು/ಆಲೋಚನೆಯನ್ನು ಮಾಡಿದಾಗ ತಿಳಿದು ಬರುವ ವಾಸ್ತವ;

ಕೆಲಬರಿಗೆ ಅಮೃತವಾಗಿ ಕೆಲಬರಿಗೆ ವಿಷವಾಗದು=ಜನರೆಲ್ಲರೂ 'ಅಮೃತವನ್ನು' ಕುಡಿದಾಗ, ಅದು ಕೆಲವರ ಪಾಲಿಗೆ ಅಮೃತವಾಗಿ, ಮತ್ತೆ ಕೆಲವರ ಪಾಲಿಗೆ ನಂಜಾಗುವುದಿಲ್ಲ. ಅಂದರೆ ಎಲ್ಲರಿಗೂ ಒಂದೇ ರೀತಿಯಲ್ಲಿ ಒಳಿತನ್ನುಂಟು ಮಾಡುತ್ತದೆ;

ಎಂತು=ಯಾವ ರೀತಿಯಲ್ಲಿ/ಬಗೆಯಲ್ಲಿ; ಅಂತೆ=ಅಂತೆ/ಹಾಗೆ;

ಶ್ರೀ+ಗುರು; ಶ್ರೀ=ಮಂಗಳಕರವಾದ/ಒಳಿತನ್ನುಂಟು ಮಾಡುವ/ಗುರುಹಿರಿಯರಿಗೆ ಒಲವು ನಲಿವನ್ನು ಸೂಚಿಸುವಾಗ ಬಳಸುವ ಪದ; ಗುರು=ತನ್ನ ಬಳಿ ಬಂದ ವ್ಯಕ್ತಿಗಳಿಗೆ/ಗುಡ್ಡರಿಗೆ ತಿಳುವಳಿಕೆಯನ್ನು ನೀಡಿ, ಅವರ ನಡೆನುಡಿಗಳನ್ನು ತಿದ್ದಿತೀಡಿ, ಅವರನ್ನು ಒಳ್ಳೆಯ ಬಗೆಯಲ್ಲಿ ರೂಪಿಸುವ ವ್ಯಕ್ತಿ; ಶ್ರೀಗುರು=ಗುಡ್ಡರಿಗೆ ಅರಿವನ್ನು ನೀಡಿ ಒಳ್ಳೆಯ ವ್ಯಕ್ತಿತ್ವವನ್ನು ರೂಪಿಸುವ ವ್ಯಕ್ತಿ; ಸರ್ವರಿಗೆಯೂ=ಎಲ್ಲರಿಗೂ/ಸಕಲರಿಗೂ/ಯಾರೊಬ್ಬರನ್ನು ಹೊರತುಪಡಿಸದೆ/ಎಲ್ಲರನ್ನೂ ಒಳಗೊಂಡು; ಗುರು+ಆಗಿ+ಇರಬೇಕು+ಅಯ್ಯಾ; ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ;

ಶ್ರೀಗುರು ಸರ್ವರಿಗೂ ಗುರುವಾಗಿರಬೇಕು=ತನ್ನ ಬಳಿ ಬಂದ ಮಕ್ಕಳೆಲ್ಲರನ್ನೂ/ವ್ಯಕ್ತಿಗಳೆಲ್ಲರನ್ನೂ ಸಮಾನವಾದ ಒಲವು ನಲಿವಿನಿಂದ ಕಂಡು, ಎಲ್ಲರ ಏಳಿಗೆಗಾಗಿ ಮಿಡಿಯುವ ಮನಸ್ಸನ್ನು ಮತ್ತು ಎಲ್ಲರ ವ್ಯಕ್ತಿತ್ವವನ್ನು ಒಳ್ಳೆಯ ರೀತಿಯಲ್ಲಿ ರೂಪಿಸುವ ಹೊಣೆಗಾರಿಕೆಯನ್ನು ಗುರು ಹೊಂದಿರಬೇಕು;

ಪ್ರಿಯ=ಅಕ್ಕರೆ/ಒಲುಮೆ/ಪ್ರೀತಿ/ಬೇಕಾದವನು; ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ=ದೇವರ ಹೆಸರು/ಉರಿಲಿಂಗಪೆದ್ದಿಯ ವಚನಗಳ ಅಂಕಿತನಾಮ;

"ಅಮೃತ ಸರ್ವರಿಗೂ ಅಮೃತವಾಗಿಪ್ಪುದಲ್ಲದೆ ಕೆಲಬರಿಗೆ ಅಮೃತವಾಗಿ ಕೆಲಬರಿಗೆ ವಿಷವಾಗದು ನೋಡಾ" – ವಚನಕಾರನಿಗೆ ಈ ಬಗೆಯ ಚಿಂತನೆಯು ಮೂಡಲು ಕಾರಣ ಏನಿರಬಹುದೆಂಬುದನ್ನು ಮತ್ತೊಂದು ನೆಲೆಯಿಂದ ನೋಡಬಹುದಾಗಿದೆ.

ಇಂಡಿಯಾ ದೇಶದ ಪ್ರಾಚೀನ ಕಾಲದ ಸಾಮಾಜಿಕ ರಚನೆಯಲ್ಲಿ "ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ" ಎಂಬ ವರ್ಣಗಳಿದ್ದವು. ದೇವರ ಮೊಗದಿಂದ ಬ್ರಾಹ್ಮಣ, ತೋಳುಗಳಿಂದ 'ಕ್ಷತ್ರಿಯ', ತೊಡೆಗಳಿಂದ 'ವೈಶ್ಯ', ಪಾದಗಳಿಂದ ಶೂದ್ರರು ಹುಟ್ಟಿ ಬಂದಿದ್ದಾರೆ. ಪಾದವು ಹೇಗೆ ದೇಹದ ತೂಕವನ್ನು ಹೊರುತ್ತದೆಯೋ ಅಂತೆಯೇ, ಶೂದ್ರರು "ಬ್ರಾಹ್ಮಣರ/ಕ್ಷತ್ರಿಯರ/ವೈಶ್ಯರ" ಸೇವೆಯಲ್ಲಿಯೇ ತಮ್ಮ ಬದುಕನ್ನು ಕಳೆಯಬೇಕು ಎಂಬ ಸಾಮಾಜಿಕ ಕಟ್ಟಲೆಯು ಅಂದಿನ ಸಮಾಜದಲ್ಲಿತ್ತು.

ಈ ನಾಲ್ಕು ವರ್ಣದವರಲ್ಲಿ ಬ್ರಾಹ್ಮಣನು ಮೇಲಿನ ಹಂತದಲ್ಲಿದ್ದರೆ, ಶೂದ್ರನು ಕೆಳಹಂತದಲ್ಲಿದ್ದನು. ಇನ್ನುಳಿದ 'ಕ್ಷತ್ರಿಯರು' ಮತ್ತು 'ವೈಶ್ಯರು' ನಡುವಣ ಹಂತದಲ್ಲಿದ್ದರು. ಕೆಳ ಹಂತದಲ್ಲಿದ್ದ ಶೂದ್ರನಿಗೆ "ತಿಳುವಳಿಕೆಯನ್ನು ನೀಡಬಾರದು; ವೇದಗಳನ್ನು ಕಲಿಸಬಾರದು; ವೇದಗಳನ್ನು ಓದಲು ಬಿಡಬಾರದು; ಒಂದು ವೇಳೆ ಶೂದ್ರನು ಸ್ವಪ್ರಯತ್ನದಿಂದ ವೇದಗಳನ್ನು ಕಲಿತು ಓದಲು ತೊಡಗಿದರೆ, ಆತನ ನಾಲಿಗೆಯನ್ನು ಸೀಳಬೇಕು, ಕಿವಿಗಳಿಗೆ ಕಾದ ಎಣ್ಣೆಯನ್ನು ಸುರಿಯಬೇಕು, ತಲೆಯನ್ನು ಕಡಿಯಬೇಕು" ಎಂಬ ಸಾಮಾಜಿಕ ಹಾಗೂ ಮತೀಯ ನಿಯಮಗಳು ಜಾರಿಯಲ್ಲಿದ್ದುದನ್ನು ಪ್ರಾಚೀನ ಕಾಲದಲ್ಲಿ ರಚನೆಗೊಂಡಿದ್ದ ಹೊತ್ತಿಗೆಗಳಲ್ಲಿ ವಿವರಿಸಲಾಗಿದೆ.

'ವೇದ' ಎಂದರೆ ಅರಿವು/ತಿಳುವಳಿಕೆ/ಅಕ್ಕರದ ಮೂಲಕ ಪಡೆದುಕೊಳ್ಳುವ ವಿವೇಕ. ಸಮಾಜದಲ್ಲಿರುವ ಎಲ್ಲ ವ್ಯಕ್ತಿಗಳಿಗೂ ಅರಿವು ಬೇಕು. ಏಕೆಂದರೆ ಅರಿವನ್ನು ಪಡೆದ ವ್ಯಕ್ತಿಗೆ ಎಲ್ಲರಂತೆ ತಾನೂ ತಲೆಯೆತ್ತಿ ಬಾಳಬೇಕೆಂಬ ಹುಮ್ಮಸ್ಸು ಮತ್ತು ಕೆಚ್ಚು ಮನದಲ್ಲಿ ಹುಟ್ಟುತ್ತದೆ.

ಆದರೆ ಮೇಲು ಕೀಳಿನ ವರ್ಣ ತಾರತಮ್ಯದ ಹೆಸರಿನಲ್ಲಿ ಶೂದ್ರರಿಗೆ ವಿದ್ಯೆಯನ್ನು ಅಂದರೆ ಅಕ್ಕರದ ಕಲಿಕೆಯನ್ನು ನಿರಾಕರಿಸಿದ್ದ ಪಾಚೀನ ಸಮಾಜದ ಕಟ್ಟುಪಾಡುಗಳು ಶೂದ್ರರನ್ನು ಮೇಲು ವರ್ಣದವರ ಅಡಿಯಾಳುಗಳನ್ನಾಗಿ ಮಾಡಿದ್ದವು ಮತ್ತು ಶೂದ್ರರು ಮೇಲುಮಟ್ಟದ ಸಾಮಾಜಿಕ ಅಂತಸ್ತನ್ನು, ಗದ್ದುಗೆಯನ್ನು ಗಳಿಸದಂತೆ ಅಡೆತಡೆಗಳನ್ನು ಒಡ್ಡಿದ್ದವು.

ವಿದ್ಯೆಯ ಕಲಿಕೆಯಲ್ಲಿದ್ದ ಈ ಬಗೆಯ ಸಾಮಾಜಿಕ ತಾರತಮ್ಯವನ್ನು ಗಮನಿಸಿದ್ದ ವಚನಕಾರನು "ಅಮೃತ"ವನ್ನು ಒಂದು ರೂಪಕವನ್ನಾಗಿ ಮಾಡಿಕೊಂಡು, ಅದನ್ನು ತಿಳುವಳಿಕೆಗೆ ಸಂಕೇತವನ್ನಾಗಿ ಮಾಡಿಕೊಂಡು ತನ್ನ ಚಿಂತನೆಯನ್ನು ವ್ಯಕ್ತಪಡಿಸಿದ್ದಾನೆ.

ಮೇಲು ವರ್ಣದವರಿಗೆ 'ಅಮೃತ'ವಾಗುವ ವಿದ್ಯೆಯು ಕೆಳ ವರ್ಣದವರಿಗೆ ಏಕೆ, ಹೇಗೆ ನಂಜಾಗುತ್ತದೆ ಎಂಬ ಪ್ರಶ್ನೆಯು ವಚನಕಾರನನ್ನು ಕಾಡಿದೆ. ಒಟ್ಟು ಜನಸಮುದಾಯದ ಸಂಕೆಯಲ್ಲಿ ಶೇ.೮೦ ಕ್ಕಿಂತ ಹೆಚ್ಚು ಮೊತ್ತದಲ್ಲಿದ್ದ ಶೂದ್ರರು ಮತ್ತು ಎಲ್ಲ ವರ್ಣಗಳಿಗೆ ಸೇರಿದ ಹೆಂಗಸರು ವೇದವನ್ನು ಕಲಿಯದಂತೆ, ಕೇಳದಂತೆ, ಓದದಂತೆ ತಡೆಹಿಡಿದಿದ್ದ, ಒಟ್ಟಾರೆಯಾಗಿ ಅಕ್ಕರ ವಿದ್ಯೆಯನ್ನು ಕಲಿಯದಂತೆ ಮಾಡಿ, ಅವರನ್ನು ಮಾನಸಿಕವಾಗಿ ಬೆಳೆಯದಂತೆ ಕಟ್ಟುಪಾಡುಗಳನ್ನು ಹಾಕಿದ್ದ ಪ್ರಾಚೀನ ಸಮಾಜದ ಆಚರಣೆಯಲ್ಲಿದ್ದ ಕ್ರೂರತನದ ಮತ್ತು ವಂಚನೆಯ ಕಟ್ಟುಪಾಡುಗಳನ್ನು ವಚನಕಾರನು ಮೆಲುದನಿಯಲ್ಲೇ ಟೀಕಿಸುತ್ತಾ, ಮೆದುನುಡಿಗಳಿಂದಲೇ ವಿದ್ಯೆಯನ್ನು ಹೇಳಿಕೊಡುವ ಗುರುವಿನ ವ್ಯಕ್ತಿತ್ವ ಹೇಗಿರಬೇಕೆಂಬುದನ್ನು ಸೂಚಿಸಿದ್ದಾನೆ.



# ಕಂಬದ ಮಾರಿತಂದೆ

ಕಾಲ : ಕ್ರಿ.ಶ. ಹನ್ನೆರಡನೆಯ ಶತಮಾನ

ದೊರೆತಿರುವ ವಚನಗಳು : ೧೧

ವಚನಗಳ ಅಂಕಿತನಾಮ : ಕದಂಬಲಿಂಗ

(ಕಂಬದ ಮಾರಿತಂದೆಯ ವಚನವೊಂದರಿಂದ ಆಯ್ದ ಸಾಲುಗಳು)

೨೩. ನುಡಿವಲ್ಲಿ ಏನನಹುದು
ಏನನಲ್ಲಾಯೆಂಬ
ಠಾವನರಿಯಬೇಕು

ಮಾತ ಬಲ್ಲೆನೆಂದು ನುಡಿಯದೆ
ನೀತಿವಂತನೆಂದು ಸುಮ್ಮನಿರದೆ

ಆ ತತ್ಕಾಲದ ನೀತಿಯನರಿದು
ಸಾತ್ವಿಕ ಲಕ್ಷಣದಲ್ಲಿಪ್ಪಾತನ ಲಕ್ಷಣವೇ
ನಿರೀಕ್ಷಣ ಕದಂಬಲಿಂಗಾ.

**ನಾವು ಆಡುವ ಮಾತುಗಳು ವಾಸ್ತವದ ತಿಳುವಳಿಕೆಯಿಂದ ಕೂಡಿ, ಹಿತಮಿತವಾಗಿರಬೇಕು ಎಂಬ ಸಂಗತಿಯನ್ನು ಈ ಸಾಲುಗಳಲ್ಲಿ ಹೇಳಲಾಗಿದೆ.**

**"ಹಿತಮಿತವಾದ ಮಾತು" ಎಂದರೆ ನಾವು ಆಡುವ ಮಾತುಗಳು ಕೇಳುವವರ ಮನಸ್ಸಿಗೆ ಅರಿವು ಮತ್ತು ಆನಂದವನ್ನು ನೀಡುವಂತಿರಬೇಕು. ನಾವು ಆಡುವ ಮಾತಿನ ಮೇಲೆ ಹತೋಟಿಯನ್ನಿಟ್ಟುಕೊಂಡು ಅಗತ್ಯವಿದ್ದಾಗ ಮಾತನಾಡುವುದನ್ನು ಮತ್ತು ಅಗತ್ಯವಿಲ್ಲದಿದ್ದಾಗ ಸುಮ್ಮನಿರುವುದನ್ನು ಕಲಿತಿರಬೇಕು.**

(ನುಡಿ+ಅಲ್ಲಿ; ನುಡಿ=ಮಾತು/ಸೊಲ್ಲು; ನುಡಿವಲ್ಲಿ=ಮಾತನಾಡುವಾಗ/ಮಾತನಾಡುವುದಕ್ಕೆ ಮೊದಲು; ಏನ್+ಅನ್+ಅಹುದು; ಏನ್=ಯಾವುದು; ಅನ್=ಅನ್ನು; ಏನನ್=ಯಾವುದನ್ನು/ಯಾವುದೇ ಒಂದು ಸಂಗತಿಯನ್ನು/ವಿಚಾರವನ್ನು; ಅಹುದು=ನಿಜ/ದಿಟ/ವಾಸ್ತವ/ಸತ್ಯ; ಏನ್+ಅನ್+ಅಲ್ಲಾ+ಎಂಬ; ಅಲ್ಲ=ಇಲ್ಲ/ಆ ರೀತಿಯಲ್ಲಿಲ್ಲ/ಆ ಬಗೆಯಲ್ಲಿಲ್ಲ; ಎಂಬ=ಎನ್ನುವ; ಠಾವು+ಅನ್+ಅರಿ+ಬೇಕು; ಠಾವು=ಎಡೆ/ಜಾಗ/ಠಾಣ/ತಾವು/ನೆಲೆ; ಅರಿ=ತಿಳಿ/ಕಲಿ; ಅರಿಯಬೇಕು=ತಿಳಿದುಕೊಳ್ಳಬೇಕು/ಅರಿತುಕೊಳ್ಳಬೇಕು;

ನುಡಿವಲ್ಲಿ ಏನನಹುದು ಏನನಲ್ಲಾಯೆಂಬ ಠಾವನರಿಯಬೇಕು=ಮಾನವ ಸಮುದಾಯದ ಬದುಕಿನಲ್ಲಿ "ಯಾವುದು ಸರಿ/ಯಾವುದು ತಪ್ಪು; ಯಾವುದು ದಿಟ/ಯಾವುದು ದಿಟವಲ್ಲ; ಯಾವುದು ವಾಸ್ತವ/ಯಾವುದು ತಪ್ಪು ಗ್ರಹಿಕೆ" ಎಂಬ ಸಂಗತಿಗಳನ್ನು ಚೆನ್ನಾಗಿ ಅರಿತುಕೊಂಡು ಮಾತನಾಡಬೇಕಾದರೆ ಮಾನವ ಸಮುದಾಯ ಕಟ್ಟಿಕೊಂಡಿರುವ ಸಾಮಾಜಿಕ ಒಕ್ಕೂಟಗಳಾದ ಜಾತಿ, ಮತ, ದೇಗುಲಗಳಿಂದ ಮಾನವರ ಬದುಕಿನ ಮೇಲಾಗಿರುವ ಪರಿಣಾಮಗಳನ್ನು ಮೊದಲು ಮನದಟ್ಟು ಮಾಡಿಕೊಳ್ಳಬೇಕು.

ಜಾತಿಮತದ ಕಟ್ಟುಪಾಡುಗಳು ಮತ್ತು ಸಂಪ್ರದಾಯಗಳು ಹೇಗೆ ಮಾನವ ಸಮುದಾಯವನ್ನು ಅನೇಕ ಗುಂಪುಗಳಾಗಿ ವಿಂಗಡಿಸಿ, ಬೇರೆ ಬೇರೆ ಜಾತಿಮತಗಳಿಗೆ ಸೇರಿದ ಜನರ ನಡುವೆ ಪರಸ್ಪರ ಅಪನಂಬಿಕೆ, ಅಸೂಯೆ, ಹಗೆತನ, ಮೇಲು ಕೀಳಿನ ಒಳಮಿಡಿತಗಳನ್ನು ಜನಮನದಲ್ಲಿ ನೆಲೆಗೊಳಿಸಿ, ಇಡೀ ಮಾನವ ಸಮುದಾಯದ ಸಂಕಟ, ನೋವು, ಯಾತನೆ, ಅಪಮಾನ, ಹಸಿವು, ಬಡತನ, ಕ್ರೂರತನದ ನಡೆನುಡಿಗಳಿಗೆ ಕಾರಣವಾಗಿವೆ ಎಂಬ ವಾಸ್ತವವನ್ನು ತಿಳಿದುಕೊಳ್ಳಬೇಕು.

ದೇಗುಲಗಳಲ್ಲಿ ನಡೆಯುವ ಆಚರಣೆಗಳು ಸಿರಿವಂತರ ಮತ್ತು ಗದ್ದುಗೆಯನ್ನೇರಿದವರ ಪರವಾಗಿದ್ದುಕೊಂಡು ದುಡಿಯುವ ವರ್ಗದ ಬಡಜನರನ್ನು ದೇವರ ಹೆಸರಿನಲ್ಲಿ ಮತ್ತು ಸಂಪ್ರದಾಯಗಳ ಮುಂದುವರಿಕೆಯ ನೆಪದಲ್ಲಿ ಹೇಗೆ ವಂಚಿಸುತ್ತಿವೆ ಎಂಬುದನ್ನು ಅರಿತುಕೊಳ್ಳಬೇಕು ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ;

ಮಾತು+ಅ; ಮಾತು=ನುಡಿ/ಸೊಲ್ಲು; ಮಾತ=ಮಾತನ್ನು; ಬಲ್ಲೆನ್+ಎಂದು; ಬಲ್=ತಿಳಿ/ಅರಿ; ಬಲ್ಲೆನ್=ತಿಳಿದಿದ್ದೇನೆ/ಅರಿತಿದ್ದೇನೆ; ನುಡಿ=ಹೇಳು; ಮಾತಬಲ್ಲೆನೆಂದು ನುಡಿಯುವುದು=ತಾನು ಚೆನ್ನಾಗಿ ಮಾತನಾಡಬಲ್ಲೆ ಅಂದರೆ ಕೇಳುವವರ ಮನವನ್ನು ಸೆಳೆಯುವಂತಹ/ಮೆಚ್ಚಿಸುವಂತಹ/ಒಪ್ಪಿಸುವಂತಹ ಬಗೆಯಲ್ಲಿ ಸೊಗಸಾಗಿ ಮಾತನಾಡುತ್ತೇನೆ/ಮಾತುಗಾರಿಕೆಯಿಂದಲೇ ಎಲ್ಲವನ್ನೂ ಗೆಲ್ಲಬಲ್ಲೆ/ಎಲ್ಲರನ್ನೂ ಮಣಿಸಬಲ್ಲೆ ಎಂಬ ಸೊಕ್ಕಿನಿಂದ ಮಾತನಾಡುವುದು;

ಮಾತಬಲ್ಲೆನೆಂದು ನುಡಿಯದೆ=ತನ್ನ ಮಾತಿನ ಕುಶಲತೆಯನ್ನು/ಚತುರತೆಯನ್ನು ತೋರಿಸಿಕೊಳ್ಳುವುದಕ್ಕಾಗಿಯೇ ಮಾತನಾಡದೆ;

ನೀತಿವಂತನ್+ಎಂದು; ನೀತಿವಂತ=ಒಳ್ಳೆಯ ನಡೆನುಡಿಯುಳ್ಳವನು/ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು; ಸುಮ್ಮನೆ+ಇರದೆ; ಸುಮ್ಮನೆ=ಮಾತನಾಡದೆ/ತೆಪ್ಪಗೆ/ಏನನ್ನೂ ಹೇಳದೆ;

ನೀತಿವಂತನೆಂದು ಸುಮ್ಮನಿರುವುದು=ತಾನೊಬ್ಬನೇ ನೀತಿವಂತನೆಂಬ ಒಳಮಿಡಿತದಿಂದ ಕೂಡಿ, ಇತರರಿಗಿಂತ ತಾನು ಮೇಲು ಎಂಬ ತಪ್ಪು ಗ್ರಹಿಕೆಗೆ ಒಳಗಾಗಿ, ತನ್ನ ಕಣ್ಣಮುಂದೆ ನಡೆಯುವ ಯಾವುದೇ ಬಗೆಯ ಪ್ರಸಂಗಗಳಿಗೂ ಏನೊಂದು ಬಗೆಯ ಪ್ರತಿಕ್ರಿಯೆಯನ್ನು ತೋರಿಸದೆ, ಮನದಲ್ಲಿ ಚಡಪಡಿಕೆಗೆ ಒಳಗಾಗದೆ ಅಂದರೆ ಕುಟುಂಬದಲ್ಲಿ, ದುಡಿಯುವ ನೆಲೆಯಲ್ಲಿ, ಸಾಮಾಜಿಕ ವ್ಯವಹಾರಗಳಲ್ಲಿ ಒಳ್ಳೆಯ ಕೆಲಸ ನಡೆದಾಗ ಅದನ್ನು ಮೆಚ್ಚಿ ಬೆಂಬಲಿಸಿದೆ, ಕೆಟ್ಟ ಕೆಲಸ ನಡೆದಾಗ ಆತಂಕಗೊಂಡು ಅದನ್ನು ಅಲ್ಲಗಳೆಯದೆ, ಎಲ್ಲರಿಂದ, ಎಲ್ಲದರಿಂದ ದೂರವಾಗಿ ತನ್ನ ಪಾಡಿಗೆ ತಾನು ಇರುವುದು;

ನೀತಿವಂತನೆಂದು ಸುಮ್ಮನಿರದೆ=ನೀತಿವಂತನೆಂಬ ಒಳಮಿಡಿತವನ್ನು ಬಿಟ್ಟು, ಕಣ್ಣ ಮುಂದೆ ನಡೆಯುವ ಪ್ರಸಂಗಗಳಿಗೆ ಮಿಡಿಯುವ/ಪ್ರತಿಕ್ರಿಯೆಯನ್ನು ತೋರಿಸುವ ವ್ಯಕ್ತಿಯಾಗಿ ರೂಪುಗೊಂಡು;

ತತ್ಕಾಲ=ಯಾವುದೇ ಒಂದು ಪ್ರಸಂಗ ನಡೆದ/ಉಂಟಾದ ಸಮಯ; ನೀತಿ+ಅನ್+ಅರಿದು; ನೀತಿ=ಒಳ್ಳೆಯ ನಡೆನುಡಿ/ಆಚಾರ ವಿಚಾರ/ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಕೆಲಸ; ಅರಿದು=ತಿಳಿದುಕೊಂಡು/ಅರಿತುಕೊಂಡು;

ಆ ತತ್ಕಾಲದ ನೀತಿಯನರಿದು=ಆ ಸಮಯದಲ್ಲಿ ನಡೆದಿರುವ ಪ್ರಸಂಗದಲ್ಲಿನ ಒಳಿತು ಕೆಡುಕಿನ ನಡೆನುಡಿಗಳನ್ನು ಒರೆಹಚ್ಚಿ ನೋಡಿ, ಯಾವುದು ತನ್ನನ್ನು ಒಳಗೊಂಡಂತೆ ಎಲ್ಲರಿಗೂ ಒಳಿತನ್ನು ಉಂಟುಮಾಡುತ್ತದೆಯೋ ಅದನ್ನು ನೀತಿಯೆಂದು ತಿಳಿದುಕೊಂಡು;

ಸಾತ್ವಿಕ=ಒಳ್ಳೆಯದು/ಸರಿಯಾದುದು/ಸರಳವಾದುದು/ಪ್ರಾಮಾಣಿಕವಾದುದು; ಲಕ್ಷಣ+ಅಲ್ಲಿ+ಇಪ್ಪ+ಆತನ; ಲಕ್ಷಣ=ಗುರುತು/ಕುರುಹು/ಚಿಹ್ನೆ/ಗುರಿ/ಉದ್ದೇಶ; ಇಪ್ಪ=ಇರುವ/ನಡೆದುಕೊಳ್ಳುವ/ಜೀವಿಸುವ/ಬದುಕುವ; ಆತನ್+ಅ;

ಆತನ=ವ್ಯಕ್ತಿಯ/ಅಂತಹವನ; ಲಕ್ಷಣವೇ=ಜೀವನದ ನಡೆನುಡಿಗಳ ಚಹರೆಗಳೇ/ ರೀತಿ ನೀತಿಗಳೇ; ನಿರೀಕ್ಷಣ=ನೋಡುವುದು/ಕಾಣುವುದು/ನೋಟ;

ಸಾತ್ವಿಕ ಲಕ್ಷಣದಲ್ಲಿಪ್ಪಾತನ ಲಕ್ಷಣವೇ ನಿರೀಕ್ಷಣ= ಸರಳತನ, ಪ್ರಾಮಾಣಿಕತನ ಮತ್ತು ಹಿತಮಿತವಾದ ನಡೆನುಡಿಗಳಿಂದ ಕೂಡಿ ಬಾಳುವವನ ಜೀವನದ ರೀತಿ ನೀತಿಯೇ ದೊಡ್ಡದು ಎಂಬುದನ್ನು ಅರಿತುಕೊಳ್ಳುವುದು;

ಕದಂಬಲಿಂಗ=ಶಿವ/ಈಶ್ವರ/ಕಂಬದ ಮಾರಿತಂದೆಯ ವಚನಗಳ ಅಂಕಿತನಾಮ.)



# ಕುಷ್ಟಗಿ ಕರಿಬಸವೇಶ್ವರ

| | | |
|---|---|---|
| ಕಾಲ | : | ಕ್ರಿ.ಶ.೧೭೦೦ |
| ಊರು | : | ಕುಷ್ಟಗಿ<br>ಕೊಪ್ಪಳ ಜಿಲ್ಲೆ |
| ದೊರೆತಿರುವ ವಚನಗಳು | : | ೯೯ |
| ವಚನಗಳ ಅಂಕಿತನಾಮ | : | ಅಖಂಡ ಪರಿಪೂರ್ಣ ಘನಲಿಂಗಗುರು ಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ |

೨೪. ಉಳ್ಳಿ ಇಂಗು ಬೆಲ್ಲ ಮೆಣಸು
ಇವ ಕೊಳ್ಳಬಾರದುಯೆಂಬ
ಒಳ್ಳೆ ವ್ರತಿಗಳು ನೀವು ಕೇಳಿರೊ

ಸುಳ್ಳು ಸಟೆಯ ಬಿಟ್ಟು
ತಳ್ಳಿಬಳ್ಳಿಯ ಬಿಟ್ಟು

ಒಳ್ಳಿತಾಗಿ ನಡೆಯಬಲ್ಲಡೆ
ಬಳ್ಳೇಶ್ವರನ ಭಕ್ತರೆಂಬೆ ಕಾಣಾ

ಅಖಂಡ ಪರಿಪೂರ್ಣ ಘನಲಿಂಗಗುರು
ಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ.

**ದೇವರ ದಯೆ, ಕರುಣೆ, ಅನುಗ್ರಹಕ್ಕೆ ಪಾತ್ರರಾಗಬೇಕೆಂಬ ಹಂಬಲದಿಂದ ವ್ಯಕ್ತಿಗಳು ತಾವು ಉಣ್ಣುವ ತಿನ್ನುವ ವಸ್ತುಗಳಲ್ಲಿ ಕೆಲವನ್ನು ಬಿಡುವುದರ ಬದಲು, ತಮ್ಮ ದಿನನಿತ್ಯದ ಸಾಮಾಜಿಕ ವ್ಯವಹಾರಗಳಲ್ಲಿ ಸುಳ್ಳು, ತಟವಟ, ವಂಚನೆ, ಕ್ರೂರತನದ ನಡೆನುಡಿಗಳನ್ನು ಬಿಟ್ಟು, ಒಳ್ಳೆಯತನದಿಂದ ಬಾಳುವುದು ದೊಡ್ಡದು ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

**"ಒಳ್ಳಿತಾಗಿ ನಡೆಯಬಲ್ಲಡೆ" ಎಂದರೆ ವ್ಯಕ್ತಿಯು ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನುಂಟುಮಾಡುವ ನಡೆನುಡಿಗಳನ್ನು ಹೊಂದಿರುವುದು.**

(ಉಳ್ಳಿ=ಈರುಳ್ಳಿ/ಬೆಳ್ಳುಳ್ಳಿ; ಇಂಗು=ತಿನಸು/ಉಣಿಸುಗಳನ್ನು ತಯಾರಿಸುವಾಗ ಜತೆಯಲ್ಲಿ ಬಳಸುವ ವಸ್ತು. ಇದು ಒಂದು ಬಗೆಯ ಮರದ ಹಾಲಿನಿಂದ ದೊರೆಯುತ್ತದೆ; ಬೆಲ್ಲ=ಕಬ್ಬಿನ ರಸವನ್ನು ಕಾಯಿಸಿ ತಯಾರಿಸಿದ ಸಿಹಿಯುಳ್ಳ ವಸ್ತು; ಮೆಣಸು=ಒಂದು ಬಗೆಯ ಕಪ್ಪನೆಯ ಕಾಳು/ಕಾಯಿ. ಇದನ್ನು ಅಡುಗೆಯಲ್ಲಿ ಮಸಾಲೆಯ ವಸ್ತುವಾಗಿ ಬಳಸುತ್ತಾರೆ; ಇವ=ಇವನ್ನು/ಈ

ವಸ್ತುಗಳನ್ನು; ಕೊಳ್ಳಬಾರದು+ಎಂಬ; ಕೊಳ್/ಕೊಳ್ಳು=ಪಡೆಯುವುದು/ಹೊಂದುವುದು/ಸ್ವೀಕರಿಸುವುದು; ಕೊಳ್ಳಬಾರದು=ತಿನ್ನಬಾರದು/ಉಣ್ಣಬಾರದು/ಸೇವಿಸಬಾರದು; ಎಂಬ=ಎನ್ನುವ/ಎಂದು ಹೇಳುವ;

ಇವ ಕೊಳ್ಳಬಾರದುಯೆಂಬ=ಈರುಳ್ಳಿ, ಬೆಳ್ಳುಳ್ಳಿ, ಇಂಗು, ಬೆಲ್ಲ, ಮೆಣಸು ಮುಂತಾದವನ್ನು ತಿನ್ನಬಾರದು ಎಂಬ ನಿಲುವನ್ನು ಕೆಲವೊಂದು ಜಾತಿ, ವರ್ಗದ ಜನರು ತಳೆದು, ಅದನ್ನು ಒಂದು ವ್ರತದಂತೆ ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ಕನ್ನಡ ನುಡಿಸಮುದಾಯವು ಮೇಲುಕೀಳಿನ ಜಾತಿ ಮೆಟ್ಟಿಲುಗಳಿಂದ ಕೂಡಿದೆ. ಪ್ರತಿಯೊಂದು ಜಾತಿಯ ಜನರು "ತಮ್ಮ ಜಾತಿಯು ಮೇಲು, ಮತ್ತೊಂದು ಜಾತಿಯು ಕೀಳು" ಎಂಬ ಒಳಮಿಡಿತಗಳಿಂದ ಕೂಡಿದ್ದಾರೆ. ಇದೇ ಬಗೆಯ ಒಳಮಿಡಿತಗಳನ್ನು ತಿನ್ನುವ ಉಣ್ಣುವ ವಸ್ತುಗಳ ಬಗ್ಗೆಯೂ ಹೊಂದಿರುವುದರಿಂದ, ಕೆಲವು ಬಗೆಯ ಉಣಿಸು ತಿನಸುಗಳ ಸೇವನೆಯನ್ನು ಒಳ್ಳೆಯದೆಂದು, ಪವಿತ್ರವೆಂದು, ಮತ್ತೆ ಕೆಲವನ್ನು ಸೇವಿಸುವುದು ಕೆಟ್ಟದ್ದೆಂದು, ಅಪವಿತ್ರವೆಂದು ನಂಬಿದ್ದಾರೆ.

ಒಳ್ಳ್+ಎ; ಒಳ್ಳೆ=ಒಳ್ಳೆಯ/ಯೋಗ್ಯರಾದ/ಉತ್ತಮರಾದ; ವ್ರತ=ಕೆಲವೊಂದು ಬಗೆಯ ಕಟ್ಟುಪಾಡುಗಳಿಗೆ/ನಿಯಮಗಳಿಗೆ ಒಳಪಟ್ಟ ಆಚರಣೆ/ನಡವಳಿಕೆ/ಆಚಾರ; ವ್ರತಿ=ಕಟ್ಟುನಿಟ್ಟಿನ ಆಚರಣೆಗಳನ್ನು ನಿಯಮ ತಪ್ಪದೆ ಮಾಡುತ್ತಾ ದೇವರನ್ನು ಪೂಜಿಸುವವರು; ಒಳ್ಳೆ ವ್ರತಿಗಳು=ವ್ರತಕ್ಕೆ ಗಂಟುಬಿದ್ದವರು/ಪೂಜೆಯ ಕಟ್ಟುಪಾಡುಗಳನ್ನೇ ದೊಡ್ಡದೆಂದು ನಂಬಿದವರು;

ನೀವು=ದೇವರ ಹೆಸರಿನಲ್ಲಿ ಉಣ್ಣುವ/ತಿನ್ನುವ ವಸ್ತುಗಳಲ್ಲಿ ಕೆಲವನ್ನು ಸೇವಿಸದಿರುವ ವ್ಯಕ್ತಿಗಳು; ಕೇಳ್/ಕೇಳು=ಆಲಿಸುವುದು/ಗಮನಿಸುವುದು/ಕಿವಿಗೊಡುವುದು; ಕೇಳಿರೊ=ಗಮನವಿಟ್ಟು ಕೇಳಿರಿ/ಹೇಳುವ ಸಂಗತಿಯನ್ನು ಚೆನ್ನಾಗಿ ತಿಳಿಯಲು ಪ್ರಯತ್ನಿಸಿ;

ಸುಳ್ಳು=ಇರುವುದನ್ನು ಇಲ್ಲವೆಂದು ಹೇಳುವುದು, ಇಲ್ಲದ್ದನ್ನು ಇದೆಯೆಂದು ಹೇಳುವುದು/ಕಂಡದ್ದನ್ನು ಕಾಣೆನು ಎನ್ನುವುದು, ಕಾಣದ್ದನ್ನು ಕಂಡೆನು ಎನ್ನುವುದು; ಸಟೆ=ಸುಳ್ಳು/ಹುಸಿ/ದಿಟವಲ್ಲದ್ದು/ನಿಜವಲ್ಲದ್ದು; ಬಿಟ್ಟು=ತೊರೆದು/

ತ್ಯಜಿಸಿ/ಬಿಟ್ಟು; ತಳ್ಳಿಬಳ್ಳಿ=ಚಾಡಿಕೋರತನ/ಇಬ್ಬರ ನಡುವೆ ಇಲ್ಲಸಲ್ಲದ್ದನ್ನು ಹೇಳಿ ಅವರಲ್ಲಿ ಜಗಳವನ್ನು ತಂದಿಕ್ಕುವುದು/ನಯವಂಚನೆಯ ನಡೆನುಡಿ;

ಒಳ್ಳಿತು+ಆಗಿ; ಒಳ್ಳಿತು=ಒಳ್ಳೆಯದು/ಉತ್ತಮವಾದುದು/ಯೋಗ್ಯವಾದುದು; ನಡೆ=ವರ್ತನೆ/ಆಚರಣೆ/ವ್ಯವಹಾರ/ಮಾಡುವ ಕೆಲಸ/ಗೇಮೆ; ಬಲ್=ತಿಳಿ/ಅರಿ/ಕಸುವು; ಬಲ್ಲಡೆ=ತಿಳಿದಿದ್ದರೆ/ಅರಿತಿದ್ದರೆ/ಕಸುವು ಇದ್ದರೆ; ನಡೆಯಬಲ್ಲಡೆ=ನಡೆದುಕೊಳ್ಳುವಂತಾದರೆ;

ಬಳ್ಳೇಶ್ವರ=ಶಿವ/ಈಶ್ವರ; ಭಕ್ತರ್+ಎಂಬೆ; ಭಕ್ತ=ಒಳ್ಳೆಯ ನಡೆನುಡಿಗಳಿಂದ ದೇವರನ್ನು ಒಲಿದವನು/ಒಳ್ಳೆಯ ನಡೆನುಡಿಗಳೇ ದೇವರೆಂದು ನಂಬಿದವನು; ಎಂಬೆ=ಎನ್ನುತ್ತೇನೆ/ಎಂದು ಹೇಳುತ್ತೇನೆ; ಕಾಣ್+ಆ; ಕಾಣ್/ಕಾಣು=ನೋಡು/ತಿಳಿ; ಕಾಣಾ=ತಿಳಿದು ನೋಡು/ಅರಿತು ನೋಡು/ವಿಚಾರಿಸಿ ನೋಡು;

ಅಖಂಡ=ಎಲ್ಲವನ್ನು ಒಂದಾಗಿ ಒಳಗೊಂಡಿರುವ/ತುಂಡುತುಂಡಾಗಿರದ/ಚೂರುಚೂರಾಗಿರದ; ಪರಿಪೂರ್ಣ=ಪೂರ್ತಿಯಾಗಿ ತುಂಬಿರುವ/ಸಮಗ್ರವಾಗಿರುವ; ಘನ=ದೊಡ್ಡದಾದ/ಅಳತೆಯನ್ನು ಮೀರಿದ/ಮಂಗಳಕರವಾದ; ಲಿಂಗ=ಶಿವ/ಈಶ್ವರ/ದೇವರು; ಗುರು=ಒಳ್ಳೆಯ ನಡೆನುಡಿಗಳನ್ನು ತಿಳಿಯ ಹೇಳುವವನು/ಕಲಿಸುವವನು; ಚೆನ್ನಬಸವೇಶ್ವರ=ವಚನಕಾರ ಕುಷ್ಟಗಿ ಕರಿಬಸವೇಶ್ವರನ ಗುರು;

ಶಿವ+ಸಾಕ್ಷಿ+ಆಗಿ; ಸಾಕ್ಷಿ=ಯಾವುದೇ ಒಂದು ಸಂಗತಿಯನ್ನು ಕಣ್ಣಾರ ಕಂಡು ತಿಳಿದುಕೊಂಡು, ಅಗತ್ಯವಿದ್ದ ಸನ್ನಿವೇಶದಲ್ಲಿ ಮತ್ತೆ ಅದನ್ನು ಹೇಳುವವನು; ಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ=ಮಾನವರ ನಡೆನುಡಿಗಳನ್ನು ದೇವರು ಸದಾಕಾಲ ನೋಡುತ್ತಿರುತ್ತಾನೆ ಎಂಬ ನಂಬಿಕೆಯು ಜನಮನದಲ್ಲಿರುವುದನ್ನು ಈ ನುಡಿಗಳು ಸೂಚಿಸುತ್ತಿವೆ.

ಅಖಂಡ ಪರಿಪೂರ್ಣ ಘನಲಿಂಗುರು ಚೆನ್ನಬಸವೇಶ್ವರ ಶಿವಸಾಕ್ಷಿಯಾಗಿ=ಇದು ಕುಷ್ಟಗಿ ಕರಿಬಸವೇಶ್ವರನ ವಚನಗಳ ಅಂಕಿತನಾಮ.)



# ಗುರುಪುರದ ಮಲ್ಲಯ್ಯ

ಕಾಲ : ಕ್ರಿ.ಶ. ಹನ್ನೆರಡನೆಯ ಶತಮಾನ
ದೊರೆತಿರುವ ವಚನಗಳು : ೪
ವಚನಗಳ ಅಂಕಿತನಾಮ : ಪುರದ ಮಲ್ಲಯ್ಯ

೨೫. ಹೊತ್ತಿಗೊಂದು ಪರಿಯಹ ಮನವ ಕಂಡು
ದಿನಕ್ಕೊಂದು ಪರಿಯಹ ತನುವ ಕಂಡು
ಅಂದಂದಿಗೆ ಭಯದೋರುತ್ತಿದೆ

ಒಂದು ನಿಮಿಷಕ್ಕನಂತವನೆ ನೆನೆವ ಮನವ ಕಂಡು
ಅಂದಂದಿಗೆ ಭಯವಾಗುತ್ತಿದೆ

ಈ ಮನ ನಿಮ್ಮ ನೆನೆಯಲೀಯದು
ಮನ ಹಗೆಯಾದುದಯ್ಯಾ
ಸದ್ಗುರುವೆ ಪುರದ ಮಲ್ಲಯ್ಯಾ.

**ಕಾಲದ ಉರುಳುವಿಕೆಯ ಪ್ರತಿಯೊಂದು ಗಳಿಗೆಯಲ್ಲಿಯೂ ವ್ಯಕ್ತಿಯ ಮಯ್ ಮನದಲ್ಲಿ ಉಂಟಾಗುವ ತಲ್ಲಣಗಳನ್ನು ಮತ್ತು ಬದಲಾವಣೆಗಳನ್ನು ಕುರಿತು ಈ ವಚನದಲ್ಲಿ ಹೇಳಲಾಗಿದೆ.**

(ಹೊತ್ತು+ಗೆ+ಒಂದು; ಹೊತ್ತು=ಕಾಲ/ಸಮಯ/ವೇಳೆ; ಹೊತ್ತಿಗೆ=ಕಾಲಕ್ಕೆ/ಸಮಯಕ್ಕೆ/ವೇಳೆಗೆ; ಪರಿ+ಅಹ; ಪರಿ=ರೀತಿ/ಬಗೆ/ಚಲಿಸು/ಕೆದರು/ಚೆದರು/ಚಂಚಲವಾಗು/ಬದಲಾಗು; ಅಹ=ಆಗುವ/ಉಂಟಾಗುವ/ಜರುಗುವ/ನಡೆದುಕೊಳ್ಳುವ; ಮನ=ಮನಸ್ಸು; ಕಂಡು=ನೋಡಿ/ಅರಿತು/ತಿಳಿದು;

ಹೊತ್ತಿಗೊಂದು ಪರಿಯಹ ಮನವ ಕಂಡು=ಜೀವನದ ಪ್ರತಿಯೊಂದು ಗಳಿಗೆಯಲ್ಲೂ ಹಿಂದೆ ನಡೆದಿರುವ ಮತ್ತು ಮುಂದೆ ನಡೆಯಲಿರುವ ಒಳಿತು ಕೆಡುಕಿನ ಆಗುಹೋಗುಗಳನ್ನು ಕುರಿತು ಆತಂಕ, ತಲ್ಲಣ, ಹೆದರಿಕೆ, ಹಿಂಜರಿಕೆ, ಕೋಪ, ತಾಪ, ಆನಂದ, ಉಲ್ಲಾಸ, ಸೇಡು, ಹಗೆತನ, ಒಲವು, ನಲಿವು ಮುಂತಾದ ನೂರೆಂಟು ಬಗೆಯ ಒಳಮಿಡಿತಗಳಿಂದ ತನ್ನ ಮನಸ್ಸು ಚಡಪಡಿಸುತ್ತಿರುತ್ತದೆ ಎಂಬುದನ್ನು ವ್ಯಕ್ತಿಯು ಅರಿತುಕೊಳ್ಳುವುದು;

ದಿನ+ಕ್ಕೆ+ಒಂದು; ದಿನ=ಒಂದು ಹಗಲು ಮತ್ತು ಒಂದು ರಾತ್ರಿಯನ್ನು ಒಳಗೊಂಡ ಇಪ್ಪತ್ತನಾಲ್ಕು ಗಂಟೆಗಳ ಸಮಯ; ತನು=ಮಯ್/ದೇಹ/ಶರೀರ;

ದಿನಕ್ಕೊಂದು ಪರಿಯಹ ತನುವ ಕಂಡು=ಹುಟ್ಟಿನಿಂದ ಸಾವಿನ ತನಕ ವ್ಯಕ್ತಿಯ ತನುವಿನ ಆಕಾರ, ಕಳೆ ಮತ್ತು ಶಕ್ತಿಯು ಬಾಲ್ಯ, ಹರೆಯ, ಮುಪ್ಪಿನ ಹಂತಗಳಲ್ಲಿ ಬದಲಾಗುತ್ತಿರುವುದನ್ನು ಅರಿತುಕೊಳ್ಳುವುದು;

ಅಂದು+ಅಂದು+ಇಗೆ; ಅಂದು=ಆ ದಿನ/ಆ ವೇಳೆ/ ಆ ಸಮಯ; ಅಂದಿಗೆ=ಆ ಕಾಲಕ್ಕೆ/ಸಮಯಕ್ಕೆ/ವೇಳೆಗೆ; ಅಂದಂದಿಗೆ=ಆಯಾಯ ಕಾಲಕ್ಕೆ/ಸಮಯಕ್ಕೆ/ವೇಳೆಗೆ; ಭಯ+ತೋರುತ್ತ+ಇದೆ; ಭಯ=ಹೆದರಿಕೆ/ಅಂಜಿಕೆ/ಪುಕ್ಕಲುತನ; ತೋರು=ಗೋಚರಿಸು/ಉಂಟಾಗು/ಕಾಣು; ತೋರುತ್ತಿದೆ=ಉಂಟಾಗುತ್ತಿದೆ/ಕಂಡುಬರುತ್ತಿದೆ;

ಅಂದಂದಿಗೆ ಭಯದೋರುತ್ತಿದೆ=ಕಾಲ ಉರುಳಿದಂತೆಲ್ಲಾ ಮಯ್ಯಲ್ಲಿನ ಕಸುವು ಕುಗ್ಗುತ್ತಿರುವುದು ಮತ್ತು ಮನದಲ್ಲಿ ಎಡೆಬಿಡದೆ ಒಂದೇ ಸಮನೆ ತುಡಿಯುತ್ತಿರುವ ಒಳಮಿಡಿತಗಳಿಂದಾಗಿ ವ್ಯಕ್ತಿಯ ಜೀವನದಲ್ಲಿ ಯಾವುದೊಂದೂ ಇದ್ದಂತೆಯೇ ಇರುವುದಿಲ್ಲ, ಎಲ್ಲವೂ ಬದಲಾಗುತ್ತಿದೆಯೆಂಬ ಮತ್ತು ಹುಟ್ಟಿದ್ದೆಲ್ಲವೂ ಇಲ್ಲವಾಗುತ್ತದೆಯೆಂಬ ವಾಸ್ತವದ ಸಂಗತಿಯು ಅರಿವಿಗೆ ಬಂದು ಹೆದರಿಕೆಯುಂಟಾಗುತ್ತಿದೆ;

ನಿಮಿಷ+ಕ್ಕೆ+ಅನಂತ+ಅನ್+ಎ; ನಿಮಿಷ=ಒಂದು ಸಲ ಕಣ್ಣ ರೆಪ್ಪೆಯನ್ನು ಹೊಡೆಯಲು ತೆಗೆದುಕೊಳ್ಳುವ ಕಾಲ/ಗಳಿಗೆ/ಸಮಯ; ನಿಮಿಷಕ್ಕೆ=ಒಂದು ಗಳಿಗೆಗೆ; ಅನಂತ=ಕೊನೆಯಿಲ್ಲದ/ಮೇರೆಯಿಲ್ಲದ/ಮಿತಿಯಿಲ್ಲದ/ಎಲ್ಲೆಯಿಲ್ಲದ; ಅನ್=ಅನ್ನು; ನೆನೆ=ಹಿಂದೆ ನಡೆದ ಸಂಗತಿಗಳನ್ನು ಮನದಲ್ಲಿ ಮತ್ತೆ ಸ್ಮರಿಸುವುದು/ಕುರಿತು ಚಿಂತಿಸುವುದು; ನೆನೆವ=ನೆನೆದುಕೊಳ್ಳುವ;

ಒಂದು ನಿಮಿಷಕ್ಕನಂತವನೆ ನೆನೆವ ಮನವ ಕಂಡು=ಎಚ್ಚರವಿದ್ದ ಸಮಯದಲ್ಲಿ ವ್ಯಕ್ತಿಯ ಮನಸ್ಸು ಒಳಮಿಡಿತಗಳಿಂದ ತುಡಿಯದೆ ಒಂದು ಗಳಿಗೆಯೂ ಇರಲಾರದು. ಅಗತ್ಯವಾದಾಗ ಇತರರೊಡನೆ ಬಹಿರಂಗದಲ್ಲಿ ಮಾತಿನ ಮೂಲಕ ವ್ಯವಹರಿಸುವಂತೆಯೇ, ವ್ಯಕ್ತಿಯು ತನ್ನ ಅಂತರಂಗದ ಮನದಲ್ಲಿ ತಾನೇ ಬಹುಬಗೆಯ ಆಲೋಚನೆ, ಚಿಂತನೆ, ಕಲ್ಪನೆಗಳಿಗೆ ಒಳಗಾಗುತ್ತಿರುತ್ತಾನೆ. ಇತರರ ಕಲ್ಪನೆಗೂ ಬಾರದಿರುವಂತಹ ಒಳಿತು ಕೆಡುಕಿನ ನೂರಾರು ಬಗೆಯ ಒಳಮಿಡಿತಗಳು ಯಾವುದೇ ಹತೋಟಿಯಿಲ್ಲದೆ ಒಂದೇ ಸಮನೆ ಮನದಲ್ಲಿ ಮೂಡುತ್ತಿರುತ್ತವೆ ಎಂಬುದನ್ನು ಅರಿತುಕೊಳ್ಳುವುದು; ಭಯ+ಆಗುತ್ತ+ಇದೆ; ಆಗು=ಉಂಟಾಗು/ಜರುಗು/ನಡೆ;

ಈ ಮನ=ಈ ರೀತಿ ಪ್ರತಿಯೊಂದು ಗಳಿಗೆಯಲ್ಲೂ ಒಳಮಿಡಿತಗಳಿಂದ ಕೂಡಿ ನೂರೆಂಟು ಬಗೆಯ ತುಡಿತಗಳಿಂದ ಕೂಡಿರುವ ಮನಸ್ಸು/ಒಳಿತು ಕೆಡುಕಿನ ನಡುವೆ ಸಿಲುಕಿ ಇಬ್ಬಗೆಯಲ್ಲಿ ಹೊಯ್ದಾಡುತ್ತಿರುವ ಮನಸ್ಸು; ನಿಮ್ಮ=ದೇವರಾದ ನಿಮ್ಮನ್ನು/ದೇವರನ್ನು; ನೆನೆ+ಅಲ್+ಈ+ಅದು; ನೆನೆಯಲ್=ನೆನೆದುಕೊಳ್ಳಲು; ಈ/ಈಯು=ಕೊಡು/ಅವಕಾಶವನ್ನು ನೀಡು/ ಎಡೆಗೊಡು; ಈಯದು=ಬಿಡುತ್ತಿಲ್ಲ/ಕೊಡುತ್ತಿಲ್ಲ;

ಈ ಮನ ನಿಮ್ಮ ನೆನೆಯಲೀಯದು=ದೇವರನ್ನು ನೆನೆಯುವುದು ಎಂದರೆ ವ್ಯಕ್ತಿಯು ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳನ್ನು ಹೊಂದಿರುವುದು. ಆದರೆ ಸದಾಕಾಲ ಒಂದಲ್ಲ ಒಂದು ಬಗೆಯ ಚಿಂತನೆ, ಕಲ್ಪನೆ, ಆಲೋಚನೆಗಳಲ್ಲಿ ತೊಡಗಿರುವ ವ್ಯಕ್ತಿಯ ಮನಸ್ಸು ಒಳಿತು ಕೆಡುಕುಗಳ ನಡುವೆ ತುಯ್ದಾಡುತ್ತಿರುವುದರಿಂದ ಒಳಿತಿನ ಹಾದಿಯಲ್ಲಿ ನಡೆಯಲು ಆಗುತ್ತಿಲ್ಲ ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ;

ಹಗೆ+ಆದುದು+ಅಯ್ಯಾ; ಹಗೆ=ಶತ್ರು; ಆದುದು=ಆಗಿದೆ/ಆಗಿರುವುದು; ಅಯ್ಯಾ=ಇತರರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ;

ಮನ ಹಗೆಯಾದುದಯ್ಯಾ=ಒಳಿತಿನ ನಡೆನುಡಿಗಳನ್ನು ಹೊಂದದಿರಲು ಮನಸ್ಸಿನಲ್ಲಿ ತುಡಿಯುತ್ತಿರುವ ಕೆಡುಕಿನ ಒಳಮಿಡಿತಗಳೇ ಕಾರಣವಾಗಿವೆ ಎಂಬ ಕಳವಳವನ್ನು ಮತ್ತು ಸಂಕಟವನ್ನು ಈ ನುಡಿಗಳು ಸೂಚಿಸುತ್ತಿವೆ;

ಸದ್ಗುರು=ಒಳ್ಳೆಯ ಗುರು/ಒಳ್ಳೆಯ ನಡೆನುಡಿಗಳನ್ನು ತನ್ನ ಗುಡ್ಡರ ವ್ಯಕ್ತಿತ್ವದಲ್ಲಿ ರೂಪಿಸುವ ವ್ಯಕ್ತಿ; ಪುರ=ಪಟ್ಟಣ/ನಗರ/ಕೋಟೆ; ಮಲ್ಲಯ್ಯ=ಈಶ್ವರ/ಶಿವ/ದೇವರ ಹೆಸರು; ಪುರದ ಮಲ್ಲಯ್ಯ=ಗುರುಪುರದ ಮಲ್ಲಯ್ಯನ ವಚನಗಳ ಅಂಕಿತನಾಮ.)



# ಚಂದಿಮರಸ

ಕಾಲ : ಕ್ರಿ.ಶ.೧೧೬೦.
ಊರು : ಚಿಮ್ಮಲಿಗೆ ಗ್ರಾಮ
ಬೀಳಗಿ ತಾಲ್ಲೂಕು
ಬಾಗಲಕೋಟೆ ಜಿಲ್ಲೆ.
ದೊರೆತಿರುವ ವಚನಗಳು : ೧೫೭
ವಚನಗಳ ಅಂಕಿತನಾಮ : ಸಿಮ್ಮಲಿಗೆಯ ಚೆನ್ನರಾಮ.

೨೬. ತನ್ನದಾದಡೇನೋ ಕನ್ನಡಿ
ಅನ್ಯರದಾದಡೇನೋ ಕನ್ನಡಿ
ತನ್ನ ರೂಪ ಕಂಡಡೆ ಸಾಲದೆ

ಸದ್ಗುರು ಆವನಾದಡೇನೋ
ತನ್ನನರುಹಿಸಿದಡೆ ಸಾಲದೆ
ಸಿಮ್ಮಲಿಗೆಯ ಚೆನ್ನರಾಮಾ.

**ಮಾನವರ ಬದುಕಿನಲ್ಲಿ ಯಾವುದು ಸರಿ-ಯಾವುದು ತಪ್ಪು; ಯಾವುದು ಒಳ್ಳೆಯದು-ಯಾವುದು ಕೆಟ್ಟದ್ದು ಎಂಬುದನ್ನು ವಿಂಗಡಿಸಿ ತಿಳಿಯುವಂತಹ ಅರಿವನ್ನು ನಮ್ಮ ಮನದಲ್ಲಿ ಮೂಡಿಸಿ, ನಮ್ಮ ತಪ್ಪನ್ನು ತಿದ್ದಿ ಸರಿಪಡಿಸಿಕೊಂಡು ಒಳಿತಿನ ಹಾದಿಯಲ್ಲಿ ನಡೆಯುವಂತೆ ಮಾಡಿ, ನಮ್ಮ ವ್ಯಕ್ತಿತ್ವವನ್ನು ರೂಪಿಸುವ ಗುರುವನ್ನು ಜಾತಿ, ಮತ, ಲಿಂಗ, ಸಂಪತ್ತಿನ ನೆಲೆಯಿಂದ ನೋಡಬಾರದು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

**"ಜಾತಿ, ಮತ, ಲಿಂಗ, ಸಂಪತ್ತಿನ ನೆಲೆಯಿಂದ ನೋಡುವುದು" ಎಂದರೆ ಮೇಲು ಜಾತಿ/ನಡುವಣ ಜಾತಿ/ಕೀಳ ಜಾತಿ; ನಮ್ಮದು ಈ ಮತ/ ಬೇರೆಯವರದು ಮತ್ತೊಂದು ಮತ; ಹೆಣ್ಣು/ಗಂಡು; ಸಿರಿವಂತ/ಬಡವ ಎಂಬ ತಾರತಮ್ಯದಿಂದ ನೋಡಿ, ಯಾವುದೇ ವ್ಯಕ್ತಿಯನ್ನು ನಮ್ಮವನೆಂದು ಮೆರೆಸುವುದು ಇಲ್ಲವೇ ಬೇರೆಯವನೆಂದು ಕಡೆಗಣಿಸುವುದು.**

(ತನ್ನದು+ಆದಡೆ+ಏನೋ; ತನ್ನದು=ತನಗೆ ಸೇರಿದ್ದು/ತನ್ನದೇ ಆಗಿರುವುದು; ಆದಡೆ=ಆಗಿದ್ದರೆ/ಆದರೆ; ಏನೋ=ಏನಾಗುವುದು; ಕನ್ನಡಿ=ಪ್ರತಿಬಿಂಬವನ್ನು ನೋಡಲು ಬಳಸುವ ಗಾಜು/ಕಂಚಿನ ಉಪಕರಣ; ಅನ್ಯರದು+ಆದಡೆ+ಏನೋ; ಅನ್ಯ=ಇತರ/ಬೇರೆಯ; ಅನ್ಯರದು=ಇತರರದು/ಬೇರೆಯವರದು;

ತನ್ನದಾದಡೇನೋ ಕನ್ನಡಿ ಅನ್ಯರದಾದಡೇನೋ ಕನ್ನಡಿ=ಕನ್ನಡಿಯ ಒಡೆತನ ಯಾರಿಗೆ ಸೇರಿದ್ದರೆ ತಾನೆ ಏನು/ಕನ್ನಡಿಯು ಯಾರದಾಗಿದ್ದರೆ ತಾನೆ ಏನು; ತನ್ನ=ಕನ್ನಡಿಯಲ್ಲಿ ನೋಡಿಕೊಳ್ಳುವ ವ್ಯಕ್ತಿಯ; ರೂಪ=ಆಕಾರ/ಪಡಿಯಚ್ಚು; ಕಂಡಡೆ=ಕಾಣಿಸಿದರೆ/ಕಾಣುವಂತಾದರೆ; ಸಾಲು=ಸಾಕು/ಅಗತ್ಯ ಪೂರಯಿಸುವುದು; ಸಾಲದೆ=ಸಾಕಲ್ಲವೇ/ಅಗತ್ಯ ಈಡೇರುವುದಿಲ್ಲವೇ;

ಸದ್ಗುರು=ಒಳ್ಳೆಯ ಗುರು/ಜೀವನದಲ್ಲಿ ಒಳಿತಿನ ನಡೆನುಡಿಗಳನ್ನು ತಿಳಿಯ ಹೇಳಿ, ಗುಡ್ಡನ ವ್ಯಕ್ತಿತ್ವವನ್ನು ರೂಪಿಸುವವರು; ಆವನ್+ಆದಡೆ+ಏನೋ; ಆವನ್=ಯಾವನು; ತನ್ನನ್+ಅರುಹಿಸಿದಡೆ; ತನ್ನನ್=ವಿದ್ಯೆಯನ್ನು ಕಲಿಯಲು ಆಸೆ/ಹಂಬಲವುಳ್ಳ ವ್ಯಕ್ತಿಯನ್ನು;

ಅರುಹು=ತಿಳಿಸು/ಮನದಟ್ಟುಮಾಡು/ತಿಳಿಯ ಹೇಳು; ಅರುಹಿಸಿದಡೆ= ಮನದಟ್ಟು ಮಾಡಿಕೊಳ್ಳುವಂತೆ ತಿಳಿಯ ಹೇಳಿದರೆ/ಅರಿತು ಬಾಳುವಂತೆ ಹೇಳಿದರೆ; ಸಿಮ್ಮಲಿಗೆಯ ಚೆನ್ನರಾಮಾ=ಚಂದಿಮರಸನ ಮೆಚ್ಚಿನ ದೇವರು/ ಚಂದಿಮರಸನು ರಚಿಸಿರುವ ವಚನಗಳ ಅಂಕಿತನಾಮ.)



೨೭. ಬಟ್ಟೆಗೊಂಡು ಹೋಗುತಿಪ್ಪ ಮನುಜನೊಬ್ಬ
ಹುಲಿ ಕಾಡುಗಿಚ್ಚು ರಕ್ಕಸಿ ಕಾಡಾನೆಗಳು

ನಾಲ್ಕೂ ದೆಸೆಯಲಟ್ಟುತ ಬರೆ
ಕಂಡು ಭಯದಿಂದ ಹೋಗ ದೆಸೆಯಿಲ್ಲದೆ

ಬಾವಿಯ ಕಂಡು ತಲೆಯನೂರಿ ಬೀಳುವಲ್ಲಿ
ಹಾವ ಕಂಡು ಇಲಿಗಡಿದ ಬಳ್ಳಿಯ ಹಿಡಿದು ನಿಲೆ

ಜೇನುಹುಳು ಮೈಯನೂರುವಾಗ
ಮೂಗಿನ ತುದಿಯಲೊಂದು ಹನಿ ಮಧು ಬಂದು ಬೀಳೆ

ಆ ಮಧುವ ಕಂಡು ಹಿರಿದಪ್ಪ ದುಃಖವೆಲ್ಲವೆಲ್ಲವ ಸೈರಿಸಿ
ನಾಲಗೆಯ ತುದಿಯಲ್ಲಿ ಆ ಮಧುವ ಸೇವಿಸುವಂತೆ

ಈ ಸಂಸಾರ ಸುಖ ವಿಚಾರಿಸಿ ನೋಡಿದಡೆ ದುಃಖದಾಗರ
ಇದನರಿದು ಸಕಲ ವಿಷಯಂಗಳಲ್ಲಿ ಸುಖವಿಂತುಟೆಂದು

ನಿರ್ವಿಷಯನಾಗಿ ನಿಂದ ನಿಲವು ನೀನೇ
ಸಿಮ್ಮಲಿಗೆಯ ಚೆನ್ನರಾಮಾ.

**ಈ ಜಗತ್ತಿನಲ್ಲಿ ಹುಟ್ಟಿ ಬೆಳೆದು ಬಾಳಿ ಸಾಯುತ್ತಿರುವ ಮಾನವರಲ್ಲಿ ಬಹುತೇಕ ಮಂದಿಯ ಬದುಕಿನಲ್ಲಿ ನಾನಾ ರೀತಿಯ ಸಂಕಟ, ವೇದನೆ, ಸೋಲು, ಅಪಮಾನ, ನೋವಿನ ಪ್ರಸಂಗಗಳೇ ಹೆಚ್ಚಾಗಿದ್ದರೂ, ಇವುಗಳ ನಡುವೆಯೇ ತಮ್ಮ ತಮ್ಮ ಜೀವನದಲ್ಲಿ ದೊರೆಯುವ ಒಲವು ನಲಿವಿನ ಅವಕಾಶವನ್ನು ಕಳೆದುಕೊಳ್ಳದೆ, ಅದನ್ನು ಪಡೆದು ಆನಂದಪಡುವಂತಹ ಆಸಕ್ತಿಯನ್ನು ಮನದಲ್ಲಿ ಹೊಂದಿರಬೇಕೆಂಬುದನ್ನು ಶಬ್ದಚಿತ್ರವೊಂದರ ಮೂಲಕ ಈ ವಚನದಲ್ಲಿ ಹೇಳಲಾಗಿದೆ.**

(ಬಟ್ಟೆ+ಕೊಂಡು; ಬಟ್ಟೆ=ದಾರಿ/ಹಾದಿ/ಮಾರ್ಗ; ಕೊಂಡು=ಹಿಡಿದು; ಹೋಗುತ+ಇಪ್ಪ; ಹೋಗು=ನಡೆ/ತೆರಳು/ಸಾಗು; ಇಪ್ಪ=ಇರುವ; ಮನುಜನ್+ಒಬ್ಬ; ಮನುಜ=ಮಾನವ/ವ್ಯಕ್ತಿ;

ಬಟ್ಟೆಗೊಂಡು ಹೋಗುತಿಪ್ಪ ಮನುಜನೊಬ್ಬ=ದಟ್ಟವಾದ ಕಾಡಿನ ಹಾದಿಯಲ್ಲಿ ಒಬ್ಬ ವ್ಯಕ್ತಿಯು ನಡೆದುಕೊಂಡು ಹೋಗುತ್ತಿದ್ದಾಗ;

ಹುಲಿ=ಕಾಡಿನಲ್ಲಿ ನೆಲೆಸಿರುವ ಪ್ರಾಣಿ; ಕಾಡು+ಕಿಚ್ಚು; ಕಾಡು=ಅಡವಿ/ಕಾನನ/ಅರಣ್ಯ; ಕಿಚ್ಚು=ಬೆಂಕಿ/ಅಗ್ನಿ; ಕಾಡುಗಿಚ್ಚು=ಕಾಡಿನ ಮರಗಿಡ ಪೊದೆಬಳ್ಳಿಗಳಿಗೆ ಬೆಂಕಿ ತಗುಲಿ, ಅದು ಎಲ್ಲೆಡೆಯಲ್ಲಿಯೂ ಹಬ್ಬಿ, ದಗದಗನೆ ಹತ್ತಿಕೊಂಡು ಮುಗಿಲನ್ನು ಮುಟ್ಟುವಂತೆ ಬೆಂಕಿಯು ದೊಡ್ಡದಾಗಿ ಉರಿಯುತ್ತಿರುವುದು;

ರಕ್ಕಸಿ=ಕಾಡಿನಲ್ಲಿ ನೆಲೆಸಿರುವ ಬುಡಕಟ್ಟಿನ ಸಮುದಾಯಕ್ಕೆ ಸೇರಿದ ಹೆಣ್ಣು. ರಕ್ಕಸ ಬುಡಕಟ್ಟಿನ ಸಮುದಾಯದ ವ್ಯಕ್ತಿಗಳು ಮಾನವರನ್ನು ತಿನ್ನುತ್ತಿದ್ದರು ಎಂಬ ಒಂದು ಕಲ್ಪನೆಯು ಜನಮನದಲ್ಲಿತ್ತು; ಕಾಡು+ಆನೆ+ಗಳು; ಆನೆ=ಕಾಡಿನಲ್ಲಿ ನೆಲೆಸಿರುವ ಒಂದು ಪ್ರಾಣಿ ; ದೆಸೆಯಲ್+ಅಟ್ಟುತ; ದೆಸೆ=ದಿಕ್ಕು/ಎಡೆ/ಜಾಗ/ಮಗ್ಗಲು; ದೆಸೆಯಲ್=ದಿಕ್ಕಿನಲ್ಲಿ/ದಿಕ್ಕಿನಿಂದ; ಅಟ್ಟು=ಮೇಲೆ ನುಗ್ಗು/ಬೆನ್ನು ಹತ್ತಿ ಬರುವುದು; ನಾಲ್ಕೂ ದೆಸೆಯಲಟ್ಟುತ ಬರೆ=ನಾಲ್ಕು ದಿಕ್ಕುಗಳಿಂದಲೂ ಸುತ್ತುವರಿದು ಬೆನ್ನಟ್ಟಿಬರಲು/ಮಯ್ ಮೇಲೆ ನುಗ್ಗುತ್ತಿರಲು;

ಕಂಡು=ನೋಡಿ; ಭಯ+ಇಂದ; ಭಯ=ಹೆದರಿಕೆ/ಅಂಜಿಕೆ/ಪುಕ್ಕಲುತನ; ಹೋಗ=ಹೋಗಲು/ತಪ್ಪಿಸಿಕೊಳ್ಳಲು/ಪಾರಾಗಲು; ದೆಸೆ+ಇಲ್ಲದೆ; ದೆಸೆ=ದಿಕ್ಕು/ಎಡೆ/ಜಾಗ; ಹೋಗ ದೆಸೆಯಿಲ್ಲದೆ=ತಪ್ಪಿಸಿಕೊಳ್ಳಲು ದಾರಿ ಕಾಣದೆ/ಅವಕಾಶವಿಲ್ಲದೆ/ದಿಕ್ಕು ತೋಚದೆ;

ಬಾವಿ=ನೀರಿನಿಂದ ತುಂಬಿರುವ ದೊಡ್ಡ ಗುಂಡಿ/ಕೂಪ; ತಲೆ+ಅನ್+ಊರಿ; ಊರಿ=ಇಟ್ಟು/ಒಡ್ಡಿ/ಮಡಗಿ; ತಲೆಯನೂರಿ=ತಲೆಯನ್ನು ಬಗ್ಗಿಸಿಕೊಂಡು/ತಲೆ ಮರೆಸಿಕೊಂಡು/ಮೇಲೆ ಬೀಳಲು ಬಂದವರ ಕಣ್ಣು ತಪ್ಪಿಸಿ; ಬೀಳುವ+ಅಲ್ಲಿ; ಬೀಳುವಲ್ಲಿ=ಬಾವಿಯ ಒಳಕ್ಕೆ ಇಳಿಯುವ ಸಮಯದಲ್ಲಿ/ಜಾಗದಲ್ಲಿ;

ಹಾವು=ನಂಜಿನಿಂದ ಕೂಡಿದ ಒಂದು ಪ್ರಾಣಿ; ಕಂಡು=ನೋಡಿ; ಇಲಿ+ಕಡಿದ; ಇಲಿ=ಒಂದು ಬಗೆಯ ಪ್ರಾಣಿ; ಕಡಿದ=ಅಗಿದ/ಕಚ್ಚಿರುವ; ಬಳ್ಳಿ=ಹಂಬು/ಲತೆ/ಗಾತ್ರದಲ್ಲಿ ಸಣ್ಣನೆಯದಾಗಿದ್ದು ಉದ್ದವಾಗಿ ಹಬ್ಬಿರುವ ಸಸ್ಯ; ಇಲಿಗಡಿದ ಬಳ್ಳಿ=ಇಲಿಯ ಕಡಿತದಿಂದ ಇನ್ನೇನು ಕತ್ತರಿಸಿ ತುಂಡಾಗುವ ರೀತಿಯಲ್ಲಿದ್ದ

ಬಳ್ಳಿ; ಹಿಡಿದು=ಹಿಡಿದುಕೊಂಡು/ಅವಲಂಬಿಸಿ/ಆಶ್ರಯಿಸಿ/ನೆಚ್ಚಿಕೊಂಡು; ನಿಲೆ=ನಿಲ್ಲಲು/ಜೋತಾಡುತ್ತಿರಲು/ಬಾವಿಯ ಒಳಗಡೆ ನೇತಾಡುತ್ತಿರಲು;

ಜೇನುಹುಳು=ಮರದ ಕೊಂಬೆರೆಂಬೆಗಳ ಮೇಲೆ, ಕಲ್ಲಿನ ಪೊಟರೆಗಳಲ್ಲಿ ಗೂಡನ್ನು ಕಟ್ಟಿ ಹೂವುಗಳ ಮಕರಂದವನ್ನು ಹೀರಿ ತಂದು ಸಿಹಿಯಾದ ತುಪ್ಪವನ್ನು ತಯಾರಿಸುವ ಒಂದು ಬಗೆಯ ಹುಳು; ಮೈ+ಅನ್+ಊರು+ಆಗ; ಮೈಯನು=ದೇಹವನ್ನು/ಶರೀರವನ್ನು; ಊರು=ಕಚ್ಚು/ಚುಚ್ಚು; ಮೈಯನೂರುವಾಗ=ಜೇನುಹುಳು ತನ್ನ ಚೂಪಾದ ಹಾಗೂ ಹರಿತವಾದ ಮುಳ್ಳಿನ ಮೊನೆಯಂತಹ ಕೊಂಡಿಯಿಂದ ಮಯ್ಯನ್ನು ಕಚ್ಚುವಾಗ;

ಇಲಿಗಡಿದ ಬಳ್ಳಿಯ ಹಿಡಿದು ನಿಲೆ ಜೇನುಹುಳು ಮೈಯನೂರುವಾಗ= ಇಲಿಯ ಕಡಿತದಿಂದ ಇನ್ನೇನು ತುಂಡಾಗುವಂತೆ ಹಿಂಜಿಹೋಗುತ್ತಿದ್ದ ಬಳ್ಳಿಯನ್ನೇ ಹಿಡಿದುಕೊಂಡು ನೇತಾಡುತ್ತಿದ್ದಾಗ ಉಂಟಾದ ಸದ್ದುಗದ್ದಲ ಮತ್ತು ಅಲುಗಾಟದಿಂದ, ಬಾವಿಯ ದಡದ ಅಂಚಿನಲ್ಲಿ ಕಟ್ಟಿದ್ದ ಜೇನುಗೂಡಿನಲ್ಲಿದ್ದ ಜೇನುಹುಳುಗಳು ಕೆರಳಿ ಹೊರಬಂದು ಅವನ ಮಯ್ಯನ್ನು ಕಚ್ಚತೊಡಗಿದವು. ಆಗ ಜೇನಿನ ಹುಟ್ಟಿಯಿಂದ ಜೇನುತುಪ್ಪವು ಹನಿಹನಿಯಾಗಿ ಬೀಳತೊಡಗಿತು;

ತುದಿ+ಅಲ್+ಒಂದು; ತುದಿ=ಕೊನೆ/ಅಂಚು; ಹನಿ=ತೊಟ್ಟು/ಒಂದು ಬಿಂದು; ಮಧು=ಜೇನು ತುಪ್ಪ/ಸಿಹಿಯಾದ ಜೇನು; ಮೂಗಿನ ತುದಿಯಲೊಂದು ಹನಿ ಮಧು ಬಂದು ಬೀಳೆ=ನೇತಾಡುತ್ತಿದ್ದ ವ್ಯಕ್ತಿಯ ಮೂಗಿನ ತುದಿಯ ಮೇಲೆ ಜೇನುತುಪ್ಪದ ಹನಿಯೊಂದು ಬೀಳಲು;

ಹಿರಿದು+ಅಪ್ಪ; ಹಿರಿ=ದೊಡ್ಡದು/ಹೆಚ್ಚಿನದು; ಅಪ್ಪ=ಆಗಿರುವ/ಆದಂತಹ; ದುಃಖ+ಎಲ್ಲವ; ದುಃಖ=ಸಂಕಟ/ನೋವು/ವೇದನೆ/ಯಾತನೆ/ತೊಂದರೆ/ಕಳವಳ;

ಹಿರಿದಪ್ಪ ದುಃಖವೆಲ್ಲವ=ಹಿಡಿದುಕೊಂಡಿರುವ ಬಳ್ಳಿಯು ತುಂಡಾದರೆ ಬಾವಿಯ ಒಳಕ್ಕೆ ಬಿದ್ದು ಪ್ರಾಣವನ್ನೇ ಕಳೆದುಕೊಳ್ಳುವಂತಹ ನೆಲೆಗೆ ಒಳಗಾಗಿ, ಅತಿಹೆಚ್ಚಿನ ಅಪಾಯಕ್ಕೆ ಗುರಿಯಾಗಿ ಒದ್ದಾಡುತ್ತಿರುವ ಸಂಕಟವನ್ನು; ಸೈರಿಸಿ=ಸಹಿಸಿಕೊಂಡು/ತಾಳಿಕೊಂಡು; ನಾಲಗೆಯ ತುದಿಯಲ್ಲಿ=ನಾಲಗೆಯ

ತುದಿಯಿಂದ ಜೇನಿನ ಹನಿಯಿರುವ ಮೂಗಿನ ಜಾಗವನ್ನು; ಸೇವಿಸುವ+ಅಂತೆ; ಸೇವಿಸು=ನೆಕ್ಕು/ತಿನ್ನು; ಅಂತೆ=ಹಾಗೆ/ಆ ರೀತಿಯಲ್ಲಿ;

ಸಂಸಾರ=ಮಾನವ ಬದುಕು/ಬಾಳ್ವೆ/ಜೀವನ; ಸುಖ=ಮಾನವನ ಬದುಕಿನಲ್ಲಿ ದೊರೆಯುವ ಒಲವು ನಲಿವು/ಮಯ್ ಮನಗಳಿಗೆ ಉಂಟಾಗುವ ಆನಂದ/ಮುದ/ಹಿಗ್ಗು; ವಿಚಾರಿಸಿ=ಚೆನ್ನಾಗಿ/ಸರಿಯಾಗಿ ಆಲೋಚಿಸಿ/ಚಿಂತಿಸಿ/ಮನನ ಮಾಡಿ; ನೋಡಿದಡೆ=ನೋಡಿದರೆ/ತಿಳಿದರೆ; ದುಃಖದ+ಆಗರ; ಆಗರ=ಮೂಲ ನೆಲೆ/ಜಾಗ; ಇದನ್+ಅರಿದು; ಇದನು=ಇದನ್ನು/ಈ ಸಂಗತಿಯನ್ನು; ಅರಿ=ತಿಳಿ; ಅರಿದು=ತಿಳಿದುಕೊಂಡು/ಅರಿತುಕೊಂಡು; ಸಕಲ=ಎಲ್ಲಾ/ಎಲ್ಲವನ್ನೂ ಒಳಗೊಂಡಂತೆ; ವಿಷಯಂಗಳ್+ಅಲ್ಲಿ; ವಿಷಯ=ಜೀವನದ ಆಗುಹೋಗುಗಳು/ನೋವು ನಲಿವಿನ ಪ್ರಸಂಗಗಳು/ಸಂಗತಿಗಳು;

ಸುಖ+ಇಂತುಟು+ಎಂದು; ಇಂತುಟು=ಈ ರೀತಿಯದು/ಬಗೆಯದು; ನಿರ್ವಿಷಯನ್+ಆಗಿ; ನಿರ್ವಿಷಯ=ಜೀವನದ ಆಗುಹೋಗುಗಳ/ನೋವು ನಲಿವುಗಳ ಬಗ್ಗೆ ಹೆಚ್ಚಿನ ಮೋಹ/ಆತಂಕಕ್ಕೆ ಒಳಗಾಗದಿರುವುದು; ನಿಂದ=ತಳೆದ/ಹೊಂದಿದ; ನಿಲವು=ಮನದಲ್ಲಿ ತಳೆಯುವ ತೀರ್ಮಾನ/ನಿರ್ಣಯ;

ನಿರ್ವಿಷಯನಾಗಿ ನಿಂದ ನಿಲುವು=ಮಾನವನ ಬದುಕಿನಲ್ಲಿ ನೋವು ನಲಿವುಗಳು ವಾಸ್ತವವೆಂಬುದೆನ್ನು ಅರಿತುಕೊಂಡು, ಸಂಕಟ ಬಂದಾಗ ನಿರಾಶೆಗೊಂಡು ಕುಗ್ಗಿಹೋಗದೆ, ನಲಿವು ಉಂಟಾದಾಗ ಅದನ್ನು ಪಡೆದು ಬಾಳುವಂತಹ ಆಸೆಯನ್ನು ಹೊಂದಿರುವುದು/ಜೀವನದಲ್ಲಿ ಆಸಕ್ತಿಯನ್ನು ಕಳೆದುಕೊಳ್ಳದೆ ಬಾಳುವಂತಹ ಗಟ್ಟಿಮನಸ್ಸನ್ನು ಹೊಂದಿರುವುದು;

ನೀನೇ=ಬದುಕಿನಲ್ಲಿ ಎದುರಾದ ಸಂಗತಿಗಳಿಗೆ ಹೊಂದಿಕೊಂಡು ಬಾಳುವುದನ್ನು ಕಲಿಸಿದವನು ನೀನಾಗಿರುವೆ. ಅಂದರೆ ಶಿವಶರಣಶರಣೆಯರು ಒಳ್ಳೆಯ ನಡೆನುಡಿಗಳಿಂದ ಬಾಳುವುದಕ್ಕೆ ಕಾರಣವಾಗುವ ಅರಿವನ್ನೇ ದೇವರೆಂದು ನಂಬಿದ್ದರು; ಸಿಮ್ಮಲಿಗೆಯ ಚೆನ್ನರಾಮಾ=ದೇವರ ಹೆಸರು/ಚಂದಿಮರಸನ ಮೆಚ್ಚಿನ ದೇವರು/ಚಂದಿಮರಸನ ವಚನಗಳ ಅಂಕಿತನಾಮ.)



೨೮. ಹುಲ್ಲ ಮನುಷ್ಯನ ಕಂಡು ಹುಲ್ಲೆ ತಾ ಬೆದರುವಂತೆ
ಇಲ್ಲದ ಶಂಕೆಯನುಂಟೆಂಬನ್ನಕ್ಕ
ಅದರಲ್ಲಿಯೇ ರೂಪಾಯಿತ್ತು
ಹೇಡಿಗಳನೇಡಿಸಿ ಕಾಡಿತ್ತು
ಸಿಮ್ಮಲಿಗೆಯ ಚೆನ್ನರಾಮನೆಂಬ ಭಾವದ ಗಸಣಿ.

**ಇಲ್ಲದ್ದನ್ನು ಇದೆಯೆಂದು, ಇರುವುದನ್ನು ಇಲ್ಲವೆಂದು ಮನದಲ್ಲಿ ಕಲ್ಪಿಸಿಕೊಂಡು, ಜೀವನದ ಪ್ರತಿಯೊಂದು ಗಳಿಗೆಯಲ್ಲೂ ಕಳವಳ, ತಲ್ಲಣ, ಅನುಮಾನ, ಗಾಬರಿ, ಆತಂಕಕ್ಕೆ ಒಳಗಾಗಿ ಮಾನಸಿಕ ಜಂಜಾಟದಿಂದ ನರಳುತ್ತಿರುವ ಹೇಡಿಗಳಿಗೆ, ಜೀವನದಲ್ಲಿ ಎಂದೆಂದಿಗೂ ನೆಮ್ಮದಿಯು ದೊರೆಯುವುದಿಲ್ಲವೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಹುಲ್ಲ್+ಅ=ಹುಲ್ಲ; ಹುಲ್ಲ=ಹುಲ್ಲನ್ನು; ಹುಲ್ಲು=ರಾಗಿ ಇಲ್ಲವೇ ಬತ್ತದ ಬೆಳೆಯ ಒಣಗಿದ ಕಡ್ಡಿ/ರಾಗಿಹುಲ್ಲು/ಬತ್ತದ ಹುಲ್ಲು; ಮನುಷ್ಯ=ಮಾನವ/ವ್ಯಕ್ತಿ;

ಹುಲ್ಲ ಮನುಷ್ಯ=ಬೆದರುಗೊಂಬೆ/ಮಡಕೆಯೊಂದರ ಮೇಲೆ ಕಣ್ಣು ಕಿವಿ ಮೂಗುಗಳನ್ನು ಸುಣ್ಣದಿಂದ ಬರೆದು, ಅದನ್ನು ಮಾನವನ ತಲೆಯಂತೆ ಸಿಂಗರಿಸಿ, ಅದರ ಇಕ್ಕೆಲಗಳಲ್ಲಿ ಕೋಲುಗಳನ್ನು ಬಿಗಿದು ಕಟ್ಟಿ, ಕೋಲುಗಳ ಸುತ್ತ ರಾಗಿ ಇಲ್ಲವೆ ಬತ್ತದ ಹುಲ್ಲನ್ನು ತುಂಬಿ, ಅದರ ಮೇಲೆ ಅಂಗಿ ಚಡ್ಡಿ ಬಟ್ಟೆಯನ್ನು ಬಿಗಿದುಕಟ್ಟಿ, ವ್ಯಕ್ತಿಯೊಬ್ಬನು ನಿಂತಿರುವಂತೆ ಗೊಂಬೆಯೊಂದನ್ನು ಮಾಡಿ, ಬೆಳೆಗಳ ನಡುವೆ ಹೊಲಗದ್ದೆತೋಟಗಳಲ್ಲಿ ನಿಲ್ಲಿಸಿರುತ್ತಾರೆ. ಕಯ್ಗೆ ಬರಲಿರುವ ಬೆಳೆಯನ್ನು ಹಕ್ಕಿಗಳಿಂದ/ಪ್ರಾಣಿಗಳಿಂದ ಕಾಪಾಡಿಕೊಳ್ಳುವುದಕ್ಕಾಗಿ ಈ ರೀತಿಯಾದ ಬೊಂಬೆಯನ್ನು/ಗೊಂಬೆಯನ್ನು ಬೇಸಾಯಗಾರರು ಮಾಡಿರುತ್ತಾರೆ;

ಕಂಡು=ನೋಡಿ; ಹುಲ್ಲೆ=ಜಿಂಕೆ; ತಾ=ತಾನು; ಬೆದರುವ+ಅಂತೆ; ಬೆದರು=ಹೆದರು/ಅಂಜು/ಪುಕ್ಕಲುಗೊಳ್ಳು; ಅಂತೆ=ಹಾಗೆ/ರೀತಿ;

ಹುಲ್ಲ ಮನುಷ್ಯನ ಕಂಡು ಹುಲ್ಲೆ ತಾ ಬೆದರುವಂತೆ=ಬೆದರುಗೊಂಬೆಯನ್ನೇ ಜೀವಂತನಾದ ವ್ಯಕ್ತಿಯೆಂದು ತಪ್ಪಾಗಿ ತಿಳಿದುಕೊಂಡು ಜಿಂಕೆಯು ಹೆದರಿಕೆಯಿಂದ ದೂರಸರಿಯುವಂತೆ/ಕಂಗಾಲಾಗಿ ಓಡುವಂತೆ;

ಇಲ್ಲದ=ವಾಸ್ತವದಲ್ಲಿ ಕಂಡುಬರದ/ದಿಟವಾಗಿರದ; ಶಂಕೆ+ಅನ್+ಉಂಟು+ ಎಂಬ+ಅನ್ನಕ್ಕ; ಶಂಕೆ=ಅಪಾಯ/ವಿಪತ್ತು/ಹಾನಿ/ಕೇಡಾಗಬಹುದೆಂದು ಮನದಲ್ಲಿ ಹೆದರಿಕೆ/ಆತಂಕ/ಕಳವಳದಿಂದ ತಲ್ಲಣಿಸುವುದು; ಅನ್=ಅನ್ನು; ಉಂಟು=ಇದೆ; ಎಂಬ=ಎನ್ನುವ; ಅನ್ನಕ್ಕ=ವರೆಗೆ/ತನಕ;

ಇಲ್ಲದ ಶಂಕೆಯನುಂಟೆಂಬನ್ನಕ್ಕ=ವಾಸ್ತವವಾಗಿ ಇಲ್ಲದ ಅಪಾಯವನ್ನು ಇದೆಯೆಂದು ಊಹಿಸಿಕೊಂಡು, ಹೆದರಿಕೆಯಿಂದ ನಡುಗುತ್ತ ತಲ್ಲಣಗೊಂಡಿರುವ ತನಕ; ಅದರಲ್ಲಿಯೇ=ಮನದಲ್ಲಿ ಮೂಡಿದ ಆತಂಕದ, ಆಪತ್ತಿನ, ಕೇಡಾಗುವುದೆಂಬ ಒಳಮಿಡಿತಗಳಿಂದಲೇ; ರೂಪು+ಆಯಿತ್ತು; ರೂಪು=ಆಕಾರ; ರೂಪು ಆಯಿತ್ತು=ಮನದ ಹೆದರಿಕೆಯೇ ಒಂದು ರೂಪವನ್ನು ಪಡೆದು, ನಿಜವಾಗಿ ಎದುರಿಗೆ ಬಂದಂತೆ ಆಗುತ್ತದೆ;

ಹೇಡಿ+ಗಳ್+ಅನ್+ಏಡಿಸಿ; ಹೇಡಿ=ಅಂಜುಬುರುಕ/ಹೆದರಿಕೆಯಿಂದ ತತ್ತರಿಸುತ್ತಾ, ಎಲ್ಲ ಸಮಯಗಳಲ್ಲೂ, ಸನ್ನಿವೇಶಗಳಲ್ಲೂ, ಸಂಗತಿಗಳಲ್ಲಿಯೂ ಮುಂದಕ್ಕೆ ಅಡಿಯಿಡಲು ಹಿಂಜರಿಯುವವನು/ಪುಕ್ಕಲುತನವುಳ್ಳವನು;

ಏಡಿಸು=ಹೀಯಾಳಿಸು/ನಿಂದಿಸು/ಅವಹೇಳನ ಮಾಡು/ಕಡೆಗಣಿಸು; ಕಾಡು+ಇತ್ತು; ಕಾಡು=ಪೀಡಿಸು/ತೊಂದರೆಯನ್ನು ಕೊಡು/ನರಳುವಂತೆ ಮಾಡು; ಇತ್ತು=ಇರುವುದು; ಭಾವ=ಮನದಲ್ಲಿ ಮೂಡುವ ಒಳಮಿಡಿತ; ಗಸಣಿ=ತೊಂದರೆ/ಕಾಟ/ಹಿಂಸೆ/ತಿಕ್ಕಾಟ/ಕೋಟಲೆ;

ಭಾವದ ಗಸಣಿ=ಮನದೊಳಗೆ ಮೂಡುವಂತಹ ಅಪಾಯದ, ಕೆಡುಕಿನ, ಕೆಟ್ಟದ್ದಾಗುವುದೆಂಬ ಒಳಮಿಡಿತಗಳ ತುಡಿತ; ಸಿಮ್ಮಲಿಗೆಯ ಚೆನ್ನರಾಮನ್+ಎಂಬ; ಎಂಬ=ಎನ್ನುವ; ಸಿಮ್ಮಲಿಗೆಯ ಚೆನ್ನರಾಮಾ=ದೇವರ ಹೆಸರು/ಚಂದಿಮರಸನ ಮೆಚ್ಚಿನ ದೇವರು/ಚಂದಿಮರಸನ ವಚನಗಳ ಅಂಕಿತನಾಮ)



# ಚೆನ್ನಬಸವಣ್ಣ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ದೊರೆತಿರುವ ವಚನಗಳು | : | ೧೭೭೬ |
| ವಚನಗಳ ಅಂಕಿತನಾಮ | : | ಕೂಡಲಚೆನ್ನಸಂಗಯ್ಯ / ಕೂಡಲಚೆನ್ನಸಂಗಮದೇವ |

೨೯. ತನು ಮನ ಬಳಲದೆ
ಉದ್ದಂಡ ವೃತ್ತಿಯಲ್ಲಿ
ಧನವ ಗಳಿಸಿ ತಂದು
ಗುರುಲಿಂಗಜಂಗಮಕ್ಕೆ ವೆಚ್ಚಿಸಿ
ದಾಸೋಹವ ಮಾಡಿ
ಭಕ್ತರಾದೆವೆಂಬವರನೆನಗೆ
ತೋರದಿರಯ್ಯಾ
ಅದೇಕೆಂದರೆ

ಅವ ಪರಧನ ಚೋರಕ
ಅವ ಪಾಪಿ
ಅವಗೆ ವಿಚಾರಿಸದೆ ಉಪದೇಶವ ಕೊಟ್ಟ
ಗುರುವಿಂಗೆ ರೌರವ ನರಕ

ಅವನ ಕಾಯಕವ ವಿಚಾರಿಸದೆ
ಅವನ ಮನೆಯಲ್ಲಿ ಹೊಕ್ಕು
ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ
ಏಳನೆಯ ಪಾತಕ

ಇಂತಹರ ಬದುಕು
ಹುಲಿ ಕಪಿಲೆಯ ತಿಂದು
ಮಿಕ್ಕುದ ನರಿ ಬಂದು ತಿಂಬಂತೆ ಕಾಣಾ
ಕೂಡಲಚೆನ್ನಸಂಗಮದೇವಾ.

**ವ್ಯಕ್ತಿಯು ತನ್ನ ಪಾಲಿನ ದುಡಿಮೆಯನ್ನು ಪ್ರಾಮಾಣಿಕವಾಗಿ ಮಾಡದೆ, ಜನರನ್ನು ವಂಚಿಸಿ ಲೂಟಿ ಹೊಡೆದು ಇಟ್ಟಿರುವ ಹಣದಿಂದ ಮಾಡಿದ ಅನ್ನದಾನ, ಗುರು ಸೇವೆ, ದೇವರ ಪೂಜೆಯು ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆದ ಕೆಲಸವಾಗಿದೆ ಮತ್ತು ಇಂತಹ ಕಳ್ಳ ಹಣವಂತರ ಜತೆ ಕಯ್ ಜೋಡಿಸಿದ ಗುರುಹಿರಿಯರು ನಯವಂಚಕರಾಗಿದ್ದಾರೆ ಎಂಬ ಸಾಮಾಜಿಕ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ತನು=ಮಯ್/ದೇಹ/ಶರೀರ; ಮನ=ಮನಸ್ಸು/ಚಿತ್ತ; ಬಳಲು=ದಣಿಯುವುದು/ಆಯಾಸಗೊಳ್ಳುವುದು/ದುಡಿಮೆಯನ್ನು ಮಾಡಿದಾಗ ಮಯ್ ಮನದ ಕಸುವು ಕುಗ್ಗುವುದು;

ತನು ಮನ ಬಳಲದೆ=ವ್ಯಕ್ತಿಯು ತನ್ನ ಪಾಲಿನ ಕೆಲಸದಲ್ಲಿ ಮಯ್ ಮನವನ್ನು ತಲ್ಲೀನತೆಯಿಂದ ತೊಡಗಿಸಿಕೊಂಡು ಪ್ರಾಮಾಣಿಕವಾಗಿ ದುಡಿಯದೆ/ತನ್ನ ಪಾಲಿನ ಕೆಲಸವನ್ನು ಸರಿಯಾಗಿ ಮಾಡುವುದಕ್ಕೆ ಮನಸ್ಸಿಲ್ಲದೆ/ತನ್ನ ಪಾಲಿನ ದುಡಿಮೆಯನ್ನು ಕಡೆಗಣಿಸಿ;

ಉದ್ದಂಡ+ವೃತ್ತಿ+ಅಲ್ಲಿ; ಉದ್ದಂಡ=ಹಿಂಸೆ/ತೊಂದರೆ/ಉಗ್ರ/ಪ್ರಚಂಡ; ವೃತ್ತಿ=ಕಸುಬು/ಕೆಲಸ/ಉದ್ಯೋಗ; ಉದ್ದಂಡ ವೃತ್ತಿ=ಇತರರಿಗೆ ಸಂಕಟ/ನೋವು/ಯಾತನೆ/ಹಿಂಸೆಯನ್ನು ನೀಡುವ ಕ್ರೂರತನದ ಕೆಲಸ; ಧನ=ಹಣ/ಸಂಪತ್ತು/ಒಡವೆ/ವಸ್ತು; ಗಳಿಸು=ಸಂಪಾದಿಸುವುದು/ಪಡೆಯುವುದು/ಹೊಂದುವುದು;

ಉದ್ದಂಡ ವೃತ್ತಿಯಲ್ಲಿ ಧನವ ಗಳಿಸಿ=ದುಡಿಯುವ ಜನರಿಗೆ ದೊರೆಯಬೇಕಾಗಿದ್ದ ಅನ್ನ, ಬಟ್ಟೆ, ವಸತಿ, ಆಸ್ತಿಪಾಸ್ತಿ, ಒಡವೆವಸ್ತುಗಳನ್ನು ವಂಚನೆ, ಕ್ರೂರತನ, ದಬ್ಬಾಳಿಕೆ, ಅಟ್ಟಹಾಸದ ನಡೆನುಡಿಗಳಿಂದ ಸುಲಿಗೆ ಮಾಡಿ ಇಟ್ಟಿರುವ ಹಣ/ಸಂಪತ್ತು; ತಂದು=ಜನ ಸಮುದಾಯಕ್ಕೆ ದ್ರೋಹವನ್ನು ಬಗೆದು/ಸಮಾಜಕ್ಕೆ ಹಾನಿಯನ್ನು ಉಂಟುಮಾಡಿ ಗಳಿಸಿರುವ ಹಣವನ್ನು ವ್ಯಕ್ತಿಯು ತೆಗೆದುಕೊಂಡು ಬಂದು;

ಗುರು=ಗುಡ್ಡರಿಗೆ/ತನ್ನ ಬಳಿಬಂದವರಿಗೆ ಅರಿವನ್ನು ನೀಡಿ, ಅವರ ವ್ಯಕ್ತಿತ್ವವನ್ನು ಒಳ್ಳೆಯ ನಡೆನುಡಿಗಳಿಂದ ರೂಪಿಸುವ ವ್ಯಕ್ತಿ; ಲಿಂಗ=ಶಿವನ ಸಂಕೇತವಾಗಿರುವ

ವಿಗ್ರಹ/ದೇವರು; ಜಂಗಮ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳಲ್ಲಿ ಶಿವನನ್ನು ಕಾಣುವವನು ಮತ್ತು ಒಳ್ಳೆಯ ನಡೆನುಡಿಗಳಿಗೆ ಪ್ರೇರಣೆಯಾಗುವಂತಹ ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಜನರಲ್ಲಿ ಮೂಡಿಸುವವನು/ತಿಳಿಯ ಹೇಳುವವನು; ವೆಚ್ಚ=ವ್ಯಯ/ವಿತರಣೆ/ಹಂಚುವಿಕೆ;

ಗುರುಲಿಂಗಜಂಗಮಕ್ಕೆ ವೆಚ್ಚಿಸಿ=ಗುರುಲಿಂಗಜಂಗಮರನ್ನು ಒಲವು ನಲಿವುಗಳಿಂದ ಪೂಜಿಸಿ ಮೆರೆಸಲೆಂದು ಹಣವನ್ನು ವಿನಿಯೋಗಿಸಿ/ಬಳಸಿ/ಹಂಚಿ;

ದಾಸೋಹ=ಜಂಗಮರಿಗೆ ಮತ್ತು ಹಸಿದು ಬಂದವರಿಗೆ ಅನ್ನವನ್ನು ನೀಡುವುದು; ಭಕ್ತರ್+ಆದೆವು+ಎಂಬ+ಅವರನ್+ಎನಗೆ; ಭಕ್ತ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು; ಆದೆವು=ಆಗಿದ್ದೇವೆ/ಆಗಿರುವೆವು; ಎಂಬ=ಎಂದು ಹೇಳುವ/ಎನ್ನುವ; ಅವರನ್=ಅವರನ್ನು/ಅಂತಹ ವ್ಯಕ್ತಿಗಳನ್ನು/ಜನಸಮುದಾಯಕ್ಕೆ ಮತ್ತು ಸಮಾಜಕ್ಕೆ ಕೇಡನ್ನು ಬಗೆದವರನ್ನು; ಎನಗೆ=ನನಗೆ; ತೋರದಿರು+ಅಯ್ಯಾ; ತೋರು=ಕಾಣಿಸು/ಕಣ್ಣಿಗೆ ಬೀಳುವಂತೆ ಮಾಡು; ತೋರದಿರು=ತೋರಿಸಬೇಡ/ಕಾಣಿಸಬೇಡ/ಕಣ್ಣಿಗೆ ಬೀಳದಂತೆ ಮಾಡು; ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ;

ಭಕ್ತರಾದೆವೆಂಬವರನೆನಗೆ ತೋರದಿರಯ್ಯಾ=ಜನಸಮುದಾಯಕ್ಕೆ ಕೇಡನ್ನು ಬಗೆದು ಗಳಿಸಿದ ಹಣವನ್ನು ಗುರುಲಿಂಗಜಂಗಮದ ಸೇವೆಗೆ ಬಳಸಿ, ದೇವರಲ್ಲಿ, ಗುರುಹಿರಿಯರಲ್ಲಿ ಒಲವನ್ನು ಹೊಂದಿರುವ ವ್ಯಕ್ತಿಗಳು ತಾವೆಂದು ಹೇಳಿಕೊಂಡು ಮೆರೆಯುವ ವಂಚಕರನ್ನು, ನೀಚರನ್ನು, ಕೇಡಿಗಳನ್ನು ನನ್ನ ಮುಂದೆ ತೋರಿಸದಿರು/ಅಂತಹ ವ್ಯಕ್ತಿಗಳ ಜತೆಯಲ್ಲಿ ಯಾವುದೇ ಬಗೆಯ ಒಡನಾಟ, ವ್ಯವಹಾರ, ಸಂಪರ್ಕವಿಲ್ಲದಂತೆ ಮಾಡು;

ಅದು+ಏಕೆ+ಎಂದರೆ; ಏಕೆ=ಯಾವ ಕಾರಣಕ್ಕಾಗಿ/ಯಾವುದಕ್ಕಾಗಿ; ಅವ=ಅವನು/ಅಂತಹವನು; ಪರ=ಇತರ/ಅನ್ಯ/ಬೇರೆಯ; ಪರಧನ=ಬೇರೆಯವರ ಸಂಪತ್ತು, ಆಸ್ತಿಪಾಸ್ತಿ, ಒಡವೆವಸ್ತು, ಹಣಕಾಸು; ಚೋರ=ಕಳ್ಳ/ಕಳ್ಳತನವನ್ನು ಕಸುಬನ್ನಾಗಿ ಮಾಡಿಕೊಂಡಿರುವವನು; ಚೋರಕ=ಕಳ್ಳ/ಇತರರ ಒಡವೆ ವಸ್ತುಗಳನ್ನು ದೋಚುವವನು/ಅಪಹರಿಸುವವನು; ಪಾಪಿ=ಕೆಟ್ಟ ನಡೆನುಡಿಗಳಿಂದ ಇತರರಿಗೆ ಹಾನಿ, ತೊಂದರೆ, ಸಂಕಟವನ್ನು ಉಂಟು ಮಾಡುವವನು;

ಅವಗೆ=ಅವನಿಗೆ/ಅಂತಹವನಿಗೆ; ವಿಚಾರಿಸು=ಯಾವುದು ಸರಿ/ಯಾವುದು ತಪ್ಪು– ಯಾವುದು ದಿಟ/ಯಾವುದು ಸಟೆ– ಯಾವುದು ನ್ಯಾಯ/ಯಾವುದು ಅನ್ಯಾಯ–ಯಾರು ಒಳ್ಳೆಯವರು/ಯಾರು ಕೆಟ್ಟವರು ಎಂಬ ಸಂಗತಿಗಳನ್ನು ಒರೆಹಚ್ಚಿ ನೋಡಿ ತಿಳಿಯುವುದು; ಉಪದೇಶ=ತಿಳಿವಳಿಕೆಯನ್ನು ಹೇಳುವುದು/ಅರಿವನ್ನು ಮೂಡಿಸುವ ನುಡಿಗಳನ್ನಾಡುವುದು/ಬದುಕನ್ನು ಒಳ್ಳೆಯ ರೀತಿಯಲ್ಲಿ ರೂಪಿಸಿ ಕೊಳ್ಳುವುದಕ್ಕೆ ಅಗತ್ಯವಾದ ಹಿತನುಡಿಗಳನ್ನಾಡುವುದು;

ಕೊಡು=ನೀಡು; ಕೊಟ್ಟ=ನೀಡಿದ; ಗುರುವಿಂಗೆ=ಗುರುವಿಗೆ; ರೌರವ=ಹೆಚ್ಚಿನ ಹಿಂಸೆ/ಸಂಕಟ/ಯಾತನೆ/ವೇದನೆ/ನೋವು; ನರಕ=ಜನಸಮುದಾಯದ ಮನದಲ್ಲಿ ನೆಲೆಗೊಂಡಿರುವ ಮತ್ತೊಂದು ಲೋಕದಲ್ಲಿರುವ ಕಲ್ಪಿತ ಜಾಗ. ಇಲ್ಲಿ ಅಂದರೆ ನಾವು ಇರುವ ಲೋಕದಲ್ಲಿ ಜನರಿಗೆ ಕೇಡನ್ನು ಬಗೆದು ಸಾವನ್ನಪ್ಪಿದ ವ್ಯಕ್ತಿಯು, ಅನಂತರ ತಾನು ಮಾಡಿದ ಕೆಟ್ಟಕೆಲಸಗಳಿಗೆ ತಕ್ಕಂತೆ ನಾನಾ ಬಗೆಯ ದಂಡನೆಗಳಿಗೆ ಗುರಿಯಾಗಿ ನರಕದಲ್ಲಿ ನರಳುತ್ತಾನೆ. ಜನರಿಗೆ ಕೇಡನ್ನು ಮಾಡಿದವರು ಸಂಕಟದ ನೆಲೆಯಾದ ನರಕಕ್ಕೆ, ಒಳಿತನ್ನು ಮಾಡಿದವರು ಸ್ವರ್ಗಕ್ಕೆ ಹೋಗುತ್ತಾರೆ ಎಂಬ ನಂಬಿಕೆಯು ಜನಮನದಲ್ಲಿದೆ; ರೌರವ ನರಕ=ಹೆಚ್ಚಿನ ದಂಡನೆಯನ್ನು ನೀಡುವ ಒಂದು ನರಕದ ಹೆಸರು;

ಅವಗೆ ವಿಚಾರಿಸದೆ ಉಪದೇಶವ ಕೊಟ್ಟ ಗುರುವಿಂಗೆ ರೌರವ ನರಕ=ಗುರುವಾದವನು ತನ್ನ ಬಳಿಗೆ ಬಂದ ವ್ಯಕ್ತಿಗಳಲ್ಲಿ ಯಾರು ಒಳ್ಳೆಯವರು/ಯಾರು ಕೆಟ್ಟವರು ಎಂಬುದನ್ನು ತಿಳಿದಿರಬೇಕು. ಒಳ್ಳೆಯವರು ಎಂದರೆ "ಜನಸಮುದಾಯಕ್ಕೆ ಒಳಿತನ್ನು ಉಂಟುಮಾಡುವವರು". ಕೆಟ್ಟವರು ಎಂದರೆ

"ಜನಸಮುದಾಯಕ್ಕೆ ಕೇಡನ್ನು ಬಗೆಯುವವರು." ಸಮಾಜದ್ರೋಹಿಗಳ ಜತೆಯಲ್ಲಿ ಗುರುವಾದವನು ಒಡನಾಟವನ್ನು, ವ್ಯವಹಾರವನ್ನು, ಸಂಪರ್ಕವನ್ನು ಇಟ್ಟುಕೊಳ್ಳಬಾರದು. ತನ್ನ ಬಳಿ ಉಪದೇಶವನ್ನು ಪಡೆಯಲು ಬಂದಿರುವ ವ್ಯಕ್ತಿಯು ಸಮಾಜಕ್ಕೆ/ಜನಸಮುದಾಯಕ್ಕೆ ಹಾನಿಯನ್ನುಂಟುಮಾಡಿ ಹಣವಂತನಾಗಿರುವುದನ್ನು ಅರಿತಿದ್ದರೂ, ಅವನು ತನ್ನ ಜಾತಿಯವನು/ತನ್ನ ಮತದವನು/ತನ್ನ ಕುಲದವನು ಎಂಬ ಕಾರಣಕ್ಕಾಗಿ ಒಡನಾಟವನ್ನು ಇಟ್ಟುಕೊಂಡರೆ, ಅಂತಹ ವ್ಯಕ್ತಿಯು ಗುರು ಆಗುವುದಕ್ಕೆ ಯೋಗ್ಯನಲ್ಲ ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ; ಅವನ=ಅಂತಹ ವ್ಯಕ್ತಿಯ/ಕೆಟ್ಟ ನಡೆನುಡಿಗಳುಳ್ಳ ವ್ಯಕ್ತಿಯ;

ಕಾಯಕ=ಕಸುಬು/ಕೆಲಸ; ಮನೆ+ಅಲ್ಲಿ; ಹೋಗು=ಒಳಸೇರು/ಪ್ರವೇಶಿಸು; ಹೊಕ್ಕು=ಒಳಕ್ಕೆ ಹೋಗಿ; ಲಿಂಗ+ಅರ್ಚನೆಯ; ಅರ್ಚನೆ=ಪೂಜೆ/ದೇವರನ್ನು ಪೂಜಿಸುವಾಗ ಮಾಡುವ ಆಚರಣೆಗಳು; ಪಾತಕ=ಕೆಟ್ಟ ಕೆಲಸ/ಪಾಪದ ನಡೆನುಡಿ; ಏಳನೆಯ ಪಾತಕ=ಕಳ್ಳತನ;

ಏಳು ಪಾತಕಗಳು= (೧) ಹಾದರ (೨) ಜೂಜು (೩) ಬೇಟೆ (೪) ಕುಡಿತ (೫) ಬಿರುನುಡಿ (೬) ದಂಡನೆ (೭) ಕಳ್ಳತನ ಎಂಬ ಈ ಏಳು ಬಗೆಯ ನಡೆನುಡಿಗಳನ್ನು "ಸಪ್ತ ಪಾತಕಗಳು" ಎಂದು ಜನಸಮುದಾಯ ಹೆಸರಿಸಿದೆ;

ಅವನ ಕಾಯಕವ ವಿಚಾರಿಸದೆ ಅವನ ಮನೆಯಲ್ಲಿ ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏಳನೆಯ ಪಾತಕ=ಶಿವನನ್ನು ಪೂಜಿಸಲು ಬಯಸುವ ಸಿರಿವಂತನಾದ ವ್ಯಕ್ತಿಯ ಮನೆಯಲ್ಲಿ ಲಿಂಗಪೂಜೆಯಲ್ಲಿ ತೊಡಗುವ ಜಂಗಮನು, ಅಲ್ಲಿಗೆ ಹೋಗುವುದಕ್ಕೆ ಮೊದಲೇ ಆ ಮನೆಯೊಡೆಯನು ಮಾಡುವ ಕಾಯಕವೇನೆಂಬುದನ್ನು ತಿಳಿದುಕೊಂಡಿರಬೇಕು.

ಏಕೆಂದರೆ ಶಿವಶರಣಶರಣೆಯರ ಪಾಲಿಗೆ 'ಕಾಯಕ' ಎನ್ನುವುದು ಕೇವಲ ಯಾವುದೋ ಒಂದು ಕಸುಬು/ಕೆಲಸ ಮಾತ್ರ ಆಗಿರಲಿಲ್ಲ. ಅವರ ಪಾಲಿಗೆ ಕಾಯಕವೆಂದರೆ "ವ್ಯಕ್ತಿಯು ಮಾಡುವ ಕಸುಬು ಅವನಿಗೆ ಮತ್ತು ಅವನ ಕುಟುಂಬಕ್ಕೆ ಒಲವು ನಲಿವು ನೆಮ್ಮದಿಯನ್ನು ತಂದುಕೊಡುವಂತೆಯೇ,

ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಿದ್ದು, ಒಟ್ಟು ಜನಸಮುದಾಯದ ಹಿತಕ್ಕೆ ನೆರವಾಗುವಂತಿರುವ ದುಡಿಮೆ”. ಸಿರಿವಂತನಾದ ವ್ಯಕ್ತಿಯು ಮಾಡುವ ಕಾಯಕದಿಂದ ಜನರಿಗೆ ಮತ್ತು ಸಮಾಜಕ್ಕೆ ಕೇಡಾಗುತ್ತಿದ್ದರೆ, ಅಂತಹವನ ಮನೆಯಲ್ಲಿ ಜಂಗಮನು ಪೂಜೆಯನ್ನು ಮಾಡಬಾರದು. ಹಾಗೆ ಮಾಡಿದ ಜಂಗಮನು ಕಳ್ಳ ಹಣಕ್ಕೆ ಕಯ್ ಒಡ್ಡಿದವನಾಗಿ ಕಳ್ಳತನವೆಂಬ ಏಳನೆಯ ಪಾತಕವನ್ನು ಮಾಡುತ್ತಾನೆ;

ಇಂತಹರ=ಈ ರೀತಿ ಜನಸಮುದಾಯವನ್ನು ವಂಚಿಸಿ ಸಂಪತ್ತನ್ನು ಸಂಪಾದಿಸಿರುವ ಹಣವಂತ, ಇಂತಹ ಕಳ್ಳ ಹಣವಂತನೊಡನೆ ಒಡನಾಡುವ ಗುರು ಮತ್ತು ಜಂಗಮ–ಈ ಮೂವರು ವ್ಯಕ್ತಿಗಳ; ಬದುಕು=ಜೀವನ/ಬಾಳು; ಹುಲಿ=ಜೀವಿಗಳನ್ನು ಕೊಂದು ತಿನ್ನುವ ಕಾಡು ಪ್ರಾಣಿ; ಕಪಿಲೆ=ಹಸು/ಕಂದು ಬಣ್ಣದ ದನ; ತಿನ್ನು=ಉಣ್ಣು/ಕಬಳಿಸು; ಮಿಕ್ಕು=ಉಳಿಯುವುದು/ಉಳಿದು ಕೊಂಡಿರುವುದು; ತಿಂದು ಮಿಕ್ಕುದ=ಕುಡಿದು/ಉಂಡು/ತಿಂದು/ಕಬಳಿಸಿದ ಬಳಿಕ ಉಳಿದಿರುವುದನ್ನು; ನರಿ=ಕಾಡು ಪ್ರಾಣಿ/ವ್ಯಕ್ತಿಯ ಕಪಟತನ ಮತ್ತು ಕುತಂತ್ರದ ನಡೆನುಡಿಗಳನ್ನು ಸೂಚಿಸಲು ನರಿಯ ಹೆಸರನ್ನು ಜನರು ಒಂದು ರೂಪಕವಾಗಿ ಬಳಸುತ್ತಾರೆ; ತಿಂಬ+ಅಂತೆ; ತಿಂಬ=ತಿನ್ನುವ; ಅಂತೆ=ಹಾಗೆ/ಆ ರೀತಿ; ಕಾಣ್=ನೋಡು/ತಿಳಿ; ಕಾಣಾ=ಕಂಡೆಯಾ/ತಿಳಿದಿರುವೆಯಾ;

ಇಂತಹರ ಬದುಕು ಹುಲಿ ಕಪಿಲೆಯ ತಿಂದು ಮಿಕ್ಕುದ ನರಿ ಬಂದು ತಿಂಬಂತೆ ಕಾಣಾ=ಹುಲಿಯು ಹಸುವಿನ ನೆತ್ತರನ್ನು ಹೀರಿ, ಹೊಟ್ಟೆಯ ತುಂಬಾ ಮಾಂಸವನ್ನು ತಿಂದ ನಂತರ, ಅದು ಬಿಟ್ಟು ಹೋಗಿದ್ದ ಮಾಂಸವನ್ನು ತಿನ್ನುವುದಕ್ಕಾಗಿ ಹೊಂಚು ಹಾಕುತ್ತಿದ್ದ ನರಿಯು ಹಸುವಿನ ಮಾಂಸವನ್ನು ತಿನ್ನುವ ಪ್ರಸಂಗವನ್ನು ಒಂದು ರೂಪಕವಾಗಿ ವಚನಕಾರನು ಚಿತ್ರಿಸಿದ್ದಾನೆ.

ಜನಸಮುದಾಯವನ್ನು ವಂಚಿಸಿ ಸಂಪತ್ತಿಗೆ ಒಡೆಯನಾಗುವ ಹಣವಂತನು ಹುಲಿಯಂತೆ ಕ್ರೂರಿಯಾಗಿದ್ದಾನೆ. ಅಂದರೆ ಅವನಲ್ಲಿ ಸಹಮಾನವರ ಬಗ್ಗೆ ಯಾವುದೇ ಬಗೆಯ ಒಲವು, ಕರುಣೆ, ಕಾಳಜಿ ಇರುವುದಿಲ್ಲ. ಇಂತಹ ವ್ಯಕ್ತಿಯ ಹಣದಿಂದ ಪೂಜೆಗೊಳ್ಳುವ, ಸೇವೆಯನ್ನು ಪಡೆಯುವ,

ಅನುಕೂಲಗಳನ್ನು ಹೊಂದುವ ಜಾತಿ ಜಗದ್ಗುರುಗಳು, ದೇವ ಮಾನವರು, ಗುರುಹಿರಿಯರು ನರಿಯಂತೆ ಅಂದರೆ ನಯವಂಚಕತನ ವ್ಯಕ್ತಿಗಳಾಗಿರುವುದಲ್ಲದೆ, ಜನಸಮುದಾಯವನ್ನು/ಸಮಾಜವನ್ನು ಕೊಳ್ಳೆಹೊಡೆದ ಕಳ್ಳಸಂಪತ್ತಿನ ಪಾಲುದಾರರಾಗಿದ್ದಾರೆ ಎಂಬ ವಾಸ್ತವವನ್ನು ಈ ರೂಪಕ ಸೂಚಿಸುತ್ತದೆ. ಬಲಿಯಾಗುವ ಕಪಿಲೆಯು ಜನಸಮುದಾಯದ ದುರಂತವನ್ನು ಸಂಕೇತಿಸುತ್ತದೆ.

ಕೂಡಲಚೆನ್ನಸಂಗಮ+ದೇವಾ; ಕೂಡಲು=ಎರಡು ನದಿ/ಹೊಳೆ/ತೊರೆಗಳು ಜತೆಗೂಡುವ ಜಾಗ/ನೆಲೆ; ಚೆನ್ನ=ಸುಂದರ/ಸೊಗಸು/ಚೆಲುವು; ಸಂಗಮ=ಶಿವ/ಈಶ್ವರ; ಕೂಡಲಚೆನ್ನಸಂಗಮದೇವಾ=ಎರಡು ನದಿಗಳು ಜತೆಗೂಡುವ ನೆಲೆಯಲ್ಲಿರುವ ಶಿವಲಿಂಗ/ಈಶ್ವರ; ಕೂಡಲಚೆನ್ನಸಂಗಮದೇವ=ವಚನಕಾರ ಚೆನ್ನಬಸವಣ್ಣನ ವಚನಗಳ ಅಂಕಿತನಾಮ.)



೩೦. ನಿಷ್ಠೆಯುಳ್ಳಾತಂಗೆ ನಿತ್ಯ ನೇಮದ ಹಂಗೇಕೆ
ಸತ್ಯವುಳ್ಳಾತಂಗೆ ತತ್ವ ವಿಚಾರದ ಹಂಗೇಕೆ
ಅರಿವುಳ್ಳಾತಂಗೆ ಅಗ್ಘವಣಿಯ ಹಂಗೇಕೆ
ಮನಶುದ್ಧವುಳ್ಳವಂಗೆ ಮಂತ್ರದ ಹಂಗೇಕೆ
ಭಾವಶುದ್ಧವುಳ್ಳವಂಗೆ ಹೂವಿನ ಹಂಗೇಕೆ
ಕೂಡಲಚೆನ್ನಸಂಗಯ್ಯಾ
ನಿಮ್ಮನರಿದಾತಂಗೆ ನಿಮ್ಮ ಹಂಗೇಕೆ.

**ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿಗೆ ದೇವರನ್ನು ಪೂಜಿಸುವ ಇಲ್ಲವೇ ದೇವರ ಇರುವಿಕೆಯ ಬಗೆಗಿನ ಸಂಗತಿಗಳನ್ನು ಮನನ ಮಾಡಿಕೊಳ್ಳುವ ಅಗತ್ಯವಿಲ್ಲ ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

**"ಒಳ್ಳೆಯ ನಡೆನುಡಿ" ಎಂದರೆ ಜೀವನದಲ್ಲಿ ವ್ಯಕ್ತಿಯು ತನಗೆ ಒಳಿತನ್ನು ಬಯಸುವಂತೆಯೇ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನುಂಟು ಮಾಡುವಂತಹ ನಡೆನುಡಿಗಳನ್ನು ಹೊಂದಿರುವುದು.**

(ನಿಷ್ಠೆ+ಉಳ್ಳ್+ಆತಂಗೆ; ನಿಷ್ಠೆ=ಒಳ್ಳೆಯ ನಡೆನುಡಿಗಳಲ್ಲಿ ಬಲವಾದ ನಂಬಿಕೆಯನ್ನು ಇಟ್ಟುಕೊಂಡು ಪ್ರಾಮಾಣಿಕತನದಿಂದ ಬಾಳುವುದು; ಉಳ್ಳ್/ಉಳ್=ಇರು/ಹೊಂದು/ಪಡೆ; ಆತಂಗೆ=ಅಂತಹ ವ್ಯಕ್ತಿಗೆ/ಅವನಿಗೆ; ನಿತ್ಯ=ಪ್ರತಿ ದಿನ/ಯಾವಾಗಲೂ ಇರುವ/ನಿರಂತರವಾದ/ದಿನವೂ ಮಾಡುವ; ನೇಮ=ಹೀಗೆಯೇ ಇರಬೇಕು/ಮಾಡಬೇಕು/ನಡೆದುಕೊಳ್ಳಬೇಕು ಎಂಬ ಕಟ್ಟಲೆ/ನಿಯಮ/ಆಚರಣೆ;

ನಿತ್ಯನೇಮ=ದೇವರನ್ನು ಒಲಿಸಿಕೊಳ್ಳಲು/ದೇವರ ಕರುಣೆಗೆ ಪಾತ್ರರಾಗಲು ಪ್ರತಿದಿನವೂ ಜಪ, ತಪ, ಪೂಜೆ, ಉಪವಾಸ, ಜಾಗರಣೆ ಮುಂತಾದ ಆಚರಣೆಗಳನ್ನು ಚಾಚೂತಪ್ಪದೆ ನಿರಂತರವಾಗಿ ಮಾಡುತ್ತಿರುವುದು; ಹಂಗು+ಏಕೆ; ಹಂಗು=ಆಶ್ರಯ/ನಂಟು/ಅಗತ್ಯ/ಅವಶ್ಯಕತೆ/ಅವಲಂಬನೆ;

ಏಕೆ=ಯಾತಕ್ಕಾಗಿ/ಯಾವುದಕ್ಕಾಗಿ; ಹಂಗೇಕೆ=ಅವಲಂಬಿಸಬೇಕಾದ/ಆಶ್ರಯಿಸಬೇಕಾದ/ಮಾಡಬೇಕಾದ ಅಗತ್ಯವಿಲ್ಲ;

ನಿಷ್ಠೆಯುಳ್ಳಾತಂಗೆ ನಿತ್ಯನೇಮದ ಹಂಗೇಕೆ=ಜೀವನದ ವ್ಯವಹಾರಗಳಲ್ಲಿ ಸಹಮಾನವರ ಒಲವು ನಲಿವು ನಂಬಿಕೆಗೆ ಪಾತ್ರನಾಗಿ ಪ್ರಾಮಾಣಿಕತನದ ನಡೆನುಡಿಗಳಿಂದ ಬಾಳುತ್ತಿರುವ ವ್ಯಕ್ತಿಗೆ ಯಾವುದೇ ಬಗೆಯ ಜಪ ತಪ ಪೂಜೆಗಳ ಮೂಲಕ ದೇವರನ್ನು ಪೂಜಿಸಬೇಕಾದ ಅಗತ್ಯವಿಲ್ಲ;

ಸತ್ಯ+ಉಳ್ಳ್+ಆತಂಗೆ; ಸತ್ಯ=ದಿಟ/ನಿಜ/ವಾಸ್ತವ; ತತ್ವ=ನಿಯಮ/ಸೂತ್ರ/ದೇವರ ಇರುವಿಕೆಯ ರೀತಿಯನ್ನು ಕುರಿತ ಚಿಂತನೆ/ಕಲ್ಪನೆ/ಸಂಗತಿ; ವಿಚಾರ=ಯಾವುದು ಸರಿ–ಯಾವುದು ತಪ್ಪು; ಯಾವುದು ನಿಜ–ಯಾವುದು ಸಟೆ; ಯಾವುದು ಕಲ್ಪಿತ–ಯಾವುದು ವಾಸ್ತವ ಎಂಬುದನ್ನು ಕುರಿತು ಮಾಡುವ ಆಲೋಚನೆ/ವಿವೇಚನೆ/ವಿವೇಕ;

ಸತ್ಯವುಳ್ಳಾತಂಗೆ ತತ್ವವಿಚಾರದ ಹಂಗೇಕೆ=ದಿನನಿತ್ಯದ ಜೀವನದಲ್ಲಿ ಕೆಟ್ಟದ್ದನ್ನು, ಸುಳ್ಳನ್ನು, ಕಪಟತನದ ನಡೆನುಡಿಗಳನ್ನು ಬಿಟ್ಟು, ತನ್ನ ವ್ಯಕ್ತಿತ್ವದ ಇತಿಮಿತಿಗಳನ್ನು ಚೆನ್ನಾಗಿ ಅರಿತುಕೊಂಡು ಒಳ್ಳೆಯತನದಿಂದ ಬಾಳುತ್ತಿರುವ ವ್ಯಕ್ತಿಗೆ ದೇವರ ಬಗ್ಗೆ ಕೇವಲ ಮಾತಿನ ಆಡಂಬರಕ್ಕಾಗಿ ಮಾಡುವ ತರ್ಕ ಇಲ್ಲವೇ ಒಣಚರ್ಚೆಯ ಅಗತ್ಯವಿರುವುದಿಲ್ಲ. ಏಕೆಂದರೆ ಜನಸಮುದಾಯಕ್ಕೆ ಒಳಿತನ್ನು ಮಾಡುವ ವ್ಯಕ್ತಿಯ ನಡೆನುಡಿಗಳು ದೇವರ ವಿಚಾರಕ್ಕಿಂತಲೂ ದೊಡ್ಡದಾಗಿರುತ್ತವೆ;

ಅರಿವು+ಉಳ್ಳ್+ಆತಂಗೆ; ಅರಿವು=ತಿಳಿವಳಿಕೆ/ವಿವೇಕ/ಎಚ್ಚರ; ಅಗ್ಘವಣಿ=ದೇವರ ವಿಗ್ರಹದ ಮೇಲೆ ಸುರಿಯುವ/ಹಾಕುವ ನೀರು. ದೇವರನ್ನು ಪೂಜಿಸುವಾಗ ನಿತ್ಯವೂ ವಿಗ್ರಹದ ಮೇಲೆ ನೀರನ್ನು ಎರೆದು ಮಾಡುವ ಒಂದು ಬಗೆಯ ಆಚರಣೆ;

ಅರಿವುಳ್ಳಾತಂಗೆ ಅಗ್ಘವಣಿಯ ಹಂಗೇಕೆ=ಜೀವನದಲ್ಲಿ ಇತರರಿಗೆ ಒಳಿತನ್ನು ಮಾಡಬೇಕೆ ಹೊರತು ಯಾವುದೇ ಬಗೆಯಿಂದಲೂ ಕೆಡುಕನ್ನು ಮಾಡಬಾರದು ಎಂಬ ಎಚ್ಚರದಿಂದ ಬಾಳುವ ವ್ಯಕ್ತಿಯ ಪಾಲಿಗೆ ಅರಿವಿನ ನಡೆನುಡಿಯೇ ದೇವರಿಗೆ ಮಾಡುವ ಮಜ್ಜನವಾಗಿರುತ್ತದೆ(ಮಜ್ಜನ=ಸ್ನಾನ/ನೀರನ್ನು ಎರೆಯುವುದು);

ಮನ+ಶುದ್ಧ+ಉಳ್+ಅವಂಗೆ; ಮನ=ಮನಸ್ಸು/ಚಿತ್ತ; ಶುದ್ಧ=ಶುಚಿಯಾಗಿರುವುದು/ಮಡಿಯಾಗಿರುವುದು/ಚೊಕ್ಕಟವಾಗಿರುವುದು; ಮನಶುದ್ಧವುಳ್ಳವನು=ಮನದಲ್ಲಿ ಮೂಡುವಂತಹ ಒಳಿತು ಕೆಡುಕಿನ ಒಳಮಿಡಿತಗಳಲ್ಲಿ, ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಒಳ್ಳೆಯದನ್ನು ಮಾತ್ರ ಕಯ್ಗೊಂಡು, ತನ್ನ ಮನಸ್ಸನ್ನು ಸದಾ ಕಾಲ ಹತೋಟಿಯಲ್ಲಿಟ್ಟುಕೊಂಡು ಬಾಳುತ್ತಿರುವವನು;

ಮಂತ್ರ=ದೇವತೆಗಳನ್ನು ಒಲಿಸಿ ಕೊಳ್ಳುವುದಕ್ಕಾಗಿ ಇಲ್ಲವೇ ದೇವತೆಗಳ ಕರುಣೆಗೆ ಪಾತ್ರರಾಗುವುದಕ್ಕಾಗಿ, ಅವರ ಶಕ್ತಿ ಮತ್ತು ಪವಾಡಗಳನ್ನು ಹೊಗಳಿ ಕೊಂಡಾಡುವಂತಹ ನುಡಿ/ಶ್ಲೋಕ/ಸ್ತುತಿ;

ಮನಶುದ್ಧವುಳ್ಳವಂಗೆ ಮಂತ್ರದ ಹಂಗೇಕೆ=ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಒಳ್ಳೆಯ ರೀತಿಯಲ್ಲಿ ಬಾಳುತ್ತಿರುವ ವ್ಯಕ್ತಿಗೆ ಯಾವುದೇ ದೇವರನ್ನು/ದೇವತೆಯನ್ನು ಗುಣಗಾನ ಮಾಡಬೇಕಾದ ಅಗತ್ಯವಿರುವುದಿಲ್ಲ;

ಭಾವ+ಶುದ್ಧ+ಉಳ್+ಅವಂಗೆ; ಭಾವ=ಮನದಲ್ಲಿ ಮೂಡುವ ಒಳಮಿಡಿತ/ಸಂವೇದನೆ/ಚಿಂತನೆ/ಆಲೋಚನೆ; ಭಾವಶುದ್ಧ=ವ್ಯಕ್ತಿಯು ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕೆಂಬ ಹಂಬಲ/ಆಲೋಚನೆ/ಚಿಂತನೆಗಳಿಂದ ಕೂಡಿರುವುದು; ಹೂವು=ಕುಸುಮ/ಅರಳು;

ಭಾವಶುದ್ಧವುಳ್ಳವಂಗೆ ಹೂವಿನ ಹಂಗೇಕೆ=ಒಳ್ಳೆಯ ಮನಸ್ಸಿನಿಂದ ಕೂಡಿ ಎಲ್ಲರಿಗೂ ಒಳಿತನ್ನು ಮಾಡುವಂತಹ ವ್ಯಕ್ತಿಯು ದೇವರಿಗೆ ಹೂವನ್ನು ಮುಡಿಸಿ ಪೂಜಿಸಬೇಕಾದ ಅಗತ್ಯವಿಲ್ಲ. ಏಕೆಂದರೆ ಅವನ ಒಳ್ಳೆಯತನದಿಂದ ಕೂಡಿದ ಮನಸ್ಸೇ ದೇವರಿಗೆ ನಿತ್ಯವೂ ನೀಡುವ ಹೂವಾಗಿರುತ್ತದೆ;

ಕೂಡಲಚೆನ್ನಸಂಗ+ಅಯ್ಯ; ಕೂಡಲು=ಎರಡು ನದಿ/ಹೊಳೆ/ತೊರೆಗಳು ಜತೆಗೂಡುವ ಜಾಗ/ನೆಲೆ; ಚೆನ್ನ=ಸುಂದರ/ಸೊಗಸು/ಚೆಲುವು; ಸಂಗ=ಶಿವ/ಈಶ್ವರ; ಅಯ್ಯ=ಇತರರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ; ಕೂಡಲಚೆನ್ನಸಂಗಯ್ಯ=ಎರಡು ನದಿಗಳು ಜತೆಗೂಡುವ ನೆಲೆಯಲ್ಲಿರುವ ಶಿವಲಿಂಗ/ಈಶ್ವರ;

ನಿಮ್ಮನ್+ಅರಿದ+ಆತಂಗೆ; ನಿಮ್ಮನ್=ದೇವರನ್ನು/ಶಿವನನ್ನು/ಕೂಡಲ ಚೆನ್ನಸಂಗಯ್ಯನನ್ನು; ಅರಿದ=ತಿಳಿದ;ಅರಿದಾತಂಗೆ=ತಿಳಿದವನಿಗೆ; ನಿಮ್ಮ=ದೇವರ/ಶಿವನ/ಕೂಡಲಚೆನ್ನಸಂಗಯ್ಯನ;

ನಿಮ್ಮನರಿದಾತಂಗೆ ನಿಮ್ಮ ಹಂಗೇಕೆ=ಶಿವಶರಣಶರಣೆಯರ ಪಾಲಿಗೆ ದೇವರು ಇಲ್ಲವೇ ಶಿವನು ಮರ, ಮಣ್ಣು, ಕಲ್ಲಿನ ವಿಗ್ರಹದ ರೂಪದಲ್ಲಿರಲಿಲ್ಲ. ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳನ್ನೇ ಅವರು ದೇವರೆಂದು ಅರಿತಿದ್ದರು. ಆದುದರಿಂದಲೇ ದೇವರನ್ನು ಪೂಜಿಸುವ ಬಹುಬಗೆಯ ಆಚರಣೆಗಳು ಮಾನವನ ಒಳ್ಳೆಯ ಬದುಕಿಗೆ ಅಗತ್ಯವಾದ ಸಂಗತಿಗಳಾಗಿ ಅವರಿಗೆ ಕಂಡುಬರಲಿಲ್ಲ.

ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿಗೆ ದೇವರ ಒಲುಮೆ ಇಲ್ಲವೇ ಕರುಣೆಯ ಹಂಗಿಲ್ಲ ಎನ್ನುವ ದಿಟ್ಟತನದ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು)



# ಜೇಡರ ದಾಸಿಮಯ್ಯ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಊರು | : | ಮುದನೂರು<br>ಗುಲ್ಬರ್ಗ ಜಿಲ್ಲೆ. |
| ಹೆಂಡತಿ | : | ದುಗ್ಗಳೆ. |
| ಕಸುಬು | : | ನೆಯ್ಗೆಯ ಕಾಯಕ<br>ಜೇಡ=<br>(೧) ನೇಕಾರ/ನೇಯುವವನು/ ನೆಯ್ಗೆಯವನು.<br>(೨) ಬಲೆಯನ್ನು ನೇಯುವ ಒಂದು ಬಗೆಯ ಹುಳು.<br>(೩) ಕಯ್ ಮಗ್ಗದಲ್ಲಿ ನೂಲಿನ ಎಳೆಗಳನ್ನು ಹೆಣೆದು/ನೆಯ್ದು ಬಟ್ಟೆಯನ್ನು ತಯಾರಿಸುವ ಕಸುಬು) |
| ದೊರೆತಿರುವ ವಚನಗಳು | : | ೧೭೬ |
| ವಚನಗಳ ಅಂಕಿತನಾಮ | : | ರಾಮನಾಥ |

೩೧. ಬರು ಸಠಗನ ಭಕ್ತಿ
ದಿಟವೆಂದು ನಚ್ಚಲು ಬೇಡ
ಮಠದೊಳಗಣ ಬೆಕ್ಕು
ಇಲಿಯ ಕಂಡು
ಪುಟನೆಗೆದಂತಾಯಿತ್ತು ಕಾಣಾ ರಾಮನಾಥ.

**ಸುಳ್ಳು, ಕಪಟತನ, ವಂಚನೆಯ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುತ್ತಾ, ಜನಮೆಚ್ಚುಗೆಯನ್ನು ಪಡೆಯಲೆಂದು ದೇವರಲ್ಲಿ ಒಲವುಳ್ಳವನಂತೆ ಬಹುಬಗೆಯ ಪೂಜೆ ಮತ್ತು ಆಚರಣೆಗಳಲ್ಲಿ ತೊಡಗಿರುವ ವ್ಯಕ್ತಿಯನ್ನು ಒಳ್ಳೆಯವನೆಂದು ನಂಬಬಾರದು ಎಂಬ ಎಚ್ಚರಿಕೆಯನ್ನು ಈ ವಚನದಲ್ಲಿ ನೀಡಲಾಗಿದೆ.**

(ಬರು=ಬರಿದು/ಏನೂ ಇಲ್ಲದಿರುವುದು/ಪೊಳ್ಳು; ಶಠ=ಮೋಸ/ವಂಚನೆ; ಶಠಗ=ಕಪಟಿ/ವಂಚಕ/ಮೋಸಗಾರ; ಶಠಗ>ಸಠಗ; ಭಕ್ತಿ=ದೇವರನ್ನು ಪೂಜಿಸಲು/ಒಲಿಸಿಕೊಳ್ಳಲು ವ್ಯಕ್ತಿಯು ಹೊಂದಿರಬೇಕಾದ ಒಳ್ಳೆಯ ನಡೆನುಡಿ;

ಬರು ಸಠಗನ ಭಕ್ತಿ=ಸುಳ್ಳು, ವಂಚಕತನ, ಕೆಟ್ಟ ನಡೆನುಡಿಯುಳ್ಳ ವ್ಯಕ್ತಿಯು ದೇವರ ಪೂಜೆ/ಆಚರಣೆಗಳಲ್ಲಿ ಒಲವು ಉಳ್ಳವನಂತೆ ಮಾಡುವ ನಟನೆ; ದಿಟ+ಎಂದು; ದಿಟ=ಸತ್ಯ/ನಿಜ/ವಾಸ್ತವ; ನಚ್ಚು=ನಂಬುವುದು/ಮೆಚ್ಚುವುದು/ ತಿಳಿಯುವುದು; ನಚ್ಚಲು ಬೇಡ=ತಿಳಿಯಬೇಡ/ನಂಬದಿರು/ಮೆಚ್ಚದಿರು;

ಮಠದ+ಒಳಗಣ; ಮಠ=ಜಾತಿ/ಮತ/ದೇವರ ಹೆಸರಿನಲ್ಲಿ ಜನರು ಕಟ್ಟಿಕೊಂಡಿರುವ ಸಾಮಾಜಿಕ ಒಕ್ಕೂಟ; ಒಳಗಣ=ಒಳಗಡೆಯಿರುವ/ಒಳಗಿರುವ; ಬೆಕ್ಕು=ಕೊತ್ತಿ/ಒಂದು ಬಗೆಯ ಪ್ರಾಣಿ/ಮನೆಗಳಲ್ಲಿ ಹಾಗೂ ಇನ್ನಿತರ ಜನವಸತಿಯಿರುವ ಕಡೆಗಳಲ್ಲಿ ಬೆಕ್ಕನ್ನು ಸಾಕುಪ್ರಾಣಿಯಾಗಿ ಬೆಳೆಸಿ, ಮುದ್ದಿನಿಂದ ನೋಡಿಕೊಳ್ಳುತ್ತಾರೆ; ಇಲಿ=ಒಂದು ಬಗೆಯ ಪ್ರಾಣಿ/ಮನೆಗಳಲ್ಲಿ ಹಾಗೂ ಜನವಸತಿಯಿರುವ ಕಡೆಗಳಲ್ಲಿ ಬಿಲ/ಮೊಟರೆಯಲ್ಲಿ ನೆಲೆಸಿರುವ ಪ್ರಾಣಿ;

ಕಂಡು=ನೋಡಿ; ಪುಟ+ನೆಗೆದ+ ಅಂತೆ+ಆಯಿತ್ತು; ಪುಟ=ಮೇಲಕ್ಕೆ ಚಿಮ್ಮು/ಹಾರು; ನೆಗೆ=ಜಿಗಿ/ಎಗರು/ಹಾರು;

ಪುಟನೆಗೆ=ಇದ್ದ ಎಡೆಯಿಂದ ಒಂದೇ ಬಾರಿಗೆ ಮೇಲಕ್ಕೆ ಚಿಮ್ಮುವುದು/ಎಗರುವುದು/ಮತ್ತೊಂದರ ಮೇಲೆ ಜಿಗಿದು ಬೀಳುವುದು/ಆಕ್ರಮಣ ಮಾಡುವುದು; ಅಂತೆ=ಹಾಗೆ/ಆ ರೀತಿಯಲ್ಲಿ; ಆಯಿತ್ತು=ನಡೆಯಿತು/ಉಂಟಾಯಿತು/ಜರುಗಿತು;

ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆಯುವುದು= ಇಲಿಯನ್ನು ಕಂಡ ಕೂಡಲೇ ಬೆಕ್ಕು ಅದರ ಮೇಲೆ ಹಾರಿ, ತನ್ನ ಪಂಜ/ಕಾಲಿನ ಉಗುರುಗಳಿಂದ ಅದನ್ನು ಹಿಡಿದುಕೊಂಡು, ಬೇಟೆಯಾಡಿ ಕೊಂದು ತಿನ್ನುತ್ತದೆ. ಬೆಕ್ಕು ತನ್ನ ಹಸಿವನ್ನು ನೀಗಿಸಿಕೊಳ್ಳಲು ಇಲಿಯನ್ನು ಕೊಂದು ತಿನ್ನುವುದು ನಿಸರ್ಗದಲ್ಲಿ ನಡೆಯುವ ಒಂದು ಸಹಜವಾದ ಕ್ರಿಯೆ.

ಮಠದಲ್ಲಿರುವ ಗುರುಗಳು ಸರ್ವಸಂಗ ಪರಿತ್ಯಾಗಿಗಳಾಗಿ ತಮ್ಮ ಮಯ್ ಮನದಲ್ಲಿ ತುಡಿಯುವ ಎಲ್ಲಾ ಬಗೆಯ ಕಾಮನೆಗಳನ್ನು ಹತೋಟಿಯಲ್ಲಿಟ್ಟುಕೊಂಡು ಒಳ್ಳೆಯ ನಡೆನುಡಿಯುಳ್ಳವರಾಗಿರುತ್ತಾರೆ ಎಂಬ ನಂಬಿಕೆಯು ಜನಸಮುದಾಯದಲ್ಲಿದೆ. ಆದುದರಿಂದ 'ಮಠ'ದ ಆವರಣದಲ್ಲಿರುವ ಸಕಲ ಜೀವಿಗಳು ಒಳ್ಳೆಯವೇ ಆಗಿರುತ್ತವೆ ಎಂಬುದು ಜನಮನದ ನಂಬಿಕೆಯಾಗಿದೆ.

ಈ ನಂಬಿಕೆಯನ್ನು ಹುಸಿಯಾಗಿಸುವ ರೀತಿಯಲ್ಲಿ 'ಮಠ'ದೊಳಗಣ ಬೆಕ್ಕು ಇಲಿಯನ್ನು ಕೊಂದು ತಿನ್ನುತ್ತದೆ. ಬೆಕ್ಕು ತನ್ನ ಹುಟ್ಟುಗುಣವನ್ನು ಬಿಡದಂತೆ ಕಪಟತನದ ನಡೆನುಡಿಯುಳ್ಳ ವ್ಯಕ್ತಿಯು ದೇವರಲ್ಲಿ ಒಲವುಳ್ಳವನಂತೆ ನಟಿಸಿದರೂ, ತನ್ನ ಕೆಟ್ಟಗುಣವನ್ನು ಎಂದೆಂದಿಗೂ ಬಿಡುವುದಿಲ್ಲವೆಂಬ ವಾಸ್ತವದ ಸಂಗತಿಯನ್ನು ಈ ರೂಪಕವು ಸೂಚಿಸುತ್ತಿದೆ.

ರೂಪಕ ಎಂದರೆ ಪ್ರಸಂಗವೊಂದರ ಮೂಲಕ ಯಾವುದೇ ಒಂದು ಸಂಗತಿಯನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸುವ ಇಲ್ಲವೇ ಚಿತ್ರಿಸುವ ಶಬ್ದಚಿತ್ರ; ಕಾಣ್+ಆ; ಕಾಣ್=ನೋಡು/ತಿಳಿ; ಕಾಣಾ=ತಿಳಿದು ನೋಡು/ಅರಿತುಕೊಳ್ಳು;

ರಾಮನಾಥ=ಶಿವ/ಈಶ್ವರ/ಜೇಡರ ದಾಸಿಮಯ್ಯನ ಮೆಚ್ಚಿನ ದೇವರ ಹೆಸರು/ಜೇಡರ ದಾಸಿಮಯ್ಯನ ವಚನಗಳಲ್ಲಿ ಕಂಡು ಬರುವ ಅಂಕಿತನಾಮ)



೩೨. ಸತ್ಯದ ನುಡಿ ತೀರ್ಥ
ಭಕ್ತಿಯ ನಡೆ ತೀರ್ಥ
ಮುಕ್ತಿಯ ಪ್ರಸಂಗ ಉಳ್ಳಡೆ ತೀರ್ಥ
ಹರಿವ ನದಿ ಎತ್ತಣಾ ತೀರ್ಥ ರಾಮನಾಥ.

**ದೇಗುಲಗಳ ಬಳಿ ಹರಿಯುತ್ತಿರುವ ನದಿಯ ನೀರು ಇಲ್ಲವೇ ದೇಗುಲದ ಪೂಜಾರಿಯು ಕೊಡುವ ನೀರನ್ನು ಪವಿತ್ರವೆಂದು ನಂಬಿರುವ ಜನರಿಗೆ, ಯಾವುದು ಪವಿತ್ರವೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಸತ್ಯ=ದಿಟ/ನಿಜ/ವಾಸ್ತವ; ನುಡಿ=ಮಾತು; ಸತ್ಯದ ನುಡಿ=ತನ್ನನ್ನು ಒಳಗೊಂಡಂತೆ ಜನಸಮುದಾಯಕ್ಕೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವ ಮಾತುಗಳು;

ತೀರ್ಥ=ಪವಿತ್ರವಾದುದು/ಉತ್ತಮವಾದುದು/ಒಳ್ಳೆಯುದನ್ನು ಮಾಡುವಂತಹುದು; ತೀರ್ಥ=ದೇವರ ಪೂಜೆಯ ನಂತರ, ಪೂಜಾರಿಯು ದೇಗುಲಕ್ಕೆ ಬಂದಿರುವ ಜನಗಳಿಗೆ ನೀಡುವ ನೀರು. ಇದನ್ನು ಕುಡಿಯುವುದರಿಂದ ಜೀವನದಲ್ಲಿ ಒಳಿತಾಗುವುದೆಂಬ ನಂಬಿಕೆಯು ಜನಮನದಲ್ಲಿದೆ; ಭಕ್ತಿ=ದೇವರನ್ನು ಪೂಜಿಸಲು/ಒಲಿಸಿಕೊಳ್ಳಲು ವ್ಯಕ್ತಿಯು ಹೊಂದಿರಬೇಕಾದ ಒಳ್ಳೆಯ ನಡೆನುಡಿ; ನಡೆ=ಆಚರಣೆ/ವರ್ತನೆ; ಭಕ್ತಿಯ ನಡೆ=ತನಗೆ ಒಳಿತನ್ನು ಬಯಸುವಂತೆಯೇ ಇತರರ ಒಳಿತಿಗೂ ನೆರವಾಗುವಂತಹ ಸಾಮಾಜಿಕ ವರ್ತನೆ;

ಮುಕ್ತಿ=ಬಿಡುಗಡೆ/ವಿಮೋಚನೆ/ಹುಟ್ಟು ಬದುಕು ಸಾವಿನ ಸರಪಣಿಯಿಂದ ಜೀವವು ಬಿಡುಗಡೆಯನ್ನು ಪಡೆಯುತ್ತದೆ ಎಂಬ ನಂಬಿಕೆ; ಪ್ರಸಂಗ=ಸನ್ನಿವೇಶ/ಸಂಗತಿ; ಮುಕ್ತಿಯ ಪ್ರಸಂಗ=ಮಯ್ ಮನದಲ್ಲಿ ತುಡಿಯುವಂತಹ ಕೆಟ್ಟ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು/ಹೋಗಲಾಡಿಸಿಕೊಂಡು, ಅವುಗಳಿಂದ ಬಿಡುಗಡೆಯನ್ನು ಹೊಂದಿ, ಒಳ್ಳೆಯ ರೀತಿಯಲ್ಲಿ ಬದುಕಲು

ಪ್ರೇರಣೆಯನ್ನು ನೀಡುವಂತಹ ಸಂಗತಿ; ಉಳ್ಳಡೆ=ಇದ್ದರೆ/ದೊರಕಿದರೆ/ಪಡೆದರೆ/ಹೊಂದಿದರೆ;

ಹರಿವ ನದಿ=ಹರಿಯುತ್ತಿರುವ ನದಿ/ತೊರೆಗಳ ನೀರು; ಎತ್ತಣ+ಆ; ಎತ್ತಣ=ಯಾವ ಕಡೆ/ಯಾವ ರೀತಿ/ಯಾವ ಬಗೆ;

ಹರಿವ ನದಿ ಎತ್ತಣಾ ತೀರ್ಥ=ಯಾವ ರೀತಿಯಿಂದ ಆಲೋಚಿದರು ನದಿಯ ನೀರು, ಅದು ಕೇವಲ ನೀರೇ ಹೊರತು ಮತ್ತೇನು ಅಲ್ಲ; ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ ನಡೆನುಡಿಗಳೇ 'ತೀರ್ಥ' ಅಂದರೆ ಒಳ್ಳೆಯದು ಎಂಬ ಇಂಗಿತವನ್ನು ಈ ನುಡಿಗಳು ಸೂಚಿಸುತ್ತವೆ.)



೩೩. ಹರಿದ ಗೋಣಿಯಲೊಬ್ಬ
ಕಳವೆಯ ತುಂಬಿದ
ಇರುಳೆಲ್ಲಾ ನಡೆದನಾ
ಸುಂಕಕಂಜಿ

ಕಳವೆಯೆಲ್ಲಾ ಹೋಗಿ
ಬರಿಗೋಣಿ ಉಳಿಯಿತ್ತು
ಅಳಿಮನದವನ ಭಕ್ತಿ
ಇಂತಾಯಿತ್ತು ರಾಮನಾಥ.

ಈ ವಚನದಲ್ಲಿ 'ಅಳಿಮನದವನು' ಎಂಬ ಪದವನ್ನು "ಮನದಲ್ಲಿ ಕೆಟ್ಟ ಉದ್ದೇಶವನ್ನುಳ್ಳ ವ್ಯಕ್ತಿ ಇಲ್ಲವೇ ಚಂಚಲಮನದ ವ್ಯಕ್ತಿ" ಎಂಬ ಎರಡು ಬಗೆಯ ತಿರುಳಿನ ನೆಲೆಗಳಲ್ಲಿ ಗ್ರಹಿಸಿಕೊಂಡಾಗ, ಎರಡು ರೀತಿಗಳಲ್ಲಿ ವಚನದ ಇಂಗಿತವನ್ನು ಮನಗಾಣಬಹುದು.

೧) ಮನದಲ್ಲಿ ಕೆಟ್ಟ ಉದ್ದೇಶವನ್ನು ಹೊಂದಿ, ಹೊರನೋಟಕ್ಕೆ ದೇವರಲ್ಲಿ ಒಲವುಳ್ಳವನಂತೆ ನಟಿಸುತ್ತಾ, ಜನರನ್ನು ಮತ್ತು ಸಮಾಜವನ್ನು ವಂಚಿಸುವ ವ್ಯಕ್ತಿಯು ಕಟ್ಟಕಡೆಗೆ ಜೀವನದಲ್ಲಿ ಏನನ್ನೂ ಗಳಿಸಲಾಗದೆ, ತನ್ನಲ್ಲಿರುವುದನ್ನೂ ಕಳೆದುಕೊಳ್ಳುತ್ತಾನೆ.

೨) ಇತ್ತ ಒಳಿತನ್ನು ಮಾಡಲಾಗದೆ, ಅತ್ತ ಕೆಟ್ಟದ್ದನ್ನು ಬಿಡಲಾಗದೆ, ಅತ್ತಿತ್ತ ತುಯ್ದಾಡುವ ಚಂಚಲ ಮನಸ್ಸಿನ ವ್ಯಕ್ತಿಯು ಜೀವನದಲ್ಲಿ ಏನನ್ನೂ ಪಡೆಯಲಾಗದೆ, ತನಗೆ ತಾನೆ ಕೇಡನ್ನು ಬಗೆದುಕೊಳ್ಳುತ್ತಾನೆ/ಹಾನಿಯನ್ನು ಮಾಡಿಕೊಳ್ಳುತ್ತಾನೆ.

(ಹರಿದ=ಅಲ್ಲಲ್ಲಿ ತೂತು ಬಿದ್ದಿರುವ/ಕಿತ್ತುಹೋಗಿರುವ; ಗೋಣಿಯಲ್+ಒಬ್ಬ; ಗೋಣಿ=ಸೆಣಬಿನ ನೂಲು ಇಲ್ಲವೇ ಇನ್ನಿತರ ದಾರದ ಎಳೆಗಳನ್ನು ಹೆಣೆದು ಮಾಡಿರುವ ಚೀಲ; ಗೋಣಿಯಲ್=ಚೀಲದಲ್ಲಿ; ಒಬ್ಬ=ಒಬ್ಬ ವ್ಯಕ್ತಿಯು;

ಕಳವೆ=ಬತ್ತ/ನೆಲ್ಲು; ತುಂಬಿದ=ಚೀಲದೊಳಗೆ ತುಸುವು ಎಡೆಯಿಲ್ಲದಂತೆ ಬತ್ತವನ್ನು ಹಾಕಿದ;

ಇರುಳ್+ಎಲ್ಲಾ; ಇರುಳು=ರಾತ್ರಿ; ನಡೆದನ್+ಆ; ಇರುಳೆಲ್ಲಾ ನಡೆದನ್=ಒಂದು ಊರಿನಿಂದ ಇನ್ನೊಂದು ಊರಿಗೆ ಇಡೀ ರಾತ್ರಿಯೆಲ್ಲಾ ಪಯಣಿಸಿದನು; ಆ=ಕೊಡಬೇಕಾದ; ಸುಂಕಕೆ+ಅಂಜಿ; ಸುಂಕ=ಸರಕುಗಳ/ವಸ್ತುಗಳ ಸಾಗಾಣಿಕೆಗಾಗಿ ರಾಜನ ಬೊಕ್ಕಸಕ್ಕೆ ತೆರಬೇಕಾದ ಕಂದಾಯದ ಹಣ/ತೆರಿಗೆ; ಅಂಜು=ಹೆದರು/ದಿಗಿಲುಗೊಂಡು/ಹಿಂಜರಿದು; ಸುಂಕಕಂಜಿ=ಸುಂಕವನ್ನು ಕೊಡಬೇಕಲ್ಲ ಎಂಬ ಸಂಕಟದಿಂದ/ಸುಂಕವನ್ನು ವಸೂಲು ಮಾಡುವ ಆಡಳಿತಗಾರರ ಕಯ್ಗೆ ಸಿಕ್ಕಿಬಿದ್ದರೆ, ಸುಂಕದ ಹಣವನ್ನು ಕಕ್ಕಬೇಕಾಗುತ್ತದೆಯಲ್ಲ ಎಂಬ ಹೆದರಿಕೆಯಿಂದ;

ಕಳವೆ+ಎಲ್ಲಾ; ಕಳವೆಯೆಲ್ಲಾ ಹೋಗಿ=ತೂತಾಗಿದ್ದ/ಅಲ್ಲಲ್ಲಿ ಹರಿದುಹೋಗಿದ್ದ ಚೀಲಕ್ಕೆ ತುಂಬಿದ್ದ ಬತ್ತವೆಲ್ಲವೂ ದಾರಿಯುದ್ದಕ್ಕೂ ಚೆಲ್ಲಿಹೋಗಿ; ಬರಿ=ಬರಿದು/ಏನೂ ಇಲ್ಲದಿರುವುದು; ಬರಿಗೋಣಿ ಉಳಿಯಿತ್ತು=ಚೀಲವು ಬರಿದಾಗಿತ್ತು/ಚೀಲದಲ್ಲಿ ಬತ್ತವು ಇರಲಿಲ್ಲ;

ಅಳಿ=ಕೆಡು/ನಾಶವಾಗು/ಸಣ್ಣತನ/ಹೀನತನ; ಮನ=ಮನಸ್ಸು; ಭಕ್ತಿ=ದೇವರನ್ನು ಪೂಜಿಸಲು/ಒಲಿಸಿಕೊಳ್ಳಲು ವ್ಯಕ್ತಿಯು ಹೊಂದಿರಬೇಕಾದ ಒಳ್ಳೆಯ ನಡೆನುಡಿ;

ಅಳಿಮನದವನ ಭಕ್ತಿ=ಮನದೊಳಗೆ ಕೆಟ್ಟ ಒಳಮಿಡಿತಗಳಿಂದ ಕೂಡಿದ ಇಲ್ಲವೇ ಚಂಚಲವಾದ ಮನಸ್ಸಿನ ವ್ಯಕ್ತಿಯು ಮಾಡುವ ತೋರಿಕೆಯ ಪೂಜೆ/ಜನಗಳನ್ನು ಮೆಚ್ಚಿಸಲೆಂದು ಮಾಡುವ ಆಚರಣೆ; ಇಂತು+ಆಯಿತ್ತು; ಇಂತು=ಈ ರೀತಿ/ಈ ಬಗೆಯಲ್ಲಿ; ಆಯಿತ್ತು=ಉಂಟಾಯಿತು/ಕಂಡುಬಂದಿತು;

ಕಾನೂನಿಗೆ ಅನುಗುಣವಾಗಿ ಕಟ್ಟಬೇಕಾಗಿದ್ದ ಸುಂಕವನ್ನು ತಪ್ಪಿಸಲು ಹೋಗಿ, ತನ್ನಲ್ಲಿದ್ದ ಬತ್ತವೆಲ್ಲವನ್ನೂ ಕಳೆದುಕೊಂಡ ರೂಪಕವು ಇತರರನ್ನು ಇಲ್ಲವೇ ಸಮಾಜವನ್ನು ವಂಚಿಸಲು ಪ್ರಯತ್ನಿಸುವ ವ್ಯಕ್ತಿಯು ಕಟ್ಟಕಡೆಯಲ್ಲಿ ತನಗೆ ತಾನೇ ಕೇಡುಬಗೆದುಕೊಂಡು ಹಾಳಾಗುತ್ತಾನೆ ಎಂಬ ಇಂಗಿತವನ್ನು ಸೂಚಿಸುತ್ತದೆ)



೩೪. ಹಸಿವೆಂಬ ಹೆಬ್ಬಾವು
ಬಸುರ ಬಂದು ಹಿಡಿದಡೆ
ವಿಷವೇರಿತ್ತಯ್ಯಾ ಆಪಾದಮಸ್ತಕಕ್ಕೆ

ಹಸಿವಿಗನ್ನವನಿಕ್ಕಿ
ವಿಷವನಿಳುಹಬಲ್ಲಡೆ
ವಸುಧೆಯೊಳಗೆ ಆತನೆ ಗಾರುಡಿಗ ಕಾಣಾ ರಾಮನಾಥ.

**ಹೊಟ್ಟೆಯ ಹಸಿವನ್ನು ನೀಗಿಸಿಕೊಳ್ಳಲು ಬೇಕಾದ ಉಣಿಸು ತಿನಸುಗಳು ದೊರೆಯದೆ, ದಿನನಿತ್ಯವೂ ಹಸಿವಿನ ಬೇಗೆಯಲ್ಲಿ ಬೇಯುತ್ತಿರುವ ಕೋಟಿಗಟ್ಟಲೆ ಜನರ ಹಸಿವಿನ ಸಂಕಟವನ್ನು ತಣಿಸುವ ಕೆಲಸವು ಜಗತ್ತಿನಲ್ಲಿ ಬಹು ದೊಡ್ಡ ಸವಾಲಿನದು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಹಸಿವು+ಎಂಬ; ಹಸಿವು=ಉಂಡು ತಿಂದು ಕುಡಿದು ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕೆಂಬ ಬಯಕೆ/ಆಸೆ. ಜೀವಿಯು ಉಳಿದು ಬೆಳೆದು ಬಾಳುವುದಕ್ಕೆ ಪ್ರತಿನಿತ್ಯವೂ ಹಸಿವನ್ನು ತಣಿಸಿಕೊಳ್ಳುವುದು ಅತ್ಯಗತ್ಯ; ಎಂಬ=ಎನ್ನುವ; ಪಿರಿದಾದ+ಪಾವು=ಪೆರ‍್ಬಾವು>ಪೆಬ್ಬಾವು>ಹೆಬ್ಬಾವು; ಪಿರಿದು=ದೊಡ್ಡದು; ಪಿರಿದಾದ=ದೊಡ್ಡಗಾತ್ರದ; ಪಾವು=ಹಾವು/ಸರ್ಪ; ಹೆಬ್ಬಾವು=ದೊಡ್ಡಗಾತ್ರದ ಹಾವು; ಬಸುರು=ಹೊಟ್ಟೆ/ಉದರ/ಒಡಲು;

ಹಸಿವೆಂಬ ಹೆಬ್ಬಾವು ಬಸುರ ಬಂದು ಹಿಡಿದಡೆ=ಬಡತನ ಇಲ್ಲವೇ ಇನ್ನಿತರ ಕಾರಣಗಳಿಂದ ಉಣಿಸು ತಿನಸುಗಳು ದೊರೆಯದೆ ಹೊಟ್ಟೆಯ ಹಸಿವಿನ ಅತಿಯಾದ ಸಂಕಟದಿಂದ ನರಳುವುದು/ಪರಿತಪಿಸುವುದು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ರೂಪಕ; ವಿಷ+ಏರಿತ್ತು+ಅಯ್ಯಾ; ವಿಷ=ನಂಜು/ಗರಳ; ಏರು=ಹರಡು/ಹತ್ತು/ವ್ಯಾಪಿಸು; ಅಯ್ಯಾ=ಇತರರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ; ಪಾದ=ಕಾಲು/ಅಡಿ; ಮಸ್ತಕ=ತಲೆ/ಶಿರ; ಆಪಾದ ಮಸ್ತಕಕ್ಕೆ=ಅಡಿಯಿಂದ ಹಿಡಿದು ಮುಡಿಯವರೆಗೆ/ಕಾಲಿನಿಂದ ಹಿಡಿದು ತಲೆಯತನಕ;

ಹಸಿವು+ಇಗೆ+ಅನ್ನ+ಅನ್+ಇಕ್ಕಿ; ಅನ್ನ=ಆಹಾರವಾಗಿ ತಿನ್ನುವ ಉಣ್ಣುವ ಎಲ್ಲಾ ಬಗೆಯ ಉಣಿಸು ತಿನಸುಗಳು; ಅನ್=ಅನ್ನು; ಇಕ್ಕಿ=ನೀಡಿ/ಹಾಕಿ/ಕೊಟ್ಟು; ವಿಷ+ಅನ್+ಇಳುಹ+ಬಲ್ಲಡೆ; ಇಳುಹು=ನೀಗಿಸುವುದು/ನಿವಾರಿಸುವುದು/ಹೋಗಲಾಡಿಸುವುದು;

ಬಲ್ಲ=ತಿಳಿದ/ಅರಿತ; ಬಲ್ಲಡೆ=ತಿಳಿದಿದ್ದರೆ/ಅರಿತಿದ್ದರೆ/ಕಸುವುಳ್ಳವನಾದರೆ/ಶಕ್ತನಾದರೆ; ವಿಷವನಿಳುಹಬಲ್ಲಡೆ=ಜನಸಮುದಾಯದ ಹಸಿವಿನ ಸಂಕಟವನ್ನು ನೀಗಿಸಬಲ್ಲವನಾದರೆ/ಹಸಿವನ್ನು ತಣಿಸಬಲ್ಲವನಾದರೆ; ವಸುಧೆ+ಒಳಗೆ; ವಸುಧೆ=ಜಗತ್ತು/ಪ್ರಪಂಚ/ಲೋಕ; ಒಳಗೆ=ಅಲ್ಲಿ; ಆತನೆ=ಅವನೆ/ಅಂತಹ ವ್ಯಕ್ತಿಯೇ;

ಗಾರುಡಿಗ=ಹಾವು ಕಚ್ಚಿ, ಮಯ್ಗೆಲ್ಲಾ ನಂಜು ಏರಿ, ಸಾಯುತ್ತಿರುವ ವ್ಯಕ್ತಿಯನ್ನು ಗುಣಪಡಿಸಿ, ಬದುಕುಳಿಯುವಂತೆ ಮಾಡುವವ/ಮಂತ್ರವಾದಿ/ಮಾಟಮಂತ್ರದಿಂದ ಏನನ್ನೂ ಬೇಕಾದರೂ ಮಾಡಬಲ್ಲ ಕಸುವುಳ್ಳವನು ಎಂಬ ನಂಬಿಕೆಯು ಜನಮನದಲ್ಲಿದೆ; ಕಾಣ್+ಆ; ಕಾಣ್=ನೋಡು; ಕಾಣಾ=ತಿಳಿದು ನೋಡು).



# ಡಕ್ಕೆಯ ಬೊಮ್ಮಣ್ಣ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆ ಶತಮಾನ |
| ಕಸುಬು | : | ಡಕ್ಕೆಯನ್ನು ಬಾರಿಸುವುದು (ಡಕ್ಕೆ=ತಮಟೆ/ತೊಗಲಿನಿಂದ ಮಾಡಿರುವ ಒಂದು ಬಗೆಯ ವಾದ್ಯ/ಚರ್ಮ ವಾದ್ಯ. ಊರ ಬೀದಿಗಳಲ್ಲಿ ದೇವರ ಮೆರವಣಿಗೆಯನ್ನು ಮಾಡುವಾಗ; ಸಾವನ್ನಪ್ಪಿದ ವ್ಯಕ್ತಿಯ ಹೆಣವನ್ನು ಹೊತ್ತು ಮಸಣಕ್ಕೆ ಸಾಗಿಸುವಾಗ; ಊರಿನ ಜನರೆಲ್ಲರಿಗೂ ಸುದ್ದಿಯೊಂದನ್ನು ತಿಳಿಸುವಾಗ ತಮಟೆಯನ್ನು ಬಾರಿಸಲಾಗುತ್ತಿತ್ತು.) |
| ದೊರೆತಿರುವ ವಚನಗಳು | : | ೯೦ |
| ವಚನಗಳ ಅಂಕಿತ ನಾಮ | : | ಕಾಲಾಂತಕ ಭೀಮೇಶ್ವರಲಿಂಗ |

೩೫. ಕವಿಯ ಹುಗತೆ
ಗಮಕಿಯ ಸಂಚ
ವಾದಿಯ ಚೊಕ್ಕೆಹ
ವಾಗ್ಮಿಯ ಚೇತನ
ಇಂತೀ ಚತುಷ್ಟಯದಲ್ಲಿ
ಯುಕ್ತಿವಂತನಾದಡೇನು

ಭಕ್ತಿಯನರಿಯಬೇಕು
ಸತ್ಯದಲ್ಲಿ ನಡೆಯಬೇಕು
ವಿರಕ್ತಿಯಲ್ಲಿ ವಿಚಾರಿಸಿ ನಿಲ್ಲಬೇಕು

ಈ ಗುಣ ಡಕ್ಕೆಯ ಬೊಮ್ಮನ ಭಕ್ತಿ
ಕಾಲಾಂತಕ ಭೀಮೇಶ್ವರಲಿಂಗವನರಿವವನ ಸದ್ಭಕ್ತಿಯುಕ್ತಿ.

ಓದುಗರಿಗೆ ಮತ್ತು ಕೇಳುಗರಿಗೆ ಅರಿವು, ಒಲವು, ಆನಂದವನ್ನು ಉಂಟುಮಾಡುವ ಉದ್ದೇಶದಿಂದ ವ್ಯಕ್ತಿಯು ಬಹು ನಿಪುಣತೆಯಿಂದ ನುಡಿಯನ್ನು ಬಳಸುತ್ತ ಕಟ್ಟುವ ಕವಿತೆ, ಹಾಡುವ ಗಮಕ, ಮಾಡುವ ವಾದ, ಆಡುವ ಮನೋಹರವಾದ ಮಾತುಗಳಿಗಿಂತ ನಿಜ ಜೀವನದಲ್ಲಿ ಆತನು ಒಳ್ಳೆಯ ನಡೆನುಡಿಗಳಿಂದ ಬಾಳಬೇಕು. ಏಕೆಂದರೆ ಎಲ್ಲ ಬಗೆಯ ಸಾಹಿತ್ಯ, ಸಂಗೀತ ಮತ್ತು ಕಲೆಗಳಿಗಿಂತಲೂ ವ್ಯಕ್ತಿಯ ಬದುಕು ದೊಡ್ಡದು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

'ದೊಡ್ಡ ಬದುಕು' ಎಂದರೆ ವ್ಯಕ್ತಿಯು ತನಗೆ ಒಳಿತನ್ನು ಬಯಸುವಂತೆಯೇ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳಿಂದ ಕೂಡಿ ಬಾಳುವುದು.

(ಕವಿ=ಕಾವ್ಯವನ್ನು ಕಟ್ಟುವವನು/ರಚಿಸುವವನು/ಬರೆಯುವವನು/ಕಬ್ಬಿಗ; ಹುಗತೆ=ಪ್ರವೇಶ/ಒಳಹೋಗುವಿಕೆ/ಒಳಸೇರುವಿಕೆ;

ಕವಿಯ ಹುಗತೆ=ಕವಿಯು ಕಾವ್ಯವನ್ನು ಕಟ್ಟುವ/ರಚಿಸುವ ಬಗೆ. ಕವಿಯು ತನ್ನ ಕಣ್ಣ ಮುಂದಿನ ಲೋಕದ ವಾಸ್ತವ ಸಂಗತಿಗಳನ್ನು ಮತ್ತು ತನ್ನ ಮನದಲ್ಲಿ ಮೂಡುವ ಕಲ್ಪನೆ, ಚಿಂತನೆ, ಆಲೋಚನೆಗಳನ್ನು ಪರಸ್ಪರ ಹೆಣೆದು, ನುಡಿ ಸಾಮಗ್ರಿಗಳಾದ ಅಕ್ಕರ–ಪದ–ವಾಕ್ಯ–ತಿರುಳನ್ನು ಕಲಾತ್ಮಕವಾದ ರೀತಿಯಲ್ಲಿ ಹೊಂದಿಸಿ ಕಾವ್ಯವನ್ನು ರಚಿಸುತ್ತಾನೆ. ಆದುದರಿಂದಲೇ ಕಾವ್ಯದಲ್ಲಿ ಲೋಕಸತ್ಯ ಮತ್ತು ಕಾವ್ಯಸತ್ಯಗಳು ಜತೆಗೂಡಿ ಓದುಗರ/ಕೇಳುಗರ ಮನಕ್ಕೆ ಮುದವನ್ನು ನೀಡುತ್ತವೆ;

ಗಮಕ=ಕಾವ್ಯ ಪ್ರಸಂಗಗಳನ್ನು ಆಲಿಸುತ್ತಿರುವ/ಕೇಳುತ್ತಿರುವ ವ್ಯಕ್ತಿಗಳ ಮನದಲ್ಲಿ ಮತ್ತೊಮ್ಮೆ ಅವು ಚಿತ್ರಣಗೊಳ್ಳುವಂತೆ ಇಂಪಾದ ದನಿಯಿಂದ ರಾಗವಾಗಿ ಕಾವ್ಯವನ್ನು ಹಾಡುವ ಕಲೆ; ಕಾವ್ಯ ಪ್ರಸಂಗಗಳಲ್ಲಿ ನವರಸಗಳು ಅಡಕಗೊಂಡಿರುತ್ತವೆ; ನವ=ಒಂಬತ್ತು; ರಸ=ಕಾವ್ಯವನ್ನು ಓದುವಾಗ/ಕೇಳುವಾಗ ವ್ಯಕ್ತಿಯ ಮನದಲ್ಲಿ ಆಯಾಯ ಪ್ರಸಂಗಗಳಿಗೆ ತಕ್ಕಂತೆ ಮೂಡುವಂತಹ ಒಳಮಿಡಿತಗಳು;

ನವರಸಗಳು="ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ' ಎಂಬ ಒಂಬತ್ತು ಬಗೆಯ ರಸಗಳು; ಗಮಕಿ=ಕಾವ್ಯವನ್ನು ರಾಗವಾಗಿ ಹಾಡುವವನು/ ಕಾವ್ಯ ಪ್ರಸಂಗಗಳಿಗೆ ತಕ್ಕಂತೆ ತನ್ನ ಕೊರಳಿಂದ ಹೊರಹೊಮ್ಮುವ ದನಿಯಲ್ಲಿ ಏರಿಳಿತಗಳನ್ನು ಮಾಡುತ್ತಾ, ನವರಸಗಳು ಮತ್ತೆ ಕೇಳುಗರ ಮನದಲ್ಲಿ ಮೂಡುವಂತೆ ಕಾವ್ಯವನ್ನು ಹಾಡುವವನು; ಸಂಚು=ನಿಪುಣತೆ/ಕುಶಲ ಕಲೆ/ರೀತಿ/ಕ್ರಮ;

ಗಮಕಿಯ ಸಂಚ=ಕೇಳುಗರ ಕಣ್ಣಿಗೆ ಕಟ್ಟುವಂತೆ ಅಂದರೆ ಮನದಲ್ಲಿ ಮತ್ತೊಮ್ಮೆ ಮೂಡುವಂತೆ ಅತ್ಯಂತ ಕಲಾತ್ಮಕವಾದ ರೀತಿಯಲ್ಲಿ ಕಾವ್ಯವನ್ನು ಹಾಡುವ ನಿಪುಣತೆ/ಕುಶಲತೆ;

ವಾದ=ಇಬ್ಬರು ಇಲ್ಲವೇ ಅನೇಕರ ನಡುವೆ ಯಾವುದೇ ಸಂಗತಿಯನ್ನು ಕುರಿತು ಮಾತಿನ ಮೂಲಕ ನಡೆಯುವ ಚರ್ಚೆ/ಸಂಗತಿಯೊಂದರ ಸರಿ-ತಪ್ಪುಗಳನ್ನು ಕುರಿತು ಮಾತನಾಡುವಾಗ ತಾವು ಹೇಳುತ್ತಿರುವುದೇ ಸರಿಯೆಂದು ಪ್ರತಿಪಾದಿಸುವುದು; ವಾದಿ=ತಾನು ಹೇಳುತ್ತಿರುವ ಸಂಗತಿಯೇ ಸತ್ಯವೆಂದು ಪಟ್ಟು ಹಿಡಿದು ಹೇಳುವವನು/ನಿರೂಪಿಸುವವನು; ಚೊಕ್ಕೆಹ=ಚತುರತೆ/ಯುಕ್ತಿ/ಉಪಾಯ/ಜಾಣತನ;

ವಾದಿಯ ಚೊಕ್ಕೆಹ=ವಾದ/ಚರ್ಚೆ/ತರ್ಕದಲ್ಲಿ ತೊಡಗಿದಾಗ ಎದುರಾಳಿಯು ತಕ್ಕ ಉತ್ತರಗಳನ್ನು ಕೊಡಲಾಗದೆ ಸೋಲುವಂತೆ ಮಾಡುವ ಬಗೆಯಲ್ಲಿ ವ್ಯಕ್ತಿಯು ತನ್ನ ವಿಚಾರಗಳನ್ನು ಮಂಡಿಸುವ ಕುಶಲತೆ/ಜಾಣತನ/ಎಚ್ಚರ;

ವಾಗ್ಮಿ=ಮಾತುಗಾರ/ಮಾತಿನ ಮಲ್ಲ/ಯಾವುದೇ ಒಂದು ಸಂಗತಿಯನ್ನಾಗಲಿ ಇತರರಿಗೆ ಹೇಳುವಾಗ, ಅದನ್ನು ಕೇಳುತ್ತಿರುವ ವ್ಯಕ್ತಿಗಳ ಮನವನ್ನು ತನ್ನತ್ತ ಸೆಳೆದುಕೊಂಡು, ಅವರು ಮೆಚ್ಚಿ ತಲೆದೂಗುವಂತೆ ಸೊಗಸಾಗಿ ಮಾತನಾಡುವವನು; ಚೇತನ=ಚಟುವಟಿಕೆ/ಲವಲವಿಕೆ/ತಿಳುವಳಿಕೆಯ ಕಸುವು/ಯಾವ ಸಂಗತಿಯನ್ನು ಹೇಗೆ ಹೇಳಬೇಕು ಎಂಬ ಅರಿವು ಮತ್ತು ಎಚ್ಚರ;

ವಾಗ್ಮಿಯ ಚೇತನ=ಆಡುವ ಮಾತುಗಳ ಮೂಲಕವೇ ಕೇಳುವವರಿಗೆ ಮೋಡಿಯನ್ನು ಮಾಡುವ/ಕೇಳುಗರು ತಮ್ಮ ಮಯ್ ಮನವನ್ನು ಮರೆತು ತಲ್ಲೀನರಾಗುವಂತೆ ಮಾಡುವ ಕಲೆ/ಕುಶಲತೆ/ಚತುರತೆ;

ಇಂತು+ಈ; ಇಂತು=ಹೀಗೆ/ಈ ಪ್ರಕಾರವಾಗಿ/ಈ ರೀತಿಯಲ್ಲಿ; ಚತುಷ್ಟಯ+ಅಲ್ಲಿ; ಚತುಷ್ಟಯ=ನಾಲ್ಕರ ಗುಂಪು/ನಾಲ್ಕು ಸಂಗತಿಗಳು; ಯುಕ್ತಿವಂತನ್+ಆದಡೆ+ಏನು; ಯುಕ್ತಿ=ತಾನು ಉದ್ದೇಶಪಟ್ಟಿರುವುದನ್ನು ಈಡೇರಿಸಿಕೊಳ್ಳಲೆಂದು ಮಾಡುವ ತಂತ್ರ/ಉಪಾಯ/ಯೋಜನೆ/ಚತುರತೆ/ಕುಶಲತೆ/ನಿಪುಣತೆ; ಯುಕ್ತಿವಂತ=ತಂತ್ರ/ಉಪಾಯಗಳ ಮೂಲಕವೇ ತನ್ನ ಕೆಲಸವನ್ನು ಆಗುಮಾಡಿಕೊಳ್ಳುವ ನಿಪುಣ/ಚತುರ; ಆದಡೆ=ಆದರೆ/ಆಗಿದ್ದರೆ; ಏನು=ಯಾವುದು/ಉಂಟಾದ ಪ್ರಯೋಜನ/ಪರಿಣಾಮ ಯಾವುದು;

ಇಂತೀ ಚತುಷ್ಟಯದಲ್ಲಿ ಯುಕ್ತಿವಂತನಾದಡೇನು=ನುಡಿಯನ್ನು ಕಲಾತ್ಮಕವಾಗಿ/ ಸೊಗಸಾಗಿ/ಮನೋಹರವಾಗಿ ಬಳಸುವ ಕಲೆಗಳಲ್ಲಿ ಪರಿಣಿತನಾಗುವುದರಿಂದ ಸಹಮಾನವರಿಗಾಗಲಿ ಇಲ್ಲವೇ ಸಮಾಜಕ್ಕಾಗಲಿ ಯಾವುದೇ ಬಗೆಯಲ್ಲೂ ಪ್ರಯೋಜನವಿಲ್ಲ. ಏಕೆಂದರೆ ಆಡುವ ಮಾತಿಗಿಂತ ನುಡಿಗಿಂತ ಮಿಗಿಲಾಗಿ ವ್ಯಕ್ತಿಯು ಮಾಡುವ ಕೆಲಸ ಒಳ್ಳೆಯ ರೀತಿಯಲ್ಲಿರಬೇಕು;

ಭಕ್ತಿ+ಅನ್+ಅರಿಯಬೇಕು; ಭಕ್ತಿ=ದೇವರನ್ನು ಪೂಜಿಸಲು/ಒಲಿಸಿಕೊಳ್ಳಲು ವ್ಯಕ್ತಿಯು ಹೊಂದಿರಬೇಕಾದ ಒಳ್ಳೆಯ ನಡೆನುಡಿ; ಅನ್=ಅನ್ನು; ಅರಿ=ತಿಳಿ/ಕಲಿ; ಬೇಕು=ಅಗತ್ಯ/ಅವಶ್ಯ; ಅರಿಯಬೇಕು=ತಿಳಿದುಕೊಳ್ಳಬೇಕು/ ಗೊತ್ತು ಮಾಡಿಕೊಳ್ಳಬೇಕು/ಮನದಟ್ಟು ಮಾಡಿಕೊಳ್ಳಬೇಕು; ಭಕ್ತಿಯನರಿಯಬೇಕು=ಒಳ್ಳೆಯ ನಡೆನುಡಿಗಳಿಂದ ವ್ಯಕ್ತಿಯು ತನ್ನ ಬದುಕನ್ನು ರೂಪಿಸಿಕೊಳ್ಳಬೇಕು;

ಸತ್ಯ+ಅಲ್ಲಿ; ಸತ್ಯ=ದಿಟ/ನಿಜ/ವಾಸ್ತವ; ನಡೆ=ಆಚರಣೆ/ವರ್ತನೆ/ನಡವಳಿಕೆ; ಸತ್ಯದಲ್ಲಿ ನಡೆಯಬೇಕು=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಕೆಲಸದಲ್ಲಿ ತೊಡಗಬೇಕು; ವಿರಕ್ತಿ+ಅಲ್ಲಿ; ವಿರಕ್ತಿ=ವ್ಯಕ್ತಿಯು ತನ್ನ ಮಯ್ ಮನದಲ್ಲಿ ತುಡಿಯುವಂತಹ ಒಳಮಿಡಿತಗಳಲ್ಲಿ ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಒಳ್ಳೆಯದನ್ನು ತನ್ನ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡಿರುವ ನಿಲುವು; ವಿಚಾರಿಸಿ=ಸರಿ-ತಪ್ಪುಗಳನ್ನು ಒರೆಹಚ್ಚಿ ನೋಡಿ/ ಒಳ್ಳೆಯದು ಯಾವುದು-ಕೆಟ್ಟದ್ದು ಯಾವುದು ಎಂಬುದನ್ನು ತಿಳಿದುಕೊಂಡು; ನಿಲ್ಲು=ಇರು/ ತಂಗು/ಜೀವಿಸು/ಬದುಕು; ನಿಲ್ಲಬೇಕು=ಬಾಳಬೇಕು/ಜೀವನವನ್ನು ರೂಪಿಸಿಕೊಳ್ಳಬೇಕು;

ವಿರಕ್ತಿಯಲ್ಲಿ ವಿಚಾರಿಸಿ ನಿಲ್ಲಬೇಕು=ವ್ಯಕ್ತಿಯು ತನ್ನ ಮಯ್ ಮನವನ್ನು ತಾನು ಹತೋಟಿಯಲ್ಲಿಟ್ಟುಕೊಂಡು ಒಳಿತಿನ ನಡೆನುಡಿಗಳಿಂದ ಕೂಡಿ ಬಾಳಬೇಕು;

ಗುಣ=ನಡತೆ/ನಡವಳಿಕೆ/ಸಜ್ಜನಿಕೆ/ವರ್ತನೆ; ಈ ಗುಣ=ಇಂತಹ ಒಳ್ಳೆಯ ನಡವಳಿಕೆ/ಈ ಬಗೆಯ ಸಜ್ಜನಿಕೆ; ಈ ಗುಣ ಡಕ್ಕೆಯ ಬೊಮ್ಮನ

ಭಕ್ತಿ=ವಚನಕಾರನಾದ ಡಕ್ಕೆಯ ಬೊಮ್ಮಣ್ಣನು ಈ ಬಗೆಯ ಒಳ್ಳೆಯ ನಡೆನುಡಿಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡು ಬಾಳುತ್ತಿದ್ದನು;

ಕಾಲ+ಅಂತಕ; ಕಾಲ=ಸಮಯ/ವೇಳೆ/ಸಾವಿನ ದೇವತೆಯಾದ ಯಮ; ಹುಟ್ಟಿದ ಸಕಲಜೀವಿಗಳ ಪ್ರಾಣವನ್ನು/ಉಸಿರನ್ನು ಒಂದಲ್ಲ ಒಂದು ದಿನ ಕೊಂಡೊಯ್ಯುವ ದೇವತೆಯಾದ ಯಮ; ನೀರು–ಬೆಂಕಿ–ನೆಲ–ಮರಗಿಡ–ಹಣ–ವಿದ್ಯೆ ಎಲ್ಲಕ್ಕೂ ಒಬ್ಬೊಬ್ಬ ದೇವತೆಯನ್ನು ಕನ್ನಡ ಜನಸಮುದಾಯವು ಕಲ್ಪಿಸಿಕೊಂಡಿರುವಂತೆಯೇ ಸಾವಿಗೂ ಯಮನೆಂಬ ಹೆಸರಿನ ದೇವತೆಯನ್ನು ಕಲ್ಪಿಸಿಕೊಂಡಿದೆ;

ಅಂತಕ=ಕೊಂದವನು/ವಿನಾಶಕ; ಕಾಲಾಂತಕ=ಈಶ್ವರ/ಯಮನನ್ನು ಕೊಂದವನು; ಭೀಮೇಶ್ವರಲಿಂಗ+ಅನ್+ಅರಿವವನ; ಭೀಮೇಶ್ವರಲಿಂಗ=ಈಶ್ವರ/ಶಿವ/ದೇವರು; ಕಾಲಾಂತಕ ಭೀಮೇಶ್ವರಲಿಂಗ=ಡಕ್ಕೆಯ ಬೊಮ್ಮಣ್ಣನ ವಚನಗಳ ಅಂಕಿತನಾಮ; ಅರಿವವನ=ತಿಳಿದುಕೊಳ್ಳುವ ವ್ಯಕ್ತಿಯ/ಅರಿತುಕೊಳ್ಳುವವನ; ಸದ್ಭಕ್ತಿ=ಒಳ್ಳೆಯ ನಡೆನುಡಿ;

ಕಾಲಾಂತಕ ಭೀಮೇಶ್ವರಲಿಂಗವನರಿವವನ ಸದ್ಭಕ್ತಿ=ಶಿವನನ್ನು ಪೂಜಿಸುವ ಪ್ರತಿಯೊಬ್ಬ ವ್ಯಕ್ತಿಯು ತನ್ನ ನಡೆನುಡಿಗಳಿಂದ ತನಗೆ ಒಳಿತನ್ನು ಮಾಡಿಕೊಳ್ಳುವಂತೆಯೇ ಸಹಮಾನವರ ಮತ್ತು ಸಮಾಜದ ಹಿತಕ್ಕಾಗಿ ತಾನು ಬಾಳಬೇಕೆಂಬುದನ್ನು ಅರಿತಿರುತ್ತಾನೆ ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಗೊಂಡಿವೆ.)



೩೬. ತಾನರಿಯದೆ ಮಾಡಿದ ದೋಷಕ್ಕೆ
ತನಗೆ ಅಘೋರವಿಲ್ಲ
ಅದು ಜಗದ ಹುದುಗು

ತಾನರಿದು ಅಲ್ಲ ಅಹುದೆಂದು
ಎಲ್ಲರಿಗೆ ಹೇಳಿ

ಪರಧನದಲ್ಲಿ
ಪರಸತಿಯಲ್ಲಿ
ಅನ್ಯರ ನಿಂದೆಯಲ್ಲಿ
ವ್ರತಾಚಾರ ಭಂಗಿತರಲ್ಲಿ
ಇದನರಿದು ಅನುಸರಣೆಯ ಮಾಡಿದಡೆ

ಕುಂಭೀನರಕದಲ್ಲಿ ಹಿಂಗದಿರ್ಪನು
ಕಾಲಾಂತಕ ಭೀಮೇಶ್ವರಲಿಂಗಕ್ಕೆ ಸ್ವಪ್ನದಲ್ಲಿ ದೂರಸ್ಥನು.

**ನಡೆನುಡಿಗಳಲ್ಲಿ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಎಂಬುದನ್ನು ಎಲ್ಲರಿಗೂ ಮನದಟ್ಟಾಗುವಂತೆ ತಾನೇ ಹೇಳುತ್ತಾ, ತಾನು ಮಾತ್ರ ಕೆಟ್ಟ ನಡೆನುಡಿಗಳಲ್ಲಿ ತೊಡಗಿರುವ ವ್ಯಕ್ತಿಯ ಜೀವನವು ಆತಂಕ, ತಲ್ಲಣ, ಅಪಮಾನ, ಸಂಕಟ, ಸೋಲು, ನೋವು, ಸಾವಿನಲ್ಲಿ ಕೊನೆಗೊಳ್ಳುತ್ತದೆ ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ತಾನ್+ಅರಿಯದೆ; ತಾನ್=ವ್ಯಕ್ತಿಯು; ಅರಿ=ತಿಳಿ/ಕಲಿ; ಅರಿಯದೆ=ತಿಳಿಯದೆ/ಗೊತ್ತಿಲ್ಲದೆ; ಮಾಡು=ನಡೆದುಕೊಳ್ಳು/ಆಚರಿಸು; ದೋಷ=ತಪ್ಪು/ಕೆಟ್ಟದ್ದು/ಕುಂದು; ತನಗೆ=ವ್ಯಕ್ತಿಗೆ; ಅಘೋರ+ಇಲ್ಲ; ಘೋರ=ಉಗ್ರವಾದುದು/ಬಲವಾದುದು/ಹೆಚ್ಚಿನದು/ಕ್ರೂರವಾದುದು; ಅಘೋರ=ಹೆಚ್ಚಿನದಲ್ಲ/ದೊಡ್ಡದಲ್ಲ/ಕ್ರೂರವಾದುದಲ್ಲ; ಅದು=ಅಂತಹ ನಡವಳಿಕೆ; ಜಗ=ಜಗತ್ತು/ಲೋಕ/ಪ್ರಪಂಚ; ಹುದುಗು=ಅಡಗು/ಒಳಗೊಂಡಿರುವುದು/ಹಾಸುಹೊಕ್ಕಾಗಿರುವುದು/

ಕೂಡಿಕೊಂಡಿರುವುದು; ಜಗದ ಹುದುಗು=ಮಾನವ ಸಮುದಾಯದ ಜೀವನದಲ್ಲಿ ಸೇರಿಕೊಂಡಿದೆ/ಅಡಗಿಕೊಂಡಿದೆ/ಹಾಸುಹೊಕ್ಕಾಗಿದೆ;

ತಾನರಿಯದೆ ಮಾಡಿದ ದೋಷಕ್ಕೆ ತನಗೆ ಅಘೋರವಿಲ್ಲ ಅದು ಜಗದ ಹುದುಗು=ವ್ಯಕ್ತಿಯು ತನ್ನ ನಡೆನುಡಿಗಳಿಂದ ಇತರರಿಗೆ ಮತ್ತು ಸಮಾಜಕ್ಕೆ ಕೇಡು, ಹಾನಿ, ನೋವು, ತೊಂದರೆಯು ಆಗುತ್ತಿದೆ ಎಂಬುದನ್ನು ಅರಿಯದೆ ಮಾಡಿದ ತಪ್ಪು, ಅದು ಅಂತಹ ದೊಡ್ಡ ತಪ್ಪೇನಲ್ಲ. ಏಕೆಂದರೆ ನಿಸರ್ಗ ಸಹಜವಾದ ಹಸಿವು ಮತ್ತು ಕಾಮ ಹಾಗೂ ಮಾನವ ಸಮುದಾಯವೇ ಕಟ್ಟಿಕೊಂಡಿರುವ ಸಾಮಾಜಿಕ ಕಟ್ಟುಪಾಡುಗಳ ನಡುವೆ ಸಿಲುಕಿರುವ ಪ್ರತಿಯೊಬ್ಬ ವ್ಯಕ್ತಿಯು ಜೀವನದಲ್ಲಿ ಒಂದಲ್ಲ ಒಂದು ಬಗೆಯ ತಪ್ಪನ್ನು ಮಾಡುತ್ತಾನೆ. ಈ ರೀತಿ ತಮಗೆ ಅರಿವಿಲ್ಲದೆಯೇ ತಪ್ಪನ್ನು ಮಾಡುವುದು ಎಲ್ಲ ವ್ಯಕ್ತಿಗಳ ಬದುಕಿನ ಲೋಕ ವ್ಯವಹಾರದಲ್ಲಿ, ಸಾಮಾಜಿಕ ನಡೆನುಡಿಯಲ್ಲಿ ಹಾಸುಹೊಕ್ಕಾಗಿದೆ. ಅಂದರೆ ಜೀವನದಲ್ಲಿ ತಪ್ಪನ್ನು ಮಾಡದಿರುವ ವ್ಯಕ್ತಿಯೇ ಇಲ್ಲ;

ತಾನ್+ಅರಿದು; ಅರಿದು=ತಿಳಿದುಕೊಂಡಿದ್ದು/ಬಲ್ಲವನಾಗಿದ್ದು/ಯಾವುದು ಒಳ್ಳೆಯದು/ಯಾವುದು ಕೆಟ್ಟದ್ದು; ಯಾವುದನ್ನು ಮಾಡಬೇಕು/ಯಾವುದನ್ನು ಮಾಡಬಾರದು ಎಂಬ ಅರಿವನ್ನು ಹೊಂದಿದವನಾಗಿದ್ದು; ಅಲ್ಲ=ಇದು ಒಳ್ಳೆಯದಲ್ಲ/ಇದು ಕೆಟ್ಟುದ್ದು/ಇದನ್ನು ಮಾಡಬಾರದು; ಅಹುದು+ಎಂದು; ಅಹುದು=ಇದು ಸರಿ/ಇದು ಒಳ್ಳೆಯದು/ಇದನ್ನು ಮಾಡಬೇಕು; ಎಲ್ಲರಿಗೆ= ಪ್ರತಿಯೊಬ್ಬರಿಗೂ/ಸಕಲರಿಗೂ; ಹೇಳಿ=ತಿಳಿಸಿ/ವಿವರಿಸಿ/ಮನದಟ್ಟು ಮಾಡಿಸಿ;

ಪರಧನ+ಅಲ್ಲಿ; ಪರ=ಬೇರೆ/ಅನ್ಯ/ಇತರ; ಧನ=ಹಣ/ಸಂಪತ್ತು/ಆಸ್ತಿಪಾಸ್ತಿ/ ಒಡವೆ ವಸ್ತು; ಪರಧನ=ಬೇರೆಯವರ ಸಂಪತ್ತು, ಒಡವೆ, ವಸ್ತು, ಆಸ್ತಿಪಾಸ್ತಿ; ಪರಸತಿ+ಅಲ್ಲಿ; ಸತಿ=ಹೆಂಡತಿ/ಮಡದಿ/ಹೆಂಗಸು; ಪರಸತಿ=ಮತ್ತೊಬ್ಬನ ಮಡದಿಯನ್ನು/ಹೆಂಡತಿಯನ್ನು/ಮತ್ತೊಬ್ಬ ಹೆಂಗಸನ್ನು;

ಅನ್ಯ=ಬೇರೆ/ಇತರ; ನಿಂದೆ+ಅಲ್ಲಿ; ನಿಂದೆ=ತೆಗಳಿಕೆ/ಬಯ್ಯುವಿಕೆ/ಕಡೆಗಣಿಸಿ ಮಾತನಾಡುವುದು/ವ್ಯಕ್ತಿತ್ವವನ್ನು ಅಲ್ಲಗಳೆಯುವುದು; ವ್ರತ+ಆಚಾರ;

ವ್ರತ=ವ್ಯಕ್ತಿಯು ತಾನಾಗಿಯೇ ಕಯ್ಗೊಂಡು ಆಚರಿಸುವ ನಡೆನುಡಿಗಳು/ದೇವರನ್ನು ಒಲಿಸಿಕೊಳ್ಳಲು, ದೇವರ ಕರುಣೆಗೆ ಪಾತ್ರರಾಗಲೆಂದು ದೇಹವನ್ನು ದಂಡಿಸುವ ಮತ್ತು ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವ ನಿಯಮಿತವಾದ ನಡೆನುಡಿಗಳು; ಆಚಾರ=ಕಟ್ಟುಪಾಡು/ಸಂಪ್ರದಾಯ/ಒಳ್ಳೆಯ ನಡತೆ; ವ್ರತಾಚಾರ=ವ್ರತವನ್ನು ಕಟ್ಟುನಿಟ್ಟಾಗಿ ಆಚರಿಸುವುದು; ಭಂಗಿತರು+ಅಲ್ಲಿ; ಭಂಗ=ಹಾಳು/ನಾಶ/ಮುರಿಯುವಿಕೆ/ಕುಂದನ್ನು ಉಂಟುಮಾಡುವುದು; ಭಂಗಿತರು=ಹಾಳು ಮಾಡುವವರು/ನಾಶಪಡಿಸುವವರು/ಮುರಿಯುವವರು; ಇದನ್+ಅರಿದು; ಇದನ್=ಇದನ್ನು; ಇದನರಿದು=ವ್ಯಕ್ತಿಗಳು ಕೆಟ್ಟ ನಡೆನುಡಿಯವರು ಎಂಬುದನ್ನು ಚೆನ್ನಾಗಿ ತಿಳಿದಿದ್ದರೂ/ಅರಿತಿದ್ದರೂ; ಅನುಸರಣೆ=ಹೊಂದಿಕೊಂಡು ಹೋಗುವುದು/ಒಡನಾಡುವುದು/ನಂಟನ್ನು ಬೆಳೆಸುವುದು; ಮಾಡಿದಡೆ=ಮಾಡಿದರೆ;

ಪರಧನದಲ್ಲಿ ಪರಸತಿಯಲ್ಲಿ ನಿಂದೆಯಲ್ಲಿ ವ್ರತಾಚಾರ ಭಂಗಿತರಲ್ಲಿ ಇದನರಿದು ಅನುಸರಣೆಯ ಮಾಡಿದಡೆ=ಇತರರ ಸಂಪತ್ತನ್ನು ವಂಚನೆ, ಮೋಸ, ಕಪಟತನದಿಂದ ದೋಚುವ; ಇತರರ ಮಡದಿಯರೊಡನೆ ಕಾಮದ ನಂಟನ್ನು ಪಡೆಯುವ; ಇತರರನ್ನು ನಿಂದಿಸುವ ಮತ್ತು ಒಳ್ಳೆಯ ನಡೆನುಡಿಗಳನ್ನು ಪಾಲಿಸದೆ ಹಾಳಾಗಿರುವ ವ್ಯಕ್ತಿಗಳ ಕೆಟ್ಟತನವನ್ನು ಚೆನ್ನಾಗಿ ತಿಳಿದಿದ್ದರೂ ಅಂತಹವರೊಡನೆ ಗೆಳೆತನವನ್ನು ಮತ್ತು ನಂಟನ್ನು ಬೆಳೆಸಿಕೊಂಡು ಅವರ ಹಾಗೆಯೇ ತಾನೂ ಕೂಡ ಕೆಟ್ಟ ನಡೆನುಡಿಗಳಲ್ಲಿ ತೊಡಗಿದರೆ;

ಕುಂಭೀನರಕ+ಅಲ್ಲಿ; ನರಕ=ಜನಮನದ ಕಲ್ಪನೆಯಲ್ಲಿ ರೂಪುಗೊಂಡಿರುವ ಜಾಗದ ಹೆಸರು. ಈ ಲೋಕದಲ್ಲಿ ಜನರಿಗೆ ಕೇಡನ್ನು ಬಗೆದು ಸಾವನ್ನಪ್ಪಿದ ವ್ಯಕ್ತಿಯು, ಅನಂತರ ತಾನು ಮಾಡಿದ ಕೆಟ್ಟ ಕೆಲಸಗಳಿಗೆ ತಕ್ಕಂತೆ ನಾನಾ ಬಗೆಯ ದಂಡನೆಗಳಿಗೆ ಗುರಿಯಾಗಿ ನರಳುವ ಮತ್ತೊಂದು ಲೋಕದಲ್ಲಿರುವ ಜಾಗ. ಜನರಿಗೆ ಕೇಡನ್ನು ಮಾಡಿದವರು ಸಂಕಟದ ನೆಲೆಯಾದ ನರಕಕ್ಕೆ, ಒಳಿತನ್ನು ಮಾಡಿದವರು ಸ್ವರ್ಗಕ್ಕೆ ಹೋಗುತ್ತಾರೆ ಎಂಬ ನಂಬಿಕೆಯು ಜನಮನದಲ್ಲಿದೆ; ಕುಂಭೀನರಕ=ಹೆಚ್ಚಿನ ದಂಡನೆಯನ್ನು ನೀಡುವ ಹಾಗೂ

ನೋವು, ಸಂಕಟ, ವೇದನೆಯ ನೆಲೆಯಾದ ಒಂದು ನರಕದ ಹೆಸರು; ಹಿಂಗದೆ+ಇರ್ಪನು; ಹಿಂಗು=ತಗ್ಗು/ಕುಸಿ/ಕುಗ್ಗು/ಬಿಡು/ತ್ಯಜಿಸು; ಹಿಂಗದೆ=ಬಿಡದೆ/ತ್ಯಜಿಸದೆ; ಇರ್ಪನು=ಇರುವನು;

ಕುಂಭೀನರಕದಲ್ಲಿ ಹಿಂಗದಿರ್ಪನು=ನಿಶ್ಚಯವಾಗಿಯೂ 'ಕುಂಭೀನರಕ'ದಲ್ಲಿ ಬಿದ್ದು ಅತಿ ಹೆಚ್ಚಿನ ಯಾತನೆಗೆ ಒಳಗಾಗಿ ನರಳುವನು/ನರಕಯಾತನೆಯಿಂದ ಪಾರಾಗಲು ಆಗುವುದಿಲ್ಲ;

ಕಾಲ+ಅಂತಕ; ಕಾಲ=ಯಮ; ಅಂತಕ=ಕೊಂದವನು/ವಿನಾಶಕ; ಕಾಲಾಂತಕ =ಶಿವ/ಯಮನನ್ನು ಕೊಂದವನು;

ಭೀಮೇಶ್ವರಲಿಂಗ=ಈಶ್ವರ/ಶಿವ/ದೇವರು; ಕಾಲಾಂತಕ ಭೀಮೇಶ್ವರಲಿಂಗ=ಡಕ್ಕೆಯ ಬೊಮ್ಮಣ್ಣನ ವಚನಗಳ ಅಂಕಿತನಾಮ; ಸ್ವಪ್ನ+ಅಲ್ಲಿ; ಸ್ವಪ್ನ=ಕನಸು/ ನಿದ್ರೆಯಲ್ಲಿದ್ದಾಗ ಕಾಣುವ ನೋಟ; ದೂರ=ಎರಡು ವಸ್ತು ಇಲ್ಲವೇ ಇಬ್ಬರು ವ್ಯಕ್ತಿಗಳ ನಡುವಣ ಅಂತರ; ದೂರಸ್ಥನು=ದೂರದಲ್ಲಿರುವವನು;

ಕಾಲಾಂತಕ ಭೀಮೇಶ್ವರಲಿಂಗಕ್ಕೆ ಸ್ವಪ್ನದಲ್ಲಿ ದೂರಸ್ಥನು=ಕೆಟ್ಟದ್ದು ಎಂದು ತಿಳಿದಿದ್ದರೂ, ಅದನ್ನೇ ಹಿಂಬಾಲಿಸಿ, ನೀಚ ಕೆಲಸಗಳಲ್ಲಿ ತೊಡಗುವ ವ್ಯಕ್ತಿಯು ಎಂದೆಂದಿಗೂ ದೇವರಿಂದ ದೂರವಿರುತ್ತಾನೆ. ಕೆಟ್ಟತನವುಳ್ಳ ವ್ಯಕ್ತಿಗಳು ಕನಸಿನಲ್ಲಿಯೂ ದೇವರ ಬಳಿಸಾರುವುದಕ್ಕೆ ಆಗುವುದಿಲ್ಲ.

ವ್ಯಕ್ತಿಯು ಒಳ್ಳೆಯ ನಡೆನುಡಿಗಳಿಂದ ತನಗೆ ಒಳಿತನ್ನು ಮಾಡಿಕೊಳ್ಳುವುದರ ಜತೆಗೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳನ್ನೇ ದೇವರೆಂದು ಶಿವಶರಣಶರಣೆಯರು ನಂಬಿದ್ದರು. ಆದ್ದರಿಂದ ಕೆಟ್ಟ ವ್ಯಕ್ತಿಗಳು ದೇವರ ಬಳಿಸಾರುವುದಕ್ಕೆ ಯೋಗ್ಯರಲ್ಲವೆಂಬ ನಿಲುವನ್ನು ಹೊಂದಿದ್ದರು)



೩೭. ಸತಿಯ ಗುಣವ
ಪತಿ ನೋಡಬೇಕಲ್ಲದೆ
ಪತಿಯ ಗುಣವ
ಸತಿ ನೋಡಬಹುದೆ ಎಂಬರು

ಸತಿಯಿಂದ ಬಂದ ಸೋಂಕು
ಪತಿಗೆ ಕೇಡಲ್ಲವೆ
ಪತಿಯಿಂದ ಬಂದ ಸೋಂಕು
ಸತಿಯ ಕೇಡಲ್ಲವೆ

ಒಂದಂಗದ ಕಣ್ಣು
ಉಭಯದಲ್ಲಿ ಒಂದು ಹಿಂಗಲಿಕ್ಕೆ
ಭಂಗವಾರಿಗೆಂಬುದ ತಿಳಿದಲ್ಲಿಯೆ
ಕಾಲಾಂತಕ ಭೀಮೇಶ್ವರಲಿಂಗಕ್ಕೆ ಸಲೆ ಸಂದಿತ್ತು.

**ಕುಟುಂಬದ ಆಗುಹೋಗುಗಳಿಗೆ ಗಂಡ ಹೆಂಡತಿ ಇಬ್ಬರೂ ಸಮಾನ ಹೊಣೆಗಾರರು ಮತ್ತು ಪಾಲುದಾರರು ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ಸತಿ=ಹೆಂಡತಿ/ಮಡದಿ/ಪತ್ನಿ; ಗುಣ=ನಡತೆ/ಸಜ್ಜನಿಕೆ/ನಡೆನುಡಿ; ಸತಿಯ ಗುಣ=ಹೆಂಡತಿಯ ನಡೆನುಡಿ; ಪತಿ=ಗಂಡ/ಯಜಮಾನ; ನೋಡಬೇಕು+ ಅಲ್ಲದೆ; ನೋಡು=ಕಾಣು/ವಿಚಾರ ಮಾಡು/ಗಮನಿಸು/ಎಣಿಸು; ಬೇಕು=ಅಗತ್ಯ/ ಅವಶ್ಯ; ನೋಡಬೇಕು=ನೋಡುವುದು ಅಗತ್ಯ/ಕಡ್ಡಾಯವಾಗಿ ಗಮನಿಸಬೇಕು; ಅಲ್ಲದೆ=ಹಾಗೆ ಮಾಡದೆ/ಆ ರೀತಿಯಲ್ಲಿ ಮಾಡದೆ; ಪತಿಯ ಗುಣ=ಗಂಡನ ನಡೆನುಡಿ; ನೋಡಬಹುದೆ=ನೋಡುವುದು ಸರಿಯೇ; ಎಂಬರು=ಎನ್ನುತ್ತಾರೆ/ ಎನ್ನುವರು;

ಸತಿಯ ಗುಣವ ಪತಿ ನೋಡಬೇಕಲ್ಲದೆ ಪತಿಯ ಗುಣವ ಸತಿ ನೋಡಬಹುದೆ ಎಂಬರು=ಕುಟುಂಬದ ಆಗುಹೋಗುಗಳಲ್ಲಿ ಹೆಂಡತಿಯು ಹೇಗೆ ನಡೆದು ಕೊಳ್ಳುತ್ತಿದ್ದಾಳೆ. ಅಂದರೆ ಮನೆಮಂದಿಯ ಜತೆಯಲ್ಲಿ ಯಾವ ರೀತಿಯಲ್ಲಿ ಹೊಂದಿಕೊಂಡು ಬಾಳುತ್ತಿದ್ದಾಳೆ. ಕುಟುಂಬದ ಒಳಿತು ಕೆಡುಕುಗಳಲ್ಲಿ, ಏರಿಳಿತಗಳಲ್ಲಿ ಹೇಗೆ ಒಂದಾಗಿದ್ದಾಳೆ. ಅವಳ ನಡೆನುಡಿಗಳಿಂದ ಕುಟುಂಬದಲ್ಲಿ ನೆಮ್ಮದಿ ನೆಲೆಸಿದೆಯೆ?.. ಇವೇ ಮುಂತಾದ ಸಂಗತಿಗಳೆಲ್ಲವನ್ನೂ ಒರೆಹಚ್ಚಿ ನೋಡಿ ತಿಳಿದುಕೊಳ್ಳುವುದು ಗಂಡನ ಪಾಲಿಗೆ ಅತ್ಯಗತ್ಯವಾಗಿರುತ್ತದೆ. ಆದರೆ ಹೆಂಡತಿಯು ತನ್ನ ಗಂಡನ ಬಗ್ಗೆ ಈ ರೀತಿಯಲ್ಲಿ ಆಲೋಚಿಸುವುದು, ಪ್ರಶ್ನೆಗಳನ್ನು ಕೇಳುವುದು, ಗಂಡನ ಗುಣಾವಗುಣಗಳನ್ನು ಒರೆಹಚ್ಚಿ ನೋಡುವುದು ಸರಿಯಲ್ಲವೆಂದು ಜನರು ಹೇಳುತ್ತಾರೆ. ಏಕೆಂದರೆ ಮನೆಗೆ ಸೊಸೆಯಾಗಿ ಬಂದ ಹೆಣ್ಣಿನ ನಡೆನುಡಿಗಳಿಂದ ಒಂದು ಕುಟುಂಬ ಉಳಿಯುತ್ತದೆ ಇಲ್ಲವೇ ಅಳಿಯುತ್ತದೆ ಎಂಬ ಒಳಮಿಡಿತವು ಜನಸಮುದಾಯದ ಮನದಲ್ಲಿ ನೆಲೆಗೊಂಡಿದೆ.

ಈ ಬಗೆಯ ನಿಲುವನ್ನು ಜಗತ್ತಿನಲ್ಲಿರುವ ಎಲ್ಲಾ ಬಗೆಯ ಜಾತಿ, ಮತ, ಜನಾಂಗದ ಜನಸಮುದಾಯಗಳು ಹೊಂದಿವೆ. ಇಂತಹ ನಿಲುವನ್ನು ತಳೆಯುವುದಕ್ಕೆ ಕಾರಣವಾದ ಸಂಗತಿಯನ್ನು ತಿಳಿದಾಗ ಮಾತ್ರ ಹೆಣ್ಣಿನ ಜೀವನದ ಇತಿಮಿತಿಗಳು ಗೋಚರಿಸುತ್ತವೆ.

ಮಾನವ ಸಮುದಾಯದಲ್ಲಿ ಹುಟ್ಟುವ ಮಕ್ಕಳನ್ನು ಜೀವದ ನೆಲೆಯಲ್ಲಿ ಗಂಡು ಮತ್ತು ಹೆಣ್ಣು ಎಂಬ ಎರಡು ಬಗೆಗಳಲ್ಲಿ ಗುರುತಿಸಲಾಗುತ್ತದೆ. ಮನುಕುಲದ ಮುಂದುವರಿಕೆಗೆ ಈ ಎರಡು ಜೀವಿಗಳ ಕೂಡುವಿಕೆಯು ಅಗತ್ಯವಾಗಿದೆ. ಜೀವದ ನೆಲೆಯಲ್ಲಿ ಗಂಡು ಮತ್ತು ಹೆಣ್ಣಿಗೆ ಸಮಾನತೆಯಿದೆ. ಆದರೆ ಸಾಮಾಜಿಕ ನೆಲೆಯಲ್ಲಿ 'ಗಂಡು ಮೇಲು, ಹೆಣ್ಣು ಕೀಳು' ಎಂಬ ತಾರತಮ್ಯವನ್ನು ಎತ್ತಿಹಿಡಿಯಲಾಗಿದೆ. ಈ ರೀತಿಯ ಮೇಲು ಕೀಳಿನ ತರತಮವನ್ನು ಮಾನವ ಸಮಾಜವೇ ರೂಪಿಸಿದೆ/ಕಟ್ಟಿಕೊಂಡಿದೆ.

ಮಾನವ ಚರಿತ್ರೆಯ ಮೊದಲ ಹಂತದಲ್ಲಿ ಅಲೆಮಾರಿಯಾಗಿದ್ದ ಮಾನವ ಗುಂಪುಗಳು ಒಂದೆಡೆ ನಿಂತು ಬೇಸಾಯವನ್ನು ಮಾಡತೊಡಗಿದಾಗ

ಕುಟುಂಬಗಳು ರಚನೆಗೊಂಡವು. ಈ ಕುಟುಂಬಗಳಲ್ಲಿ ತಾಯಿಯೇ ಮೇಟಿಯಾಗಿದ್ದಳು. ಹುಟ್ಟುವ ಮಕ್ಕಳು ಮತ್ತು ಉಳುಮೆ ಮಾಡುವ ಜಮೀನು ಸಮುದಾಯದ ಒಟ್ಟು ಆಸ್ತಿಯಾಗಿದ್ದವು. ಮಕ್ಕಳು ತಾಯಿಯ ಹೆಸರಿನ ಕುಲಕ್ಕೆ ಸೇರಿದವರಾಗಿದ್ದು, ಆ ಕುಲದ ಹೆಸರನ್ನು ಪಡೆಯುತ್ತಿದ್ದರು. ಮಕ್ಕಳು ಹುಟ್ಟುವಲ್ಲಿ ತಂದೆಯು ಯಾರು ಎಂಬುದು ಗುರುತರವಾದ ಸಂಗತಿಯಾಗಿರಲಿಲ್ಲ. ಹೆಣ್ಣಿನ ಕಾಮದ ನಂಟಿಗೆ ಆಗ ಯಾವುದೇ ಬಗೆಯ ಕಟ್ಟುಪಾಡುಗಳು ಇರಲಿಲ್ಲ.

ಅನಂತರದ ವರುಶಗಳಲ್ಲಿ ಮಾನವ ಸಮುದಾಯದ ಸಾಮಾಜಿಕ ಜೀವನದಲ್ಲಿ ಅನೇಕ ಪಲ್ಲಟಗಳು ಉಂಟಾಗಿ ಉಳುವ ಜಮೀನಿನ ಒಡೆತನವು ಒಟ್ಟು ಸಮುದಾಯದಿಂದ ಕಯ್ ತಪ್ಪಿಹೋಗಿ, ಕೇವಲ ಕೆಲವೇ ಗಂಡಸರ ಹಿಡಿತಕ್ಕೆ ಸಿಲುಕಿದಾಗ, ಆಸ್ತಿಯ ಮೇಲೆ ಗಂಡಸಿನ ಒಡೆತನ ಉಂಟಾಯಿತು. ಗಂಡು ತನ್ನ ಬೀಜದಿಂದ ಹುಟ್ಟುವ ಮಕ್ಕಳಿಗೆ ಆಸ್ತಿಯ ಒಡೆತನದ ಹಕ್ಕು ದೊರೆಯಬೇಕೆಂಬ ಉದ್ದೇಶಕ್ಕೆ ಒಳಗಾಗಿ, ಹೆಣ್ಣಿನ ಮಯ್ ಮನಕ್ಕೆ ಶೀಲದ ಹೆಸರಿನಲ್ಲಿ ಸಂಕೋಲೆಯನ್ನು ತೊಡಿಸಿ, ಅವಳನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡ. ಹೆಣ್ಣಿನ ಕಾಮದ ನಂಟಿಗೆ ನೀತಿಯ ಕಟ್ಟುಪಾಡುಗಳನ್ನು ಹಾಕಿ, ಅವಳ ಚಲನವಲನಗಳನ್ನು ನಿಯಂತ್ರಿಸಿ, ಹೆಣ್ಣಿಗೆ ಯಾವುದೇ ಬಗೆಯ 'ಮಾತಿನ ಸ್ವಾತಂತ್ರ್ಯ – ಚಲನ ಸ್ವಾತಂತ್ರ್ಯ – ಇಚ್ಚೆಯ ಸ್ವಾತಂತ್ರ್ಯ' ಇಲ್ಲದಂತೆ ಮಾಡಿ, ಅವಳನ್ನು ತನ್ನ ಗುಲಾಮಳನ್ನಾಗಿಸಿಕೊಂಡ. ಈ ರೀತಿ ಆಸ್ತಿ ಹಾಗೂ ಹೆಣ್ಣಿನ ಮೇಲಿನ ವ್ಯಕ್ತಿಗತ ಒಡೆತನ ಮತ್ತು ಗಂಡು ಮೇಲುಗಯ್ಯಾಗಿರುವ ಕುಟುಂಬದ ರಚನೆಯ ಕಾರಣದಿಂದಾಗಿ, ಸಾಮಾಜಿಕ ನೆಲೆಯಲ್ಲಿ ಗಂಡುಹೆಣ್ಣಿನಲ್ಲಿ ಲಿಂಗ ತಾರತಮ್ಯವುಂಟಾಯಿತು.

ಮನೆಯ ಹೊರಗೆ ದುಡಿಯುವ ಗಂಡಸಿಗೆ ಆಡಳಿತದ ಗದ್ದುಗೆ, ಹಣ ಮತ್ತು ಸಾಮಾಜಿಕ ಅಂತಸ್ತು ದೊರೆತರೆ, ಮನೆಯ ಒಳಗೆ ದುಡಿಯುವ ಹೆಣ್ಣು ಇವೆಲ್ಲದರಿಂದ ವಂಚಿತಳಾದಳು. ನಿಸರ್ಗದ ನಿಯಮದಂತೆ ಮುಟ್ಟು, ಬಸಿರು, ಹೆರಿಗೆ ಮತ್ತು ಮಕ್ಕಳನ್ನು ಸಾಕಿ ಸಲಹಿ ಬೆಳೆಸುವುದರಲ್ಲಿ ಅವಳ ದೇಹವು ನಲುಗಿಹೋಯಿತು. ಹೆಣ್ಣು ತನ್ನ ಮಯ್ ಮನದ ಅಗತ್ಯ ಮತ್ತು

ಬಯಕೆಗಳನ್ನು ಈಡೇರಿಸಿಕೊಳ್ಳಲು ಗಂಡಸಿನ ಮುಂದೆ ಕಯ್ ಒಡ್ಡಿ ಬಾಳುವಂತಾಯಿತು. ಮನೆಯೊಳಗೆ ಅಡುಗೆಯ ವಸ್ತುಗಳನ್ನು ಬೇಯಿಸಿ ತಿನಸು ಉಣಿಸುಗಳನ್ನು ತಯಾರಿಸುವ, ಮನೆಯವರೆಲ್ಲರಿಗೂ ಅದನ್ನು ಉಣಬಡಿಸುವ, ಅವರು ಚೆಲ್ಲಿದ ಎಂಜಲನ್ನು ಎತ್ತುವ, ಪಾತ್ರೆಗಳ ಮುಸುರೆಯನ್ನು ತೊಳೆಯುವ, ಮನೆಯೊಳಗೆ ಬೀಳುವ ಕಸಕೊಳೆಯನ್ನು ಗುಡಿಸಿ ತೆಗೆಯುವ ಮತ್ತು ಮಕ್ಕಳನ್ನು ಹೆರುವ ಯಂತ್ರವಾದಳು.

ಜಗತ್ತಿನ ಎಲ್ಲಾ ನುಡಿ ಸಮುದಾಯಗಳಲ್ಲಿಯೂ ಹೆಣ್ಣಿನ ಸಾಮಾಜಿಕ ಅಂತಸ್ತು ಗಂಡಿಗಿಂತ ಕಡಿಮೆ ಮಟ್ಟದಲ್ಲಿದೆ. ಈ ಎಲ್ಲಾ ಕಾರಣಗಳಿಂದಾಗಿ ಹೆಣ್ಣನ್ನು 'ಸೆಕೆಂಡ್ ಸೆಕ್ಸ್' ಎಂದು ಗುರುತಿಸುತ್ತಾರೆ. ಅಂದರೆ, ಮಾನವ ಸಮಾಜದಲ್ಲಿ ಗಂಡಸು ಮೊದಲ ದರ್ಜೆಯ ಪ್ರಜೆಯಾದರೆ, ಹೆಂಗಸು ಎರಡನೆ ದರ್ಜೆಯ ಪ್ರಜೆಯಾಗಿದ್ದಾಳೆ. ಇತ್ತೀಚಿನ ವರುಶಗಳಲ್ಲಿ ಹೆಣ್ಣು ವಿದ್ಯಾವಂತೆಯಾಗಿ, ಉದ್ಯೋಗವನ್ನು ಪಡೆದು, ಹಣಕಾಸಿನಲ್ಲಿ ಸ್ವಾವಲಂಬಿಯಾಗಿದ್ದರೂ, ಕುಟುಂಬದಲ್ಲಿ ಅವಳ ಅಂತಸ್ತು ಗಂಡನಿಗಿಂತ ಕಡಿಮೆಯಾಗಿರುತ್ತದೆ. ಆದುದರಿಂದಲೇ ಕುಟುಂಬದಲ್ಲಿ ನಡೆಯುವ ಯಾವುದೇ ಬಗೆಯ ಆಚರಣೆಗಳಲ್ಲಿ ಮತ್ತು ಹಣಕಾಸಿನ ವ್ಯವಹಾರಗಳಲ್ಲಿ ಗಂಡಸರ ಮಾತಿಗೆ ಇರುವ ಬೆಲೆಯು ಹೆಂಗಸರ ಮಾತಿಗೆ ಇರುವುದಿಲ್ಲ. ಎಲ್ಲ ಬಗೆಯ ಮಾತುಕತೆಗಳಲ್ಲಿಯೂ ಕೊನೆಯ ಮಾತು ಗಂಡಸರದೇ ಆಗಿರುತ್ತದೆ.

ಈ ರೀತಿ ಗಂಡನ ಅಡಿಯಾಳಾಗಿ ಬಾಳುತ್ತಿರುವ ಹೆಂಡತಿಯ ಒಳಿತು ಕೆಡುಕಿನ ನಡೆನುಡಿಗಳನ್ನು ಒರೆಹಚ್ಚಿ ನೋಡುವ ಹಕ್ಕು ಗಂಡನಿಗೆ ಇದೆಯೇ ಹೊರತು, ತನ್ನ ಒಡೆಯ/ಯಜಮಾನನಾಗಿರುವ ಗಂಡನ ನಡೆನುಡಿಯಲ್ಲಿ ಕಂಡುಬರುವ ಯಾವುದೇ ಬಗೆಯ ತಪ್ಪುಗಳನ್ನು ಹೆಂಡತಿಯು ಬೆರಳು ಮಾಡಿ ತೋರಿಸುವಂತಿಲ್ಲ, ಕಟು ನುಡಿಗಳಿಂದ ಎತ್ತಿ ಆಡುವಂತಿಲ್ಲ ಎಂಬ ನಿಲುವನ್ನು ಬಹುತೇಕ ಮಂದಿ ಹೊಂದಿದ್ದಾರೆ;

ಸತಿ+ಇಂದ; ಬಂದ=ಉಂಟಾದ/ದೊರಕಿದ/ಒದಗಿದ/ಕೂಡಿದ/ಸೇರಿದ; ಸೋಂಕು=ಅಂಟು ಜಾಡ್ಯ/ಅಂಟು ಬೇನೆ/ಸಾಂಕ್ರಾಮಿಕ ರೋಗ/ಒಬ್ಬರಿಂದ ಮತ್ತೊಬ್ಬರಿಗೆ ತಗಲುವ ಕಾಯಿಲೆ; ಕೇಡು+ಅಲ್ಲವೆ; ಕೇಡು=ಅಪಾಯ/ಆಪತ್ತು/

ಹಾನಿ/ನಾಶ; ಅಲ್ಲವೆ=ತಟ್ಟುವುದಿಲ್ಲವೆ/ತಗಲುವುದಿಲ್ಲವೇ/ಹರಡುವುದಿಲ್ಲವೆ; ಪತಿ+ಇಂದ;

ಸತಿಯಿಂದ ಬಂದ ಸೋಂಕು ಪತಿಗೆ ಕೇಡಲ್ಲವೆ ಪತಿಯಿಂದ ಬಂದ ಸೋಂಕು ಸತಿಯ ಕೇಡಲ್ಲವೆ=ಮಯ್ ಮನಗಳ ನಂಟನ್ನು, ಒಡನಾಟವನ್ನು ಹೊಂದಿರುವ ಗಂಡ ಹೆಂಡತಿಯಲ್ಲಿ ಒಬ್ಬರಿಗೆ ಕಾಯಿಲೆ ಬಂದರೂ ಅದು ಮತ್ತೊಬ್ಬರಿಗೆ ಬಹುಬೇಗ ಅಂಟಿಕೊಂಡು, ಇಬ್ಬರಿಗೂ ಕೇಡು ಉಂಟಾಗುತ್ತದೆ/ತಟ್ಟುತ್ತದೆ; ಇದೇ ಬಗೆಯಲ್ಲಿ ಗಂಡ ಹೆಂಡತಿಯಲ್ಲಿ ಯಾರೊಬ್ಬರು ಕೆಟ್ಟ ನಡೆನುಡಿಗಳನ್ನು ಹೊಂದಿದ್ದರೂ, ಅದು ಕುಟುಂಬದ ಮೇಲೆ ಕೆಟ್ಟ ಪರಿಣಾಮವನ್ನು ಬೀರಿ, ಇಬ್ಬರ ಜೀವನಕ್ಕೂ ಹಾನಿಯನ್ನುಂಟು ಮಾಡುವುದಲ್ಲದೇ, ಇಡೀ ಕುಟುಂಬದ ನಾಶಕ್ಕೆ ಕಾರಣವಾಗುತ್ತದೆ.

ವಚನಕಾರ ಡಕ್ಕೆಯ ಬೊಮ್ಮಣ್ಣನು ಈ ಪ್ರಸಂಗವನ್ನು ಒಂದು ರೂಪಕವಾಗಿ ಚಿತ್ರಿಸುತ್ತಾ, ಹೆಣ್ಣಿನ ಗುಣವನ್ನು ಮಾತ್ರ ಒರೆಹಚ್ಚಿ ನೋಡುತ್ತಿರುವ, ಕುಟುಂಬದ ಅಳಿವು ಉಳಿವಿಗೆ ಹೆಣ್ಣೊಬ್ಬಳನ್ನೇ ಹೊಣೆಗಾತಿಯನ್ನಾಗಿ ಮಾಡಿ ನಿಂದಿಸುತ್ತಿರುವ, ಕಡೆಗಣಿಸುತ್ತಿರುವ ಸಾಮಾಜಿಕ ನಿಲುವನ್ನು ಕಟುವಾಗಿ ವಿಡಂಬಿಸುತ್ತ, ಕುಟುಂಬವನ್ನು ಚೆನ್ನಾಗಿ ನಡೆಸಿಕೊಂಡು ಹೋಗುವಂತಹ ಹೊಣೆಗಾರಿಕೆಯು ಗಂಡ-ಹೆಂಡತಿಯಲ್ಲಿ ಸಮಾನವಾಗಿ ಇರಬೇಕು ಎಂಬುದನ್ನು ಹೇಳುತ್ತಿದ್ದಾನೆ;

ಒಂದು+ಅಂಗದ; ಅಂಗ=ಮಯ್/ದೇಹ/ಶರೀರ; ಕಣ್ಣು=ನೋಡಿ ತಿಳಿಯಲು ನೆರವಾಗುವ ಇಂದ್ರಿಯ/ನೇತ್ರ/ನಯನ; ಉಭಯ+ಅಲ್ಲಿ; ಉಭಯ=ಎರಡು; ಉಭಯದಲ್ಲಿ=ಎರಡರಲ್ಲಿ/ಎರಡು ಕಣ್ಣುಗಳಲ್ಲಿ; ಹಿಂಗಲು+ಇಕ್ಕೆ; ಹಿಂಗು= ಸೊರಗು/ನಾಶವಾಗು/ಕಾಣದಂತಾಗು; ಹಿಂಗಲಿಕ್ಕೆ=ಕಾಣದಂತಾದರೆ/ನೋಟದ ಕಸುವನ್ನು ಕಳೆದುಕೊಂಡರೆ/ಕಣ್ಣಿನ ಗುಡ್ಡೆಯು ಹಾಳಾದರೆ; ಭಂಗ+ಆರಿಗೆ+ ಎಂಬುದ; ಭಂಗ=ತೊಂದರೆ/ಕುಂದು/ಸಂಕಟ/ನೋವು/ಹಾನಿ; ಆರು=ಯಾರು; ಆರಿಗೆ=ಯಾರಿಗೆ/ಯಾವ ವ್ಯಕ್ತಿಗೆ; ಎಂಬುದ=ಎನ್ನುವುದನ್ನು/ಎಂಬುದನ್ನು; ತಿಳಿ+ಅಲ್ಲಿಯೆ;ತಿಳಿ=ಅರಿ/ಗೊತ್ತುಮಾಡಿಕೊಳ್ಳುವುದು; ತಿಳಿದಲ್ಲಿಯೆ= ಅರಿತುಕೊಂಡಾಗ/ಗೊತ್ತುಮಾಡಿಕೊಂಡಾಗ/ಮನದಟ್ಟು ಮಾಡಿಕೊಂಡಾಗ;

ಕಾಲ+ಅಂತಕ; ಕಾಲ=ಯಮ; ಅಂತಕ=ಕೊಂದವನು/ವಿನಾಶಕ; ಕಾಲಾಂತಕ=ಶಿವ/ಯಮನನ್ನು ಕೊಂದವನು;

ಭೀಮೇಶ್ವರಲಿಂಗ=ಈಶ್ವರ/ಶಿವ/ದೇವರು; ಕಾಲಾಂತಕ ಭೀಮೇಶ್ವರಲಿಂಗ=ಡಕ್ಕೆಯ ಬೊಮ್ಮಣ್ಣನ ವಚನಗಳ ಅಂಕಿತನಾಮ; ಸಲೆ=ನಿಜವಾಗಿ/ನಿಶ್ಚಯವಾಗಿ/ಸಂಪೂರ್ಣವಾಗಿ; ಸಂದು+ಇತ್ತು; ಸಂದು=ಉಂಟಾಗು/ಒದಗು/ಕೂಡು/ಒಟ್ಟಾಗು/ಸೇರು; ಸಂದಿತ್ತು=ಸೇರಿರುವುದು/ಒದಗಿರುವುದು/ಕೂಡಿರುವುದು;

ಒಂದಂಗದ ಕಣ್ಣು ಉಭಯದಲ್ಲಿ ಒಂದು ಹಿಂಗಲಿಕ್ಕೆ ಭಂಗವಾರಿಗೆಂಬುದ ತಿಳಿದಲ್ಲಿಯೆ ಕಾಲಾಂತಕ ಭೀಮೇಶ್ವರಲಿಂಗಕ್ಕೆ ಸಲೆ ಸಂದಿತ್ತು=ಒಬ್ಬ ವ್ಯಕ್ತಿಯ ಮಯ್ಯಲ್ಲಿರುವ ಎರಡು ಕಣ್ಣುಗಳಲ್ಲಿ ಯಾವುದೇ ಒಂದು ಕಣ್ಣು ಹಾಳಾದರೂ, ಆ ವ್ಯಕ್ತಿಯ ನೋಟದ ಕಸುವು ಕುಗ್ಗುವಂತೆ, ಒಂದು ಕುಟುಂಬದಲ್ಲಿ ಗಂಡ ಇಲ್ಲವೇ ಹೆಂಡತಿ ಈ ಇಬ್ಬರಲ್ಲಿ ಒಬ್ಬರು ಕೆಟ್ಟ ನಡೆನುಡಿಯುಳ್ಳವರಾದರೂ, ಕುಟುಂಬದ ಬೆಳವಣಿಗೆಗೆ/ಮುನ್ನಡೆಗೆ ಹಾನಿಯುಂಟಾಗುತ್ತದೆ ಎಂಬ ವಾಸ್ತವವನ್ನು ಅರಿತುಕೊಂಡು ಗಂಡ ಹೆಂಡತಿಯು ಬಾಳುವಂತಾದಾಗ ಮಾತ್ರ ಕುಟುಂಬ ಉಳಿದು ಬೆಳೆದು ಬಾಳುತ್ತದೆ.

ಗಂಡ ಹೆಂಡತಿ ಪರಸ್ಪರ ಒಬ್ಬರನ್ನು ಮತ್ತೊಬ್ಬರು ಅರಿತುಕೊಂಡು ಒಳ್ಳೆಯ ನಡೆನುಡಿಗಳಿಂದ ಕೂಡಿ ಹೊಣೆಗಾರಿಕೆಯಿಂದ ಬಾಳುವ ರೀತಿಯು ದೇವರ ಮೆಚ್ಚುಗೆಗೆ ಪಾತ್ರವಾಗುತ್ತದೆ/ದೇವರಿಗೆ ಸಲ್ಲುತ್ತದೆ ಎನ್ನುವ ತಿರುಳನ್ನು ಈ ರೂಪಕದ ನುಡಿಗಳು ಸೂಚಿಸುತ್ತಿವೆ.)



# ತುರುಗಾಹಿ ರಾಮಣ್ಣ

| | |
|---|---|
| ಕಾಲ | : ಕ್ರಿ.ಶ. ಹನ್ನೆರಡನೆಯ ಶತಮಾನ |
| ಕಸುಬು | : ಊರಿನ ದನಗಳನ್ನು ಮುಂಜಾನೆ ಕೊಂಡೊಯ್ದು ಸಂಜೆಯ ತನಕ ಮೇಯಿಸುತ್ತಿದ್ದು ಮತ್ತೆ ಅವನ್ನು ಅವುಗಳ ಒಡೆಯರ ದೊಡ್ಡಿಗೆ ತಂದು ಕೂಡುವುದು. ಈ ಕಸುಬಿನಿಂದ ಬಂದ ಸಂಪಾದನೆಯಿಂದ ಜೀವನವನ್ನು ನಡೆಸುತ್ತಿದ್ದನು. (ತುರುಗಾಹಿ=ತುರು+ಕಾಹಿ; ತುರು=ಹಸು/ದನ/ಗೋವು; ಕಾಪು>ಕಾಹು; ಕಾಪು/ಕಾಹು=ಕಾಯುವಿಕೆ/ಪಹರೆ/ಎಚ್ಚರದಿಂದ ಕಾಪಾಡುವುದು; ಕಾಹಿ=ಕಾವಲು ಕಾಯುವವನು; ತುರುಗಾಹಿ=ದನಗಳನ್ನು ಮೇಯಿಸುವವನು ಮತ್ತು ಕಾಪಾಡುವವನು/ದನ ಕಾಯುವವನು) |
| ದೊರೆತಿರುವ ವಚನಗಳು | : ೪೬ |
| ವಚನಗಳ ಅಂಕಿತ ನಾಮ | : ಗೋಪತಿನಾಥ ವಿಶ್ವೇಶ್ವರಲಿಂಗ |

೩೮. ಅಯ್ಯಾ
ಏನನಹುದೆಂಬೆ ಏನನಲ್ಲಾ ಎಂಬೆ
ಕಾಯವುಳ್ಳನ್ನಕ್ಕ ಕರ್ಮ ಬಿಡದು
ಜೀವವುಳ್ಳನ್ನಕ್ಕ ಕಾರ್ಪಣ್ಯ ಕೆಡದು
ಆರ ಕೇಳಿ
ಆರಿಗೆ ಹೇಳಿಹೆನೆಂದಡೂ
ಭಾವದ ಭ್ರಮೆ ಬಿಡದು
ಮಹಾಸಮುದ್ರವನೀಜುವವನಂತೆ
ಕರ ಕಾಲು ಆಡುವನ್ನಕ್ಕ
ಜೀವಭ್ರಮೆ ನಿಂದಲ್ಲಿ ನಿಂದಿತ್ತು
ಭಾವಭ್ರಮೆ ಒಂದನರಿತು
ಒಂದನರಿದೆಹೆನೆಂಬನ್ನಕ್ಕ
ಬಂದಿತ್ತು ದಿನ
ಅಂಗವ ಹರಿವುದಕ್ಕೆ
ಈ ಸಂದೇಹದ ಸಂದಿಯಲ್ಲಿ ಕೆಡಹದೆ
ನಿಜದಂಗವ ತೋರು
ಗೋಪತಿನಾಥ ವಿಶ್ವೇಶ್ವರಲಿಂಗ.

**ಯಾವುದು ಸರಿ–ಯಾವುದು ತಪ್ಪು; ಯಾವುದು ದಿಟ–ಯಾವುದು ಸಟೆ; ಯಾವುದು ನೀತಿ–ಯಾವುದು ಅನೀತಿ ಎಂಬುದನ್ನು ಗೆರೆ ಹೊಡೆದಂತೆ ವಿಂಗಡಿಸಿ ನೋಡಿ ತಿಳಿಯಲಾಗದೆ, ಜೀವನದ ಉದ್ದಕ್ಕೂ ವ್ಯಕ್ತಿಯು ಕಂಗಾಲಾಗಿ ತೊಳಲಾಡುತ್ತಿರುವುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಅಯ್ಯಾ=ಇತರರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ; ಏನ್+ಅನ್+ಅಹುದು+ಎಂಬೆ; ಏನ್=ಯಾವುದು; ಅನ್=ಅನ್ನು; ಏನನ್=ಯಾವುದನ್ನು/ಯಾವುದೇ ಒಂದು ಸಂಗತಿಯನ್ನು/ವಿಚಾರವನ್ನು; ಅಹುದು=ನಿಜ/ದಿಟ/ವಾಸ್ತವ/ಸತ್ಯ; ಎಂಬೆ=ಹೇಳುವೆ/ನುಡಿಯುವೆ; ಏನ್+ಅನ್+ಅಲ್ಲಾ; ಅಲ್ಲ=ಇಲ್ಲ/ ಆ ರೀತಿಯಲ್ಲಿ ಇಲ್ಲ/ಆ ಬಗೆಯಲ್ಲಿ ಇಲ್ಲ;

ಏನನಹುದೆಂಬೆ ಏನನಲ್ಲಾ ಎಂಬೆ=ಮಾನವ ಸಮುದಾಯದ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಜಾತಿ, ಮತ, ದೇವರುಗಳ ಬಗ್ಗೆ ಹತ್ತಾರು ಬಗೆಯ ನಿಲುವುಗಳು ಮತ್ತು ನೂರಾರು ಬಗೆಯ ಆಚರಣೆಗಳು ಹಾಗೂ ಸಾವಿರಾರು ಬಗೆಯ ಸಾಮಾಜಿಕ ಕಟ್ಟುಪಾಡುಗಳಿವೆ. ಪ್ರತಿಯೊಂದು ಜಾತಿ, ಮತದ ಸಮುದಾಯದವರು "ತಮ್ಮ ಜಾತಿ ಮತ್ತೊಂದಕ್ಕಿಂತ ಮೇಲು" ತಮ್ಮ ಮತ ಮತ್ತೊಂದಕ್ಕಿಂತ ಉತ್ತಮ; "ತಮ್ಮ ದೇವರು ಮತ್ತೊಂದು ದೇವರಿಗಿಂತ ದೊಡ್ಡವನು" ಎಂಬ ಗ್ರಹಿಕೆ/ನಂಬಿಕೆಯನ್ನು ಹೊಂದಿದ್ದಾರೆ. ಇಂತಹ ನಂಬಿಕೆಗಳಲ್ಲಿ ಯಾವುದನ್ನು ಸರಿ ಎಂದು ಒಪ್ಪಿಕೊಳ್ಳಲಿ, ಯಾವುದನ್ನು ನಿರಾಕರಿಸಲಿ;

ಕಾಯ+ಉಳ್ಳ್+ಅನ್ನಕ್ಕ; ಕಾಯ=ಮಯ್/ದೇಹ/ಶರೀರ; ಉಳ್/ಉಳ್ಳ್=ಇರು; ಅನ್ನಕ್ಕ=ತನಕ/ವರೆಗೆ; ಉಳ್ಳನ್ನಕ್ಕ=ಇರುವವರೆಗೆ/ಇರುವ ತನಕ; ಕರ್ಮ=ಕೆಲಸ/ದುಡಿಮೆ/ಕ್ರಿಯೆ; ಬಿಡು=ತೊರೆ/ತ್ಯಜಿಸು/ಕಳಚಿಕೊಳ್ಳು; ಬಿಡದು=ಬಿಡುವುದಿಲ್ಲ/ತೊರೆಯುವುದಿಲ್ಲ;

ಕಾಯವುಳ್ಳನ್ನಕ್ಕ ಕರ್ಮ ಬಿಡದು=ವ್ಯಕ್ತಿಯು ದೇಹವನ್ನು ಹೊಂದಿರುವ ತನಕ, ಒಂದಲ್ಲ ಒಂದು ಬಗೆಯ ಕೆಲಸ/ದುಡಿಮೆಯಲ್ಲಿ ತೊಡಗಿರುತ್ತಾನೆ;

ಜೀವ+ಉಳ್ಳ್+ಅನ್ನಕ್ಕ; ಜೀವ=ಪ್ರಾಣ/ಉಸಿರು; ಕಾರ್ಪಣ್ಯ=ಬಡತನ/ದರಿದ್ರತನ/ಬಹುಬಗೆಯ ಸಂಕಟ/ವೇದನೆ/ನೋವು; ಕೆಡು=ಅಳಿ/ನಾಶವಾಗು/ಇಲ್ಲವಾಗು/ಕಳೆದುಹೋಗು; ಕೆಡದು=ಕೆಡುವುದಿಲ್ಲ/ಇಲ್ಲವಾಗದು/ಕಳೆದುಹೋಗದು;

ಜೀವವುಳ್ಳನ್ನಕ್ಕ ಕಾರ್ಪಣ್ಯ ಕೆಡದು=ವ್ಯಕ್ತಿಯು ಜೀವಂತವಾಗಿರುವ ತನಕ ಬಹುಬಗೆಯ ನೋವು/ಸಂಕಟ/ವೇದನೆಯು ಇದ್ದೇ ಇರುತ್ತದೆ;

ಆರ್+ಅ; ಆರ್=ಯಾರು; ಆರ=ಯಾರನ್ನು; ಕೇಳಿ=ಇತರರು ಆಡಿದ ಮಾತುಗಳನ್ನು ಆಲಿಸಿ/ವಿಚಾರಿಸಿ/ಪ್ರಶ್ನಿಸಿ; ಆರಿಗೆ=ಯಾರಿಗೆ; ಹೇಳ್+ಇಹೆನ್+ಎಂದಡೂ; ಹೇಳು=ತಿಳಿಸು/ವಿವರಿಸು; ಇಹೆನ್=ಇದ್ದೇನೆ; ಎಂದಡೂ=ಎಂದರೂ; ಭಾವ=ಮನದಲ್ಲಿ ತುಡಿಯುವ ಕೋಪ, ತಾಪ, ಒಲವು, ನಲಿವು, ಹತಾಶೆ, ಆಕ್ರೋಶ ಮುಂತಾದ ಹತ್ತಾರು ಬಗೆಯ ಒಳಮಿಡಿತಗಳು; ಭ್ರಮೆ=ಇಲ್ಲದ್ದನ್ನು ಇದೆಯೆಂಬ, ಇರುವುದನ್ನು ಇಲ್ಲವೆಂಬ ಒಳಮಿಡಿತಗಳಿಂದ ಕೂಡಿರುವ ಮನಸ್ಸು/ತಪ್ಪು ಗ್ರಹಿಕೆ/ಅತಿಯಾದ ಮೋಹ/ಕಲ್ಪಿತ ಸಂಗತಿ; ಭಾವದ ಭ್ರಮೆ/ಭಾವಭ್ರಮೆ=ತನ್ನನ್ನೂ ಒಳಗೊಂಡಂತೆ ಸಹಮಾನವರ ಮತ್ತು ಸಮಾಜದ ಬಗ್ಗೆ ವ್ಯಕ್ತಿಯು ಹೊಂದಿರುವ ನೂರೆಂಟು ಬಗೆಯ ಒಳಮಿಡಿತಗಳು;

ಆರ ಕೇಳಿ ಆರಿಗೆ ಹೇಳಿಹೆನೆಂದಡೂ ಭಾವದ ಭ್ರಮೆ ಬಿಡದು=ಇತರರನ್ನು ಕೇಳಿ ತಿಳಿದುಕೊಂಡಿರುವ ವಾಸ್ತವದ ಸಂಗತಿಗಳನ್ನು, ಬೇರೆಯವರಿಗೆ ಮತ್ತೆ ಮತ್ತೆ ಹೇಳುತ್ತಿದ್ದರೂ ವ್ಯಕ್ತಿಯು ತನ್ನಲ್ಲಿಯೇ ಕಲ್ಪಿಸಿಕೊಂಡಿರುವ ಒಳಮಿಡಿತಗಳು ಮಾತ್ರ ಮನದೊಳಗೆ ಇದ್ದೇ ಇರುತ್ತವೆ;

ಮಹಾ+ಸಮುದ್ರ+ಅನ್+ಈಜುವ+ಅವನನ್+ಅಂತೆ; ಮಹಾ=ದೊಡ್ಡದಾಗಿರುವ/ವಿಸ್ತಾರವಾಗಿರುವ; ಸಮುದ್ರ=ಕಡಲು/ಸಾಗರ; ಈಜು=ನೀರಿನಲ್ಲಿ ಕಯ್ ಕಾಲುಗಳನ್ನು ಆಡಿಸುತ್ತ, ನೀರಿನ ಅಲೆಗಳನ್ನು ಸೀಳಿಕೊಂಡು, ನೀರಿನಲ್ಲಿ ಮುಳುಗಿಹೋಗದೆ, ತೇಲುತ್ತಾ ಮುಂದೆ ಮುಂದೆ ಸಾಗುವುದು; ಈಜುವ=ಈಜುತ್ತಿರುವ; ಅವನನ್=ವ್ಯಕ್ತಿಯನ್ನು; ಅಂತೆ=ಹಾಗೆ/ಆ ರೀತಿ/ಬಗೆ; ಕರ=ಕಯ್/ಹಸ್ತ; ಕಾಲು=ಪಾದ/ಅಡಿ/ಮಂಡಿಯಿಂದ ಕೆಳಗಿನ ಅಂಗ/ನಡೆದಾಡಲು ಬಳಸುವ ಅಂಗ; ಆಡುವ+ಅನ್ನಕ್ಕ; ಆಡು=ಅಲುಗು/ಚಲಿಸು;

ಕರ ಕಾಲು ಆಡುವನ್ನಕ್ಕ=ಕಯ್ ಕಾಲುಗಳು ಗಟ್ಟಿಮುಟ್ಟಾಗಿರುವ ತನಕ ನಡೆದಾಡಲು ಕೆಲಸಮಾಡಲು ಕಯ್ ಕಾಲುಗಳಲ್ಲಿ ಕಸುವು ಇರುವ ತನಕ;

ಜೀವಭ್ರಮೆ=ಜೀವವನ್ನು ಉಳಿಸಿಕೊಳ್ಳಬೇಕೆಂಬ ಕಾತರ/ಆತಂಕ; ನಿಂತು=ಒಂದು ಕಡೆ ನಿಲ್ಲುವುದು; ನಿಂದಲ್ಲಿ=ನಿಂತ ಕಡೆಯಲ್ಲಿ/ಜಾಗದಲ್ಲಿ/ ಎಡೆಯಲ್ಲಿ; ನಿಂತು+ಇತ್ತು;

ಮಹಾಸಮುದ್ರವನೀಜುವವನಂತೆ ಕರ ಕಾಲು ಆಡುವನ್ನಕ್ಕ ಜೀವಭ್ರಮೆ ನಿಂದಲ್ಲಿ ನಿಂದಿತ್ತು=ದೊಡ್ಡದಾದ ಸಾಗರದಲ್ಲಿ ಈಜುತ್ತಿರುವ ವ್ಯಕ್ತಿಯು ತನ್ನ ಜೀವದ ಉಳಿವಿಗಾಗಿ ಪ್ರತಿ ಗಳಿಗೆಯಲ್ಲೂ ಕಯ್ ಕಾಲುಗಳನ್ನು ಒಂದೇ ಸಮನೆ ಆಡಿಸುತ್ತಿರುವಂತೆ ಬದುಕಿನ ಉದ್ದಕ್ಕೂ ತನ್ನ ಜೀವದ ಮೇಲಣ ಮೋಹ/ಕಾತರ/ಆತಂಕದ ಒಳಮಿಡಿತಗಳು ವ್ಯಕ್ತಿಯಲ್ಲಿ ನೆಲೆಗೊಂಡಿರುತ್ತವೆ;

ಒಂದ್+ಅನ್+ಅರಿತು; ಅರಿ=ತಿಳಿ/ಕಲಿ; ಅರಿತು=ತಿಳಿದುಕೊಂಡು; ಒಂದು+ಅನ್+ಅರಿದೆಹೆನ್+ಎಂಬ+ಅನ್ನಕ್ಕ; ಅರಿದೆಹೆನ್=ತಿಳಿದುಕೊಂಡೆನು/ ಅರಿತುಕೊಂಡೆನು; ಎಂಬ=ಎನ್ನುವ; ಎಂಬನ್ನಕ್ಕ=ಎನ್ನುತ್ತಿದ್ದಂತೆಯೇ/ ಅಂದುಕೊಳ್ಳುತ್ತಿದ್ದಂತೆಯೇ;

ಬಂದು+ಇತ್ತು; ಬಂದು=ಒದಗು/ಉಂಟಾಗು/ಆಗಮಿಸು; ಅಂಗ=ಮಯ್/ ದೇಹ/ಶರೀರ; ಹರಿ=ಕೀಳು/ಕಡಿ/ಕತ್ತರಿಸು/ತೀರು/ಮುಗಿ; ಅಂಗವ ಹರಿವುದಕ್ಕೆ= ದೇಹದೊಳಗಿನ ಜೀವ/ಪ್ರಾಣವನ್ನು ತೆಗೆಯುವುದಕ್ಕೆ;

ಭಾವಭ್ರಮೆ ಒಂದನರಿತು ಒಂದನರಿದೆಹೆನೆಂಬನ್ನಕ್ಕ ಬಂದಿತ್ತು ದಿನ ಅಂಗವ ಹರಿವುದಕ್ಕೆ=ಮನದೊಳಗೆ ತುಡಿಯುವ ನೂರೆಂಟು ಬಗೆಯ ಒಳಮಿಡಿತಗಳಲ್ಲಿ "ಯಾವುದು ವಾಸ್ತವ-ಯಾವುದು ವಾಸ್ತವವಲ್ಲ" ಎಂಬುದನ್ನು ಅರಿತುಕೊಂಡೆನು ಎನ್ನುವ ಹಂತದಲ್ಲಿಯೇ ಒಂದು ದಿನ ದೇಹದಲ್ಲಿನ ಜೀವ ಹೋಗಿ ಸಾವುಂಟಾಗುತ್ತದೆ;

ಸಂದೇಹ=ಅನುಮಾನ/ಸಂಶಯ; ಸಂದಿ+ಅಲ್ಲಿ; ಸಂದಿ=ಬಿರುಕು/ಸೀಳು/ಸಂದು; ಕೆಡಹು=ಕೆಳಕ್ಕೆ ಬೀಳಿಸು/ತಳ್ಳು; ನಿಜದ+ಅಂಗವ; ನಿಜ=ದಿಟ/ಸತ್ಯ/ವಾಸ್ತವ; ಅಂಗ=ಅಂಶ/ರೀತಿ/ಬಗೆ;

ನಿಜದಂಗ=ಒಂದು ಕಡೆ ನಿಸರ್ಗ ಸಹಜವಾದ ಹಸಿವು ಮತ್ತು ಕಾಮ, ಮತ್ತೊಂದು ಕಡೆ ಮಾನವನೇ ಕಟ್ಟಿಕೊಂಡಿರುವ ಸಾಮಾಜಿಕ ಕಟ್ಟುಪಾಡು

ಹಾಗೂ ಕಲ್ಪಿಸಿಕೊಂಡಿರುವ ನಂಬಿಕೆಗಳ ನಡುವೆ ವ್ಯಕ್ತಿಯ ಜೀವನ ನಡೆಯುತ್ತಿದೆ ಎಂಬ ವಾಸ್ತವದ ಅರಿವು;

ತೋರು=ಕಾಣುವಂತೆ ಮಾಡು; ಗೋಪತಿನಾಥ ವಿಶ್ವೇಶ್ವರಲಿಂಗ=ಶಿವ/ಈಶ್ವರ/ದೇವರು/ತುರುಗಾಹಿ ರಾಮಣ್ಣನ ವಚನಗಳ ಅಂಕಿತನಾಮ;

ಈ ಸಂದೇಹದ ಸಂದಿಯಲ್ಲಿ ಕೆಡಹದೆ ನಿಜದಂಗವ ತೋರು=ಇಬ್ಬಗೆಯ ತೊಳಲಾಟದಲ್ಲಿ ಸಿಲುಕಿರುವ ಮನಸ್ಸಿಗೆ ಬದುಕಿನಲ್ಲಿ ಯಾವುದು ವಾಸ್ತವ ಎಂಬುದನ್ನು ಅರಿತು ಬಾಳುವಂತೆ ಮಾಡು ಎಂದು ದೇವರಲ್ಲಿ ಮೊರೆಯಿಡುವುದನ್ನು ಈ ನುಡಿಗಳು ಸೂಚಿಸುತ್ತಿವೆ.)



# ನಗೆಯ ಮಾರಿತಂದೆ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಕಸುಬು | : | ಜನರನ್ನು ನಕ್ಕುನಲಿಯುವಂತೆ ಮಾಡುವ ಕಲೆಯಲ್ಲಿ ಪರಿಣತಿ/ನಿಪುಣತೆ/ಕುಶಲತೆ |
| ದೊರೆತಿರುವ ವಚನಗಳು | : | ೯೯ |
| ವಚನಗಳ ಅಂಕಿತನಾಮ | : | ಆತುರವೈರಿ ಮಾರೇಶ್ವರ |

೩೯. ಎನ್ನ ಕೈಯಲ್ಲಿ ಕೊಟ್ಟುದ
ದೇವರೆಂದಿದ್ದೆ

ಇದು ಮೆಲ್ಲಮೆಲ್ಲನೆ
ಕಲ್ಲಾಗಿ ಬರುತ್ತಿದೆ

ಇದ ನಾನೊಲ್ಲೆ
ಬಲ್ಲವರು ಹೇಳಿ

ಉಂಬಡೆ ಬಾಯಿಲ್ಲ
ನೋಡುವಡೆ ಕಣ್ಣಿಲ್ಲ

ಎನ್ನ ಬಡತನಕ್ಕೆ ಬೇಡುವಡೆ
ಏನೂ ಇಲ್ಲ
ಆತುರ ವೈರಿ ಮಾರೇಶ್ವರಾ.

ಮಾನವನ ಬದುಕಿನಲ್ಲಿ ಬಡತನದಿಂದ ಉಂಟಾಗುವ ನೋವು, ಅಪಮಾನ ಮತ್ತು ಸಂಕಟಗಳ ನಿವಾರಣೆಯು ದೇವರಿಂದ ಆಗುವುದಿಲ್ಲ. ಏಕೆಂದರೆ ದೇವರು ಎಂಬುವನು ಮಾನವನ ಮನದ ಕಲ್ಪನೆಯಿಂದ ಮೂಡಿರುವ ವ್ಯಕ್ತಿಯೇ ಹೊರತು ವಾಸ್ತವದಲ್ಲಿ ಇಲ್ಲವೆಂಬ ಸಂಗತಿಯನ್ನು ಈ ವಚನದಲ್ಲಿ ಕಾರ್ಯ ಕಾರಣದ ನೆಲೆಯಲ್ಲಿ ಒರೆಹಚ್ಚಿ ನೋಡಲಾಗಿದೆ.

'ಕಾರ್ಯ ಕಾರಣದ ನೆಲೆ' ಎಂದರೆ ಈ ಲೋಕದಲ್ಲಿ ಯಾವುದೇ ಒಂದು ಕಾರ್ಯ ನಡೆಯಬೇಕಾದರೆ, ಅದಕ್ಕೆ ಕಾರಣವಾಗುವ ವ್ಯಕ್ತಿ, ಜೀವಿ, ವಸ್ತುಗಳು ಇರಲೇಬೇಕು ಮತ್ತು ಅವುಗಳ ನಡುವೆ ನಂಟು ಉಂಟಾಗಲೇಬೇಕು.

ನಮ್ಮ ಕಣ್ಣ ಮುಂದಿನ ನಿಸರ್ಗದಲ್ಲಿ ನಿತ್ಯನಿರಂತರವಾಗಿ ನಡೆಯುತ್ತಿರುವ ಪ್ರತಿಯೊಂದು ಕ್ರಿಯೆಗೆ ಎರಡು ಇಲ್ಲವೇ ಅನೇಕ ವಸ್ತುಗಳ ಕೂಡುವಿಕೆ ಕಾರಣವಾಗಿರುತ್ತದೆ. ಮಾನವ ಸಮುದಾಯದ ಬದುಕಿನಲ್ಲಿ ಉಂಟಾಗುತ್ತಿರುವ

**ಆಗುಹೋಗುಗಳಿಗೆ ವ್ಯಕ್ತಿ, ಜೀವಿ, ವಸ್ತುಗಳ ನಡುವಣ ನಂಟು ಮತ್ತು ಮಾನವನ ನಡೆನುಡಿಗಳೇ ಕಾರಣವಾಗಿರುತ್ತವೆ.**

**ಮಾನವರ ಬದುಕಿನಲ್ಲಿ ಮತ್ತು ನಿಸರ್ಗದ ಸಂಗತಿಗಳಲ್ಲಿ ಕಾರ್ಯ ಕಾರಣಗಳ ನಂಟನ್ನು ನೇರವಾಗಿ ಕಾಣಬಹುದು. ಆದರೆ ಇದೇ ರೀತಿಯಲ್ಲಿ ಮಾನವ ಮತ್ತು ದೇವರ ನಡುವಣ ನಂಟಿನಲ್ಲಿ ಯಾವುದೇ ಬಗೆಯ ಕಾರ್ಯ ಕಾರಣಗಳನ್ನು ಕಾಣಲಾಗದು.**

(ಎನ್ನ=ನನ್ನ; ಕೈ+ಅಲ್ಲಿ; ಕೈ=ಕರ/ಹಸ್ತ; ಕೊಟ್ಟುದ=ಕೊಟ್ಟಿರುವುದನ್ನು/ನೀಡಿರುವುದನ್ನು; ದೇವರು+ಎಂದು+ಇದ್ದೆ; ದೇವರು=ಜೀವನದಲ್ಲಿ ಬರುವ ಎಡರು ತೊಡರುಗಳನ್ನು ನಿವಾರಿಸಿ, ತಮಗೆ ಒಳಿತನ್ನು ಮಾಡಿ ಕಾಪಾಡುವ ವ್ಯಕ್ತಿಯನ್ನು/ಶಕ್ತಿಯನ್ನು ದೇವರೆಂದು ಮಾನವ ಸಮುದಾಯ ನಂಬಿದೆ; ಎಂದಿದ್ದೆ=ಎಂದು ತಿಳಿದುಕೊಂಡಿದ್ದೆ/ನಂಬಿಕೊಂಡಿದ್ದೆ/ಅಂದುಕೊಂಡಿದ್ದೆ;

ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣಶರಣೆಯರು ತಮ್ಮ ಅಂಗಯ್ ಮೇಲೆ ಚಿಕ್ಕದಾದ ಲಿಂಗವನ್ನು ಇಟ್ಟುಕೊಂಡು ಪೂಜಿಸುತ್ತಿದ್ದರು. ಇದನ್ನು 'ಇಷ್ಟಲಿಂಗ'ವೆಂದು ಕರೆಯಲಾಗುತ್ತಿತ್ತು; ಇದು=ನನ್ನ ಕಯ್ಯಲ್ಲಿರುವ ಶಿವನ ಸಂಕೇತವಾದ ಲಿಂಗ; ಮೆಲ್=ಬಿಡುವು/ವಿರಾಮ/ಸಾವಕಾಶ; ಮೆಲ್ಲನೆ=ವಿರಾಮವಾಗಿ/ಸಾವಕಾಶವಾಗಿ; ಮೆಲ್ಲಮೆಲ್ಲನೆ=ಚೆನ್ನಾಗಿ ಗಮನಿಸಲು ತೊಡಗಿದಾಗ/ಏನೆಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಿದಾಗ; ಕಲ್ಲ್+ಆಗಿ; ಕಲ್ಲು=ಶಿಲೆ/ಬಂಡೆ/ಅರೆ; ಕಲ್ಲಾಗಿ ಬರುತ್ತಿದೆ=ಕೇವಲ ಕಲ್ಲಾಗಿ ಮಾತ್ರ ಕಾಣುತ್ತಿದೆ. ಅಂದರೆ ಇದರಲ್ಲಿ ದೇವರ ಇರುವಿಕೆಯು ಕಂಡುಬರುತ್ತಿಲ್ಲ;

ಇದ=ಕಲ್ಲಿನ ರೂಪದಲ್ಲಿರುವ ಈ ವಸ್ತುವನ್ನು; ನಾನ್+ಒಲ್ಲೆ; ನಾನ್=ನಾನು; ಒಲ್ಲೆ=ಒಲ್+ಎ; ಒಲ್=ಒಪ್ಪು/ಅಂಗೀಕರಿಸು/ಸ್ವೀಕರಿಸು/ಪಡೆಯುವುದು; ಒಲ್ಲೆ=ಒಪ್ಪಿಕೊಳ್ಳುವುದಿಲ್ಲ/ಸ್ವೀಕರಿಸುವುದಿಲ್ಲ/ಪಡೆಯುವುದಿಲ್ಲ/ಇಟ್ಟುಕೊಳ್ಳುವುದಿಲ್ಲ;

ಇದ ನಾನೊಲ್ಲೆ=ನನ್ನ ಬದುಕಿನ ಆಗುಹೋಗುಗಳಿಗೆ ವಿಗ್ರಹ ರೂಪಿಯಾದ ದೇವರ ಅಗತ್ಯವಿಲ್ಲ; ಶಿವಶರಣ ಶರಣೆಯರು ವ್ಯಕ್ತಿಯು ತನಗೆ ಮತ್ತು ತನ್ನ ಕುಟುಂಬಕ್ಕೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ

ಒಳಿತನ್ನು ಮಾಡುವ ಸಾಮಾಜಿಕ ನಡೆನುಡಿಗಳಲ್ಲಿ ದೇವರನ್ನು ಕಾಣುತ್ತಿದ್ದರು ಎಂಬ ನಿಲುವನ್ನು ಈ ಸೊಲ್ಲು ಸೂಚಿಸುತ್ತಿದೆ;

ಬಲ್ಲ+ಅವರು; ಬಲ್=ತಿಳಿ/ಅರಿ; ಬಲ್ಲವರು=ತಿಳಿದವರು/ಅರಿತವರು/ಗೊತ್ತಿರುವವರು; ಹೇಳಿ=ಉತ್ತರಿಸಿ/ತಿಳಿಸಿ; ಉಣ್=ತಿನ್ನು/ಊಟ ಮಾಡು/ಸೇವಿಸು/ಮೆಲ್ಲು; ಉಂಬಡೆ=ಉಣಿಸು ತಿನಸುಗಳನ್ನು ತಿನ್ನಬೇಕೆಂದರೆ/ಉಣ್ಣಬೇಕೆಂದರೆ; ಬಾಯ್+ಇಲ್ಲ; ನೋಡುವಡೆ=ನೋಡಬೇಕೆಂದರೆ/ಕಾಣಬೇಕೆಂದರೆ; ಕಣ್ಣ್+ಇಲ್ಲ;

ಎನ್ನ=ನನ್ನ; ಬಡತನ=ಆಸ್ತಿಪಾಸ್ತಿ, ಹಣಕಾಸು, ಒಡವೆ ವಸ್ತುಗಳಿಲ್ಲದೆ ಉಣಲು, ಉಡಲು, ವಾಸಿಸಲು ಬೇಕಾದ ವಸ್ತುಗಳಿಂದ ವಂಚಿತರಾಗಿ ನೋವು ಅಪಮಾನ ಸಂಕಟಗಳಿಂದ ಕೂಡಿರುವುದು; ಬೇಡು=ಕೇಳು/ಯಾಚಿಸು/ಬಯಸು; ಬೇಡುವಡೆ=ಯಾಚಿಸಿದರೆ/ಕೇಳಿಕೊಂಡರೆ/ಬಯಸಿದರೆ; ಏನೂ ಇಲ್ಲ=ಬಯಸಿದ/ಬೇಡಿದ/ಯಾಚಿಸಿದ ಯಾವೊಂದು ವಸ್ತುವೂ ದೊರೆಯುವುದಿಲ್ಲ;

ಉಂಬಡೆ ಬಾಯಿಲ್ಲ ನೋಡುವಡೆ ಕಣ್ಣಿಲ್ಲ=ವಿಗ್ರಹರೂಪಿ ಲಿಂಗಕ್ಕೆ ನನ್ನಂತೆ ಜೀವವಾಗಲಿ ಮತ್ತು ಯಾವುದೇ ಬಗೆಯ ಒಳಮಿಡಿತಗಳಾಗಲಿ ಇಲ್ಲ;

ಎನ್ನ ಬಡತನಕ್ಕೆ ಬೇಡುವಡೆ ಏನೂ ಇಲ್ಲ=ಬಡತನದ ಕಾರಣದಿಂದ ತಿನ್ನಲು ಅನ್ನವಿಲ್ಲದೆ, ತೊಡಲು ಬಟ್ಟೆಯಿಲ್ಲದೆ, ಇರಲು ಮನೆಯಿಲ್ಲದೆ ನರಳುತ್ತಿರುವ ನನ್ನ ನೋವಿಗೆ ದೇವರು ಎಂದು ಪೂಜಿಸುವ ಈ ಲಿಂಗದಿಂದ ಯಾವುದೇ ಬಗೆಯ ಪರಿಹಾರವೂ ದೊರೆಯುವುದಿಲ್ಲ.

ಆತುರ=ಅವಸರ/ತ್ವರೆ/ಬೇಗಬೇಗನೆ; ವೈರಿ=ಶತ್ರು/ಹಗೆ; ಮಾರೇಶ್ವರ=ಶಿವ/ದೇವರು; ಆತುರವೈರಿ ಮಾರೇಶ್ವರ=ನಗೆಯ ಮಾರಿತಂದೆಯ ವಚನಗಳ ಅಂಕಿತನಾಮ.)



೪೦. ಕಲ್ಲಿಯ ಹಾಕಿ
ನೆಲ್ಲವ ತಳಿದು
ಗುಬ್ಬಿಯ ಸಿಕ್ಕಿಸುವ ಕಳ್ಳನಂತೆ

ವಾಗದ್ವೈತವ ಕಲಿತು
ಸಂಸ್ಕೃತದ ಮಾತಿನ ಪಸರವ
ಮುಂದೆ ಇಕ್ಕಿಕೊಂಡು

ಮತ್ಸ್ಯದ ವಕ್ತ್ರದಲ್ಲಿ
ಗ್ರಾಸವ ಹಾಕುವನಂತೆ

ಅದೇತರ ನುಡಿ
ಮಾತಿನ ಮರೆ
ಆತುರ ವೈರಿ ಮಾರೇಶ್ವರಾ.

**ಮಾತಿನ ಮೋಡಿಯಿಂದಲೇ ಜನರ ಮಯ್ ಮನಗಳನ್ನು ಮರುಳುಗೊಳಿಸಿ, ತನಗೆ ಬೇಕಾದುದೆಲ್ಲವನ್ನೂ ದೋಚುವ ನಯವಂಚಕನನ್ನು ಈ ವಚನದಲ್ಲಿ ಟೀಕಿಸಲಾಗಿದೆ.**

**‘ಮಾತಿನ ಮೋಡಿ’ ಎಂದರೆ ವ್ಯಕ್ತಿಯು ತಾನಾಡುವ ಮಾತುಗಳಿಂದಲೇ ಜನಮನವನ್ನು ತನ್ನತ್ತ ಸೆಳೆದುಕೊಂಡು, ಅವರನ್ನು ಮುದಗೊಳಿಸಿ, ತಾನು ಹೇಳಿದುದೆಲ್ಲವನ್ನೂ ದಿಟವೆಂದು ನಂಬಿ ನಡೆಯುವಂತೆ ಹುರುಪುಗೊಳಿಸುವ ಜಾಣತನ.**

(ಕಲ್ಲಿ=ನೂಲು/ಹಗ್ಗದಿಂದ ಹೆಣೆದು ಮಾಡಿದ ಬಲೆ/ಸರಗುಣಿಕೆಯ ಬಲೆ/ಜೀರುಗುಣಿಕೆಯ ಬಲೆ/ಪ್ರಾಣಿಗಳನ್ನು ಹಕ್ಕಿಗಳನ್ನು ಹಿಡಿಯುವುದಕ್ಕಾಗಿ ಮಾಡಿರುವ ಬಲೆ; ಹಾಕಿ=ಒಡ್ಡಿ/ಎಸೆದು/ಇಟ್ಟು/ನೆಟ್ಟು; ಕಲ್ಲಿಯ ಹಾಕಿ=ಬಲೆಯನ್ನು ಒಡ್ಡಿ/ಹಾಕಿ; ನೆಲ್ಲು+ಅ; ನೆಲ್ಲು=ಬತ್ತ/ಒಂದು ಬಗೆಯ ‘ಧಾನ್ಯ’/ಕಾಳು; ನೆಲ್ಲ=ಬತ್ತದ ಕಾಳುಗಳನ್ನು; ತಳಿ=ಎರಚು/ಚೆಲ್ಲು/ಉದುರಿಸು; ತಳಿದು=ಎರಚಿ/ಚೆಲ್ಲಿ/ಉದುರಿಸಿ; ಗುಬ್ಬಿ=ಒಂದು ಬಗೆಯ ಹಕ್ಕಿ; ಸಿಕ್ಕಿಸುವ=ಸೆರೆ

ಹಿಡಿಯುವ/ಬಲೆಗೆ ಬೀಳುವಂತೆ ಮಾಡುವ; ಕಳ್ಳನ್+ಅಂತೆ; ಕಳ್ಳ=ಜನಗಳ ಒಡವೆ ವಸ್ತುಗಳನ್ನು ಕದಿಯುವವನು/ದೋಚುವವನು; ಅಂತೆ=ಹಾಗೆ/ಆ ರೀತಿಯಲ್ಲಿ;

ವಾಕ್+ಅದ್ವೈತ=ವಾಗದ್ವೈತ; ವಾಕ್=ನುಡಿ/ಮಾತು; ಅದ್ವೈತ=ಜೀವಾತ್ಮ ಮತ್ತು ಪರಮಾತ್ಮ ಎಂಬುವು ಬೇರೆ ಬೇರೆಯಲ್ಲ, ಅವೆರಡೂ ಒಂದೇ ಎಂಬ ನಿಲುವು;

ವಾಗದ್ವೈತವ ಕಲಿತು=ಯಾವುದೇ ಸಂಗತಿಯನ್ನು ಕುರಿತ ಚರ್ಚೆಯ ಸನ್ನಿವೇಶದಲ್ಲಿ ಎದುರಾಳಿಯನ್ನು ಮನವನ್ನು ಸೆಳೆಯುವಂತಹ, ಮೆಚ್ಚಿಸುವಂತಹ, ಸೋಲಿಸುವಂತಹ ಮಾತುಗಾರಿಕೆಯನ್ನು ಹೊಂದಿರುವುದು/ಮಾತಿನ ಬಳಕೆಯಲ್ಲಿ ಹೆಚ್ಚಿನ ಜಾಣ್ಮೆಯನ್ನು ಕರಗತ ಮಾಡಿಕೊಂಡಿರುವುದು/ ಆಡುವುದು ಒಂದು, ಮಾಡುವುದು ಮತ್ತೊಂದು ಎನಿಸುವಂತಹ ಇಬ್ಬಗೆಯ ನಡೆನುಡಿಯನ್ನು ಅಳವಡಿಸಿಕೊಂಡಿರುವುದು/ ತನ್ನ ನಿಜಜೀವನದಲ್ಲಿ ಆಚರಿಸಿ ತೋರಿಸದ ಸತ್ಯ ನೀತಿ ನ್ಯಾಯದ ನುಡಿಗಳನ್ನಾಡುವುದರಲ್ಲಿ ಚತುರತೆಯನ್ನು ಗಳಿಸಿರುವುದು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ನುಡಿಗಟ್ಟು;

ಸಂಸ್ಕೃತ=ಒಂದು ನುಡಿ/ಇಂಡಿಯಾ ದೇಶದ ಪ್ರಾಚೀನ ಜನಸಮುದಾಯದ ಸಂಪ್ರದಾಯ, ಆಚರಣೆ, ನಂಬಿಕೆ, ನಾಗರಿಕತೆ ಮತ್ತು ಸಾಮಾಜಿಕ ಜೀವನದ ಸಂಗತಿಗಳನ್ನು ನಿರೂಪಿಸುವ ವೇದ, 'ಉಪನಿಷತ್ತು', ವಾಲ್ಮೀಕಿ ರಾಮಾಯಣ, ವ್ಯಾಸ 'ಮಹಾಭಾರತ', 'ಭಗವದ್ಗೀತೆ' ಮತ್ತು ಪುರಾಣಗಳೆಲ್ಲವೂ 'ಸಂಸ್ಕೃತ' ನುಡಿಯಲ್ಲಿ ರಚನೆಗೊಂಡಿವೆ. 'ಸಂಸ್ಕೃತ'ವನ್ನು ಕೆಲವರು ದೇವನುಡಿಯೆಂದು ನಂಬಿ ಹೆಮ್ಮೆಯಿಂದ ಕೊಂಡಾಡುತ್ತಾರೆ; ಮಾತು=ನುಡಿ/ಸೊಲ್ಲು/ಹೇಳಿಕೆ; ಸಂಸ್ಕೃತದ ಮಾತು='ಸಂಸ್ಕೃತ'ದ ಹೊತ್ತಿಗೆಗಳಲ್ಲಿ ನಿರೂಪಣೆಗೊಂಡಿರುವ ಪ್ರಸಂಗಗಳಿಂದ ಆಯ್ದುಕೊಂಡಿರುವ ನುಡಿಗಳು/ಹೇಳಿಕೆಗಳು; ಪಸರ=ಅಂಗಡಿ/ ಅಂಗಡಿಯ ಸರಕು/ಮಾರಾಟ ಮಾಡಲೆಂದು ಜೋಡಿಸಿಟ್ಟಿರುವ ವಸ್ತುಗಳು; ಮುಂದೆ=ಎದುರಿಗೆ/ಮುಂದುಗಡೆ; ಇಕ್ಕಿ+ಕೊಂಡು; ಇಕ್ಕು=ಇರಿಸು/ಹರಡು/ ಹಾಸು/ಇಡು; ಇಕ್ಕಿಕೊಂಡು=ಹರಡಿಕೊಂಡು;

ಸಂಸ್ಕೃತದ ಮಾತಿನ ಪಸರವ ಮುಂದೆ ಇಕ್ಕಿಕೊಂಡು=ಕೇಳುಗರ ಗಮನವನ್ನು ತಮ್ಮತ್ತ ಸೆಳೆಯಲು ಮತ್ತು ಕೇಳುಗರು ತಮ್ಮ ಮಾತುಗಳನ್ನು ನಂಬುವಂತೆ

ಮಾಡಲೆಂದು 'ಸಂಸ್ಕೃತ'ದ ಹೊತ್ತಿಗೆಗಳಿಂದ ಆಯ್ದ ನುಡಿಗಳನ್ನು ಪದೇ ಪದೇ ಬಳಸುತ್ತಿರುವುದು;

ವ್ಯಾಪಾರಿಯು ತನ್ನ ವಸ್ತುಗಳ ಮಾರಾಟಕ್ಕಾಗಿ ಅಂಗಡಿಯನ್ನು ತೆರೆದಂತೆ ಜಾತಿ, ಮತದ ಒಕ್ಕೂಟಗಳಲ್ಲಿ ನೇತಾರರಾಗಿರುವ ಜಾತಿ ಜಗದ್ಗುರುಗಳು, ದೇವಮಾನವರು ಮತ್ತು ವಂಚನೆಯ ಉದ್ದೇಶವನ್ನು ಹೊಂದಿರುವ ಕೆಲ ಗುರುಹಿರಿಯರು ಜನರನ್ನು ಮರಳುಗೊಳಿಸಿ ಸಂಪತ್ತನ್ನು ಸಂಪಾದಿಸಲೆಂದು 'ಸಂಸ್ಕೃತದ' ನುಡಿಯನ್ನು ವ್ಯಾಪಾರದ ಸರಕನ್ನಾಗಿ ಮಾಡಿಕೊಂಡಿದ್ದಾರೆ ಎಂಬ ರೂಪಕದ ತಿರುಳಿನಲ್ಲಿ ಈ ಸೊಲ್ಲು ಬಳಕೆಯಾಗಿದೆ;

ಮತ್ಸ್ಯ=ಮೀನು; ವಕ್ತ್ರ+ಅಲ್ಲಿ; ವಕ್ತ್ರ=ಬಾಯಿ; ಗ್ರಾಸ=ಆಹಾರ/ಊಟ/ತುತ್ತು; ಹಾಕು+ಅವನ್+ಅಂತೆ;

ಮತ್ಸ್ಯದ ವಕ್ತ್ರದಲ್ಲಿ ಗ್ರಾಸವ ಹಾಕುವುದು=ಕೆರೆ ಕಟ್ಟೆ ಬಾವಿ ಹೊಳೆ ನದಿಗಳಲ್ಲಿರುವ ಜಲಚರವಾದ ಮೀನನ್ನು ಹಿಡಿಯುವಾಗ, ಗಾಳದ ತುದಿಗೆ ಎರೆಹುಳವನ್ನು ಇಲ್ಲವೇ ಇನ್ನಿತರ ಕಡ್ಡಿಕಾಳುಗಳನ್ನು ಸಿಕ್ಕಿಸುತ್ತಾರೆ. ಗಾಳದ ತುದಿಯಲ್ಲಿರುವ ಆಹಾರದ ತುಣುಕನ್ನು ಕಂಡು ಆಸೆಯಿಂದ ಅದರತ್ತ ಬಂದು ಮೀನು ತನ್ನ ಬಾಯನ್ನು ಹಾಕುತ್ತಿದ್ದಂತೆಯೇ, ಗಾಳದ ಕೊಂಡಿಗೆ ಸಿಕ್ಕಿ ಬಲಿಯಾಗುತ್ತದೆ; ಸುಂದರವಾದ/ಮನಸೆಳೆಯುವ ಮಾತುಗಳಿಂದಲೇ ಜನರನ್ನು ಮೋಸಗೊಳಿಸಿ, ತಮ್ಮ ಹಿತಕ್ಕಾಗಿ ಜನರನ್ನು ಬಲಿ ತೆಗೆದುಕೊಳ್ಳುವ ವಂಚಕರ ವರ್ತನೆಯನ್ನು ಈ ರೂಪಕದ ಮೂಲಕ ಚಿತ್ರಿಸಲಾಗಿದೆ;

ಅದು+ಏತರ; ಅದು=ತನ್ನ ಹಿತಕ್ಕಾಗಿ ಇತರರನ್ನು ವಂಚಿಸುವುದು; ಏತರ=ಯಾವ ಬಗೆಯದು/ಯಾವ ರೀತಿಯದು; ಅದೇತರ ನುಡಿ=ಇಂತಹ ಮಾತುಗಳಿಂದ ಒಳಿತು ಹೇಗೆ ಉಂಟಾಗುತ್ತದೆ; ಮರೆ=ಮುಚ್ಚು/ಅಡಗಿಸು/ಗುಟ್ಟು/ರಹಸ್ಯ/ಕಪಟ/ಮೋಸ; ಮಾತಿನ ಮರೆ=ನೀತಿಯ ಮಾತುಗಳ ಹಿಂದೆ ಕಪಟತನದ ಆಲೋಚನೆಗಳನ್ನು ಮನದಲ್ಲಿ ಅಡಗಿಸಿಕೊಂಡಿರುವುದು; ಆತುರವೈರಿ ಮಾರೇಶ್ವರಾ=ನಗೆಯ ಮಾರಿತಂದೆಯ ವಚನಗಳ ಅಂಕಿತನಾಮ.)



# ಬಾಲಸಂಗಯ್ಯ

ಕಾಲ : ಕ್ರಿ.ಶ. ಹದಿನಾರನೆಯ ಶತಮಾನ
ದೊರೆತಿರುವ ವಚನಗಳು : ೬೨೦
ವಚನಗಳ ಅಂಕಿತನಾಮ : ಅಪ್ರಮಾಣ ಕೂಡಲಸಂಗಮದೇವಾ.

೪೧. ಕಲ್ಲ ದೇವರು ದೇವರಲ್ಲ
ಮಣ್ಣ ದೇವರು ದೇವರಲ್ಲ
ಮರ ದೇವರು ದೇವರಲ್ಲ
ಪಂಚಲೋಹದಲ್ಲಿ ಮಾಡಿದ
ದೇವರು ದೇವರಲ್ಲ

ಸೇತುರಾಮೇಶ್ವರ ಗೋಕರ್ಣ
ಕಾಶಿ ಕೇದಾರ ಮೊದಲಾಗಿ
ಅಷ್ಟಾಷಷ್ಟಿಕೋಟಿ ಪುಣ್ಯಕ್ಷೇತ್ರಂಗಳಲ್ಲಿಹ
ದೇವರು ದೇವರಲ್ಲ

ತನ್ನ ತಾನರಿದು
ತಾನಾರೆಂದು ತಿಳಿದಡೆ
ತಾನೇ ದೇವ ನೋಡಾ
ಅಪ್ರಮಾಣ ಕೂಡಲಸಂಗಮದೇವಾ.

ವ್ಯಕ್ತಿಯು ತನ್ನ ವ್ಯಕ್ತಿತ್ವದ ಇತಿಮಿತಿಗಳನ್ನು ಅರಿತುಕೊಂಡು, ತನಗೆ ಮತ್ತು ತನ್ನ ಕುಟುಂಬಕ್ಕೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಾದರೆ, ಆತನೇ ದೇವರಾಗುತ್ತಾನೆ ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.

ನಮ್ಮ ಜೀವನದಲ್ಲಿ ಆಪತ್ತು ಉಂಟಾದಾಗ ನಮಗೆ ನೆರವನ್ನು ನೀಡಿ ಕಾಪಾಡುವ ವ್ಯಕ್ತಿಯನ್ನು "ನೀವು ನಮ್ಮ ಪಾಲಿಗೆ ದೇವರಾಗಿ ಬಂದಿರಿ/ನೀವೇ ನಮ್ಮ ದೇವರು" ಎಂಬ ಮಾತನ್ನು ನಾವೆಲ್ಲರೂ ನಮ್ಮ ಜೀವನದಲ್ಲಿ ಒಂದಲ್ಲ ಒಂದು ಸಾರಿ ಆಡುತ್ತಿರುತ್ತೇವೆ. ಈ ಹಿನ್ನೆಲೆಯಲ್ಲಿ ಒಳ್ಳೆಯ ನಡೆನುಡಿಗಳಿಂದ ಜನಸಮುದಾಯಕ್ಕೆ ಒಳಿತನ್ನು ಮಾಡುವ ವ್ಯಕ್ತಿಯನ್ನು ದೇವರಂತೆ ಕಾಣುವ ಜನಪದರ ನಂಬಿಕೆಯನ್ನು, "ತಾನೇ ದೇವ ನೋಡಾ" ಎಂಬ ಮಾತುಗಳು ಸೂಚಿಸುತ್ತಿವೆ.

(ಕಲ್ಲ್+ಅ; ಕಲ್ಲು=ಬಂಡೆ/ಶಿಲೆ/ಅರೆ; ಕಲ್ಲ=ಕಲ್ಲಿನ/ಕಲ್ಲಿನಿಂದ ಮಾಡಿರುವ; ದೇವರು=ಜೀವನದಲ್ಲಿ ಬರುವ ಎಡರು ತೊಡರುಗಳನ್ನು ನಿವಾರಿಸಿ, ತಮಗೆ ಒಳಿತನ್ನು ಮಾಡಿ ಕಾಪಾಡುವ ವ್ಯಕ್ತಿಯನ್ನು 'ದೇವರು' ಎಂದು ಮಾನವ ಸಮುದಾಯ ನಂಬಿದೆ;

ಕಲ್ಲ ದೇವರು=ಕಲ್ಲಿನಲ್ಲಿ ಶಿಲ್ಪಿಯು ಕಡೆದಿರುವ ದೇವರ ವಿಗ್ರಹ/ಉಳಿ ಮತ್ತು ಸುತ್ತಿಗೆಯಿಂದ ಶಿಲೆಯನ್ನು ಕೆತ್ತಿ ಕೊರೆದು ಮಾಡಿರುವ ದೇವರ ವಿಗ್ರಹ; ದೇವರ್+ಅಲ್ಲ; ಮಣ್ಣ್+ಅ; ಮಣ್ಣ=ಮಣ್ಣಿನಿಂದ ಮಾಡಿರುವ; ಮಣ್ಣ ದೇವರು=ಮಣ್ಣಿನಿಂದ ಮಾಡಿರುವ ದೇವರು/ಮಣ್ಣಿನ ಹಸಿಮುದ್ದೆಯನ್ನು ಮಿದ್ದಿ ತಿದ್ದಿ ತೀಡಿ ಮಾಡಿರುವ ದೇವರ ವಿಗ್ರಹ;

ಪಂಚ=ಅಯ್ದು; ಲೋಹ=ಕಬ್ಬಿಣ, ತಾಮ್ರ, ಚಿನ್ನ, ಕಂಚು, ಹಿತ್ತಾಳೆ ಮುಂತಾದ ವಸ್ತುಗಳು; ಪಂಚಲೋಹ=ತಾಮ್ರ, ಹಿತ್ತಾಳೆ, ತವರ, ಸೀಸ, ಕಬ್ಬಿಣ ಎಂಬ ಅಯ್ದು ಬಗೆಯ ಲೋಹಗಳು; ಪಂಚಲೋಹದಲ್ಲಿ ಮಾಡಿದ ದೇವರು=ಅಯ್ದು ಬಗೆಯ ಲೋಹಗಳನ್ನು ಕಾಯಿಸಿ/ಕುದಿಸಿ/ಕರಗಿಸಿ ಎರಕ ಹೊಯ್ದು ಮಾಡಿರುವ ದೇವರ ವಿಗ್ರಹ;

ಸೇತು=ನೀರಿನಿಂದ ತುಂಬಿ ಹರಿಯುತ್ತಿರುವ ನದಿ/ಹಳ್ಳ/ತೊರೆಗಳಲ್ಲಿ ಒಂದು ದಡದಿಂದ ಮತ್ತೊಂದು ದಡಕ್ಕೆ ಹಾದುಹೋಗುವುದಕ್ಕಾಗಿ ಅವುಗಳ ಮೇಲೆ ಕಟ್ಟಿರುವ ಸೇತುವೆ; ರಾಮೇಶ್ವರ=ತಮಿಳುನಾಡು ರಾಜ್ಯದ ಪೂರ್ವ ತೀರದಲ್ಲಿ ಬಂಗಾಳ ಕೊಲ್ಲಿ ಮತ್ತು ಹಿಂದೂ ಮಹಾಸಾಗರಗಳು ಕೂಡಿರುವ ನೆಲೆಯ ದಡದಲ್ಲಿರುವ ಒಂದು ಪಟ್ಟಣ. ಈ ಪಟ್ಟಣದ ದೇವಾಲಯದಲ್ಲಿರುವ ಶಿವಲಿಂಗವನ್ನು 'ರಾಮಲಿಂಗ/ರಾಮೇಶ್ವರ' ಎಂಬ ಹೆಸರಿನಿಂದ ಕರೆಯುತ್ತಾರೆ;

ಸೇತುರಾಮೇಶ್ವರ=ಈ ಪಟ್ಟಣದ ಬಗ್ಗೆ ವಾಲ್ಮೀಕಿ ರಾಮಾಯಣದಲ್ಲಿನ ಪ್ರಸಂಗವೊಂದು ಜನಮನದಲ್ಲಿ ನೆಲೆಸಿದೆ. ರಾವಣನ ಸೆರೆಯಲ್ಲಿದ್ದ ಸೀತೆಯನ್ನು ಬಿಡಿಸಿಕೊಂಡು ಬರಲು ಲಂಕೆಗೆ ವಾನರಸೇನೆಯೊಡನೆ ರಾಮನು ಹೊರಡುವಾಗ, ಹಿಂದೂ ಮಹಾಸಾಗರವನ್ನು ದಾಟಲೆಂದು ಸೇತುವೆಯನ್ನು ಕಟ್ಟಲು ತನ್ನ ಬಿಲ್ಲಿನ ತುದಿಯಿಂದ ಇಲ್ಲಿ ಜಾಗವನ್ನು ಗುರುತುಹಾಕಿದನೆಂಬ

ದಂತಕತೆಯು ಜನರ ಮಾತುಕತೆಯಲ್ಲಿ ಕಂಡುಬರುತ್ತದೆ. ಆದುದರಿಂದ ಈ ಊರಿಗೆ 'ಸೇತುರಾಮೇಶ್ವರ' ಎಂಬ ಹೆಸರು ಬಂದಿದೆ;

ಗೋಕರ್ಣ=ಕರ್ನಾಟಕ ರಾಜ್ಯದ ಉತ್ತರ ಕನ್ನಡ ಜಿಲ್ಲೆಯ ಅರಬ್ಬೀ ಸಮುದ್ರದ ದಡದಲ್ಲಿರುವ ಒಂದು ಊರು. ಇಲ್ಲಿರುವ ಶಿವಲಿಂಗವನ್ನು 'ಮಹಾಬಲೇಶ್ವರ/ಆತ್ಮಲಿಂಗ' ಎಂಬ ಹೆಸರಿನಿಂದ ಕರೆಯುತ್ತಾರೆ;

ಕಾಶಿ=ಉತ್ತರ ಪ್ರದೇಶ ರಾಜ್ಯದ ವಾರಣಾಸಿ ಜಿಲ್ಲೆಯಲ್ಲಿ ಗಂಗಾ ತಟದಲ್ಲಿರುವ ಪಟ್ಟಣ. ಈ ಪಟ್ಟಣಕ್ಕೆ 'ವಾರಣಾಸಿ/ಬನಾರಸ್/ಕಾಶಿ' ಎಂಬ ಮೂರು ಬಗೆಯ ಹೆಸರುಗಳಿವೆ. ಇಲ್ಲಿರುವ ಶಿವಲಿಂಗವನ್ನು 'ವಿಶ್ವನಾಥ' ಎಂಬ ಹೆಸರಿನಿಂದ ಕರೆಯುತ್ತಾರೆ;

ಕೇದಾರ=ಹಿಮಾಲಯ ಪರ್ವತ ಶ್ರೇಣಿಯಲ್ಲಿರುವ ಉತ್ತರಕಾಂಡ ರಾಜ್ಯದ ಚಮೋಲಿ ಜಿಲ್ಲೆಯಲ್ಲಿ ಮಂದಾಕಿನಿ ನದಿಯ ದಂಡೆಯ ಮೇಲೆ ಕಟ್ಟಿರುವ ಶಿವನ ದೇವಾಲಯವಿರುವ ನೆಲೆ. ಇಲ್ಲಿನ ಲಿಂಗವನ್ನು 'ಕೇದಾರನಾಥ' ಎಂಬ ಹೆಸರಿನಿಂದ ಕರೆಯುತ್ತಾರೆ;

ಮೊದಲ್+ಆಗಿ; ಮೊದಲಾಗಿ=ಮೊದಲುಗೊಂಡು/ಎಲ್ಲವನ್ನೂ ಒಳಗೊಂಡು; ಅಷ್ಟ=ಎಂಟು; ಷಷ್ಠಿ=ಅರವತ್ತು; ಕೋಟಿ=ಒಂದು ನೂರು 'ಲಕ್ಷ'; ಅಷ್ಟಾಷಷ್ಠಿಕೋಟಿ=ಅರವತ್ತೆಂಟು ಕೋಟಿ/ಎಣಿಕೆಗೆ 'ಸಿಗಲಾರದಷ್ಟು' ಸಂಕೆಯಲ್ಲಿರುವುದು ಎಂಬ ರೂಪಕದ ತಿರುಳಿನಲ್ಲಿ ಬಳಕೆಯಾಗಿರುವ ಪದ;

ಪುಣ್ಯ+ಕ್ಷೇತ್ರಂಗಳ್+ಅಲ್ಲಿ+ಇಹ; ಪುಣ್ಯ=ಮಂಗಳಕರ/ಪವಿತ್ರ/ಪಾವನ; ಕ್ಷೇತ್ರ=ಪ್ರದೇಶ/ಪ್ರಾಂತ್ಯ/ನೆಲೆ/ಜಾಗ; ಪುಣ್ಯಕ್ಷೇತ್ರ=ದೇಗುಲಗಳನ್ನು ಕಟ್ಟಿ, ದೇವರಿಗೆ ಪ್ರತಿದಿನವೂ ಬಹುಬಗೆಯ ಪೂಜೆಯ ಆಚರಣೆಗಳು ನಡೆಯುತ್ತಿರುವ ನೆಲೆ, ಇಂತಹ ನೆಲೆಗೆ ಬಂದು ದೇವರ ದರ್ಶನ ಮತ್ತು ಪೂಜೆಗಳಲ್ಲಿ ತೊಡಗುವವರಿಗೆ ಜೀವನದಲ್ಲಿನ ಎಲ್ಲಾ ಬಗೆಯ ಎಡರು ತೊಡರುಗಳು ನಿವಾರಣೆಗೊಂಡು, ಅವರ ಬಯಕೆಗಳು ಈಡೇರಿ ಒಳಿತಾಗುವುದೆಂಬ ನಂಬಿಕೆಯು ಜನಮನದಲ್ಲಿದೆ; ಪುಣ್ಯಕ್ಷೇತ್ರಂಗಳಲ್ಲಿ=ಪುಣ್ಯಕ್ಶೇತ್ರಗಳಲ್ಲಿ; ಇಹ=ಇರುವ/ನೆಲೆಗೊಂಡಿರುವ;

ತನ್ನ=ತನ್ನನ್ನು ; ತಾನ್+ಅರಿದು; ತಾನು=ವ್ಯಕ್ತಿಯು; ಅರಿ=ತಿಳಿ/ಕಲಿ; ಅರಿದು= ತಿಳಿದುಕೊಂಡು; ತಾನ್+ಆರ್+ಎಂದು; ಆರ್=ಯಾರು; ತಾನಾರು=ತಾನು ಯಾರು; ತಿಳಿ=ಅರಿ/ಕಲಿ/ಗ್ರಹಿಸು; ತಿಳಿದಡೆ=ಮನದಟ್ಟು ಮಾಡಿಕೊಂಡರೆ/ ಅರಿತುಕೊಂಡರೆ/ಗ್ರಹಿಸಿಕೊಂಡರೆ;

"ತನ್ನ ತಾನರಿದು ತಾನಾರೆಂದು ತಿಳಿಯುವುದು" ಎಂದರೆ ಪ್ರತಿಯೊಬ್ಬ ಮಾನವನು ತಾನು ಹುಟ್ಟಿ ಬೆಳೆದು ಬಾಳುವ ಪರಿಸರದಲ್ಲಿರುವ ನಿಸರ್ಗದಲ್ಲಿನ ಏರಿಳಿತಗಳಿಗೆ ಮತ್ತು ಸಮಾಜದ ಕಟ್ಟುಪಾಡುಗಳಿಗೆ ಒಳಪಟ್ಟು ವ್ಯವಹರಿಸುತ್ತಿರುತ್ತಾನೆ. ಇದರಿಂದಾಗಿ ಮಾನವ ಜೀವಿಯ ಮಯ್‍ಮನ ಸದಾಕಾಲ ಒಳಿತು ಕೆಡುಕಿನ ಇಬ್ಬಗೆಯ ತೊಳಲಾಟದಲ್ಲಿ ಸಿಲುಕಿರುತ್ತದೆ ಎಂಬ ವಾಸ್ತವವನ್ನು ಅರಿತುಕೊಂಡು, ಕೆಡುಕಿನ ಒಳಮಿಡಿತಗಳನ್ನು ಹತ್ತಿಕ್ಕಿ, ಒಳ್ಳೆಯ ನಡೆನುಡಿಗಳಿಂದ ತನಗೆ ಮತ್ತು ತನ್ನ ಕುಟುಂಬಕ್ಕೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕೆಂಬ ಅರಿವನ್ನು ಹೊಂದಿರುವುದು;

ತಾನೇ=ವ್ಯಕ್ತಿಯೇ/ಅವನೇ; ನೋಡು+ಆ; ನೋಡು=ಕಾಣು/ತಿಳಿ; ತಾನೇ ದೇವ ನೋಡಾ=ಒಳ್ಳೆಯ ನಡೆನುಡಿಗಳಿಂದ ಬಾಳುವವನೇ ದೇವರಾಗಿ ಕಂಡುಬರುತ್ತಾನೆ/ಗೋಚರಿಸುತ್ತಾನೆ;

ಅಪ್ರಮಾಣ=ದೊಡ್ಡದಾದ/ಅಳತೆಗೆ ನಿಲುಕದ; ಕೂಡಲ್/ಕೂಡಲು=ಸೇರುವಿಕೆ/ ಜತೆಗೂಡುವುದು; ಸಂಗಮ=ಕೂಡಿಕೊಳ್ಳುವುದು/ಜತೆಗೂಡುವುದು; ಸಂಗಮ=ಬೇರೆ ಬೇರೆಯಾಗಿ ಹರಿಯುತ್ತಿರುವ ಎರಡು ನದಿಗಳು ಒಂದಾಗಿ ಜತೆಗೂಡುವ ಜಾಗ/ನೆಲೆ;

ಕೂಡಲಸಂಗಮ=ಬಿಜಾಪುರ ಜಿಲ್ಲೆಯ ಹುನುಗುಂದ ತಾಲ್ಲೂಕಿಗೆ ಸೇರಿದ ಒಂದು ಊರು. ಇಲ್ಲಿ 'ಕೃಷ್ಣ' ಮತ್ತು 'ಮಲಪ್ರಭಾ' ನದಿಗಳು ಕೂಡುವುದರಿಂದ ಈ ಹೆಸರು ಬಂದಿದೆ. ಇಲ್ಲಿನ ದೇವರನ್ನು 'ಸಂಗಮೇಶ್ವರ/ಸಂಗಮನಾಥ/ ಕೂಡಲಸಂಗಮದೇವ' ಎಂಬ ಹೆಸರಿನಿಂದ ಕರೆಯುತ್ತಾರೆ; ಅಪ್ರಮಾಣ ಕೂಡಲಸಂಗಮದೇವಾ=ವಚನಕಾರ ಬಾಲಸಂಗಯ್ಯನ ವಚನಗಳಲ್ಲಿ ಕಂಡುಬರುವ ಅಂಕಿತನಾಮ.)



# ಬಾಹೂರ ಬೊಮ್ಮಣ್ಣ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಊರು | : | ಬಾಹೂರು,<br>ಮುದ್ದೆಬಿಹಾಳ ತಾಲ್ಲೂಕು,<br>ಬಿಜಾಪುರ ಜಿಲ್ಲೆ. |
| ಕಸುಬು | : | ತೋಟದ ಬೆಳೆಗಾರ/ತೋಟಗಾರಿಕೆ |
| ದೊರೆತಿರುವ ವಚನಗಳು | : | ೪೧ |
| ವಚನಗಳ ಅಂಕಿತನಾಮ | : | ಬ್ರಹ್ಮೇಶ್ವರಲಿಂಗ |

೪೨. ಸದ್ಭಕ್ತಿಯಿಲ್ಲದ ವಿಶ್ವಾಸಹೀನನು
ವಾಚಾರಚನೆಗಳಿಂದ ಮಾತಿನ ಮಾಲೆಯ
ಎಷ್ಟು ನುಡಿದಡೇನು

ಹೆಂಡದಂತೆ
ಮೃತಘಟದಂತೆ
ಶಿಥಿಲಫಳದಂತೆ
ಅದಾರಿಗೆ ಯೋಗ್ಯ

ಸಂಗನ ಬಸವಣ್ಣ ಸಾಕ್ಷಿಯಾಗಿ
ಬ್ರಹ್ಮೇಶ್ವರಲಿಂಗವು ಅವರಲ್ಲಿ ನಿಲ್ಲನಾಗಿ.

**ಒಳ್ಳೆಯ ನಡೆನುಡಿಗಳಿಲ್ಲದ ವ್ಯಕ್ತಿಯು ಆಡುವ ಸೊಗಸಾದ ಮಾತುಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಯಾವುದೇ ರೀತಿಯ ಪ್ರಯೋಜನವಿಲ್ಲ ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ಸದ್ಭಕ್ತಿ+ಇಲ್ಲದ; ಸದ್ಭಕ್ತಿ=ದೇವರನ್ನು ಪೂಜಿಸಲು/ಒಲಿಸಿಕೊಳ್ಳಲು ವ್ಯಕ್ತಿಯು ಹೊಂದಿರಬೇಕಾದ ಒಳ್ಳೆಯ ನಡೆನುಡಿ; ವಿಶ್ವಾಸ=ನಂಬಿಕೆ/ನಚ್ಚಿಕೆ/ಒಲವು; ಹೀನ=ಕೆಟ್ಟದ್ದು/ಕಳಪೆಯಾದುದು/ಕೀಳಾದುದು; ವಿಶ್ವಾಸಹೀನ=ನಂಬಿಕೆಗೆ ಯೋಗ್ಯನಲ್ಲದ ವ್ಯಕ್ತಿ/ತನ್ನನ್ನು ಒಲಿದವರಿಗೆ ವಂಚನೆಯನ್ನು, ಕೇಡನ್ನು ಬಗೆಯುವ ವ್ಯಕ್ತಿ; ಸದ್ಭಕ್ತಿಯಿಲ್ಲದ ವಿಶ್ವಾಸಹೀನ=ಒಳ್ಳೆಯ ನಡೆನುಡಿಗಳಿಲ್ಲದ ನಂಬಿಕೆದ್ರೋಹಿ;

ವಾಚಾ+ರಚನೆ+ಗಳ್+ಇಂದ; ವಚಿಸು=ಹೇಳು/ನುಡಿ/ವಿವರಿಸು/ವರ್ಣಿಸು; ವಾಚಾ=ನುಡಿಗಳ ರೂಪದಲ್ಲಿ ವಚಿಸಿರುವುದು/ಮಾತುಗಳಲ್ಲಿ ಹೇಳಿರುವುದು; ರಚನೆ=ಕಟ್ಟುವಿಕೆ/ಬರೆಯುವಿಕೆ;

ವಾಚಾರಚನೆ=ಮಾನವನ ಮನಸ್ಸಿಗೆ ಅರಿವು ಮತ್ತು ಆನಂದವನ್ನು ನುಡಿರೂಪದಲ್ಲಿ ನೀಡಲೆಂದು ರಚನೆಗೊಂಡಿರುವ ಕಾವ್ಯ, ನಾಟಕ, ಗದ್ಯ, ಪದ್ಯ, ಶಾಸ್ತ್ರ ಮುಂತಾದ ಹೊತ್ತಿಗೆಗಳು; ಮಾತು=ನುಡಿ/ಸೊಲ್ಲು/ಉಕ್ತಿ/ಹೇಳಿಕೆ; ಮಾಲೆ=ಸಾಲು/ಪಂಕ್ತಿ/ಸರ; ಮಾತಿನ ಮಾಲೆ=ಒಂದೇ ಸಮನೆ ಮಾತನಾಡುತ್ತಿರುವುದು/ಕೇವಲ ಮಾತುಗಾರಿಕೆಯಲ್ಲೇ ತೊಡಗಿರುವುದು; ಎಷ್ಟು=ಯಾವ ಪ್ರಮಾಣದಲ್ಲಿ/ಯಾವ ಸಂಕೆಯಲ್ಲಿ; ನುಡಿದಡೆ+ಏನು; ನುಡಿ= ಹೇಳು/ಮಾತಾಡು; ನುಡಿದಡೆ=ಮಾತನಾಡಿದರೆ/ಹೇಳಿದರೆ; ಏನು=ಯಾವುದು/ ಯಾವ ಪ್ರಯೋಜನ;

ಸದ್ಭಕ್ತಿಯಿಲ್ಲದ ವಿಶ್ವಾಸಹೀನನು ವಾಚಾರಚನೆಗಳಿಂದ ಮಾತಿನ ಮಾಲೆಯ ಎಷ್ಟು ನುಡಿದಡೇನು=ನಿತ್ಯ ಜೀವನದ ವ್ಯವಹಾರಗಳಲ್ಲಿ ಜನರಿಗೆ ಕೇಡನ್ನು ಬಗೆಯುತ್ತಿರುವ ವ್ಯಕ್ತಿಯು ಕವಿಗಳು, ನೀತಿವಂತರು ತಮ್ಮ ಹೊತ್ತಿಗೆಗಳಲ್ಲಿ ಹೇಳಿರುವ ನುಡಿಗಳನ್ನು ಚೆನ್ನಾಗಿ ಕಲಿತುಕೊಂಡು ಸತ್ಯ, ನೀತಿ, ನ್ಯಾಯದ ಪ್ರಸಂಗಗಳನ್ನು ಕೇಳುಗರ ಮನ ಸೆಳೆಯುವಂತೆ ಬಣ್ಣಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಏಕೆಂದರೆ ಹೇಳುತ್ತಿರುವ ವ್ಯಕ್ತಿಯು ತನ್ನ ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳದಿರುವ ಮಾತು ಜನರನ್ನು ವಂಚಿಸುವ ಒಂದು ಹತಾರವಾಗಿ ಮಾತ್ರ ಬಳಕೆಯಾಗುತ್ತದೆ;

ಹೆಂಡದ+ಅಂತೆ; ಹೆಂಡ=ಮತ್ತು ಬರಿಸುವ ಪಾನೀಯ/ ಮಾದಕ ಪಾನೀಯ/ ಅಮಲೇರಿಸುವ ಪಾನೀಯ; ಪಾನೀಯ=ಕುಡಿಯುವ ದ್ರವರೂಪದ ವಸ್ತು; ಅಂತೆ=ಹಾಗೆ/ಆ ರೀತಿ;

ಮೃತ+ಘಟದ+ಅಂತೆ; ಮೃತ=ಸಾವನ್ನಪ್ಪಿರುವ/ಜೀವವಿಲ್ಲದ/ಮರಣ ಹೊಂದಿದ; ಘಟ=ದೇಹ/ಶರೀರ/ಮಯ್; ಮೃತಘಟ=ಹೆಣ/ಶವ;

ಶಿಥಿಲ+ಫಳದ+ಅಂತೆ; ಶಿಥಿಲ=ಹಾಳಾದ/ಕೊಳೆತು ನಾರುತ್ತಿರುವ; ಫಳ/ ಫಲ=ಹಣ್ಣು; ಶಿಥಿಲಫಳ=ಹೆಚ್ಚು ಕಾಲ ಇಟ್ಟಿದ್ದರಿಂದ ಕೊಳೆತು ನಾರುತ್ತಿರುವ ಹಣ್ಣು; ಅದು+ಆರಿಗೆ; ಅದು=ಈ ರೀತಿ ಕೆಟ್ಟಿರುವ/ಹಾಳಾಗಿರುವ ವಸ್ತು; ಆರು=ಯಾರು/ಯಾವ ವ್ಯಕ್ತಿ; ಆರಿಗೆ=ಯಾರಿಗೆ/ಯಾವ ವ್ಯಕ್ತಿಗೆ; ಯೋಗ್ಯ=ಹಿತವಾದುದು/ಸರಿಯಾದುದು/ತಕ್ಕುದಾದುದು;

ಹೆಂಡದಂತೆ ಮೃತಘಟದಂತೆ ಶಿಥಿಲಫಲದಂತೆ ಅದಾರಿಗೆ ಯೋಗ್ಯ=ಕುಡಿದಾಗ ಅಮಲು ಏರಿ ವ್ಯಕ್ತಿಯು ತನ್ನ ಮಯ್ ಮನದ ಮೇಲಣ ಹಿಡಿತವನ್ನು ಕಳೆದುಕೊಂಡು ಕೆಟ್ಟ ರೀತಿಯಲ್ಲಿ ನಡೆದುಕೊಳ್ಳುವುದಕ್ಕೆ ಕಾರಣವಾಗುವ ಹೆಂಡ; ಉಸಿರಿಲ್ಲದೆ ಚಲನವಲನಗಳನ್ನು ಕಳೆದುಕೊಂಡು ಬಿದ್ದಿರುವ ಹೆಣ; ಕೊಳೆತು ನಾರುತ್ತ ತಿನ್ನುವುದಕ್ಕೆ ಆಗದಿರುವ ಹಣ್ಣು-ಇವು ಹೇಗೆ ಯಾರೊಬ್ಬರಿಗೂ ಬೇಕಾಗಿಲ್ಲವೋ, ಹಿತವನ್ನುಂಟುಮಾಡುವುದಿಲ್ಲವೋ ಅಂತೆಯೇ ನಂಬಿಕೆದ್ರೋಹಿಯಾದ ವ್ಯಕ್ತಿಯು ಆಡುವ ನೀತಿಯ ನುಡಿಗಳು ಸಹಮಾನವರಿಗಾಗಲಿ ಇಲ್ಲವೇ ಸಮಾಜಕ್ಕಾಗಲಿ ಬೇಕಾಗಿಲ್ಲ. ಏಕೆಂದರೆ ಅಂತಹ ಮಾತುಗಳ ಹಿಂದೆ ಜನರಿಗೆ ಕೇಡನ್ನು ಬಗೆದು, ಆಸ್ತಿಪಾಸ್ತಿ, ಒಡವೆವಸ್ತು, ಹಣಕಾಸು, ಗದ್ದುಗೆಯನ್ನು ಪಡೆಯಬೇಕೆಂಬ ವಂಚನೆಯ, ಕಪಟದ, ಮೋಸದ, ಕುತಂತ್ರದ ಉದ್ದೇಶವಿರುತ್ತದೆ:

ಸಂಗ=ಕೂಡಲಸಂಗಮದ ನೆಲೆಯಲ್ಲಿರುವ ಲಿಂಗದ ಹೆಸರು/ಶಿವ; ಸಂಗನ ಬಸವಣ್ಣ=ಕೂಡಲಸಂಗನ ನೆಲೆಯಲ್ಲಿ ವ್ಯಕ್ತಿತ್ವವನ್ನು ರೂಪಿಸಿಕೊಂಡ ಶಿವಶರಣ ಬಸವಣ್ಣ; ಸಾಕ್ಷಿ+ಆಗಿ; ಸಾಕ್ಷಿ=ಕಂಡಿದ್ದನ್ನು ಕಂಡಹಾಗೆಯೇ ಹೇಳುವುದು; ಬ್ರಹ್ಮೇಶ್ವರಲಿಂಗ=ಶಿವ/ಈಶ್ವರ/ದೇವರ ಹೆಸರು/ಬಾಹೂರ ಬೊಮ್ಮಣ್ಣನ ವಚನಗಳ ಅಂಕಿತನಾಮ; ಅವರ್+ಅಲ್ಲಿ;

ಅವರು=ನಂಬಿಕೆದ್ರೋಹಿಗಳಾದವರು/ನಡೆನುಡಿ ಬೇರೆ ಬೇರೆಯಾಗಿರುವವರು/ ಆಡುವುದೇ ಒಂದು ಮಾಡುವುದೇ ಮತ್ತೊಂದನ್ನು ಮಯ್ಗೂಡಿಸಿಕೊಂಡವರು; ನಿಲ್ಲನ್+ಆಗಿ; ನಿಲ್ಲು=ನೆಲಸು/ತಂಗು/ಉಳಿದುಕೊಳ್ಳು;

ಸಂಗನ ಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರಲಿಂಗವು ಅವರಲ್ಲಿ ನಿಲ್ಲನಾಗಿ=ನಯವಂಚನೆಯ ನುಡಿಗಳಿಂದ ಜನರನ್ನು ಮರುಳುಗೊಳಿಸಿ ಕೇಡನ್ನು ಬಗೆಯುವ ವ್ಯಕ್ತಿಗಳನ್ನು ದೇವರು ಒಪ್ಪಿಕೊಳ್ಳುವುದಿಲ್ಲ ಎಂಬ ತಿರುಳನ್ನು ಈ ನುಡಿಗಳು ಸೂಚಿಸುತ್ತವೆ. ಏಕೆಂದರೆ ಶಿವಶರಣಶರಣೆಯರ ಪಾಲಿಗೆ ವ್ಯಕ್ತಿಯ ಒಳ್ಳೆಯ ನಡೆನುಡಿಗಳೇ ದೇವರಾಗಿದ್ದವು.)



# ಮಡಿವಾಳ ಮಾಚಿದೇವ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಊರು | : | ಹುಟ್ಟಿದ್ದು ದೇವರ ಹಿಪ್ಪರಗಿ, ಬಿಜಾಪುರ(ಜಿಲ್ಲೆ). ಅನಂತರ ಬಸವಣ್ಣನವರು ಇದ್ದ ಕಲ್ಯಾಣನಗರಕ್ಕೆ ಬಂದು ನೆಲೆಸುತ್ತಾರೆ. |
| ಕಸುಬು | : | ಬಟ್ಟೆಗಳ ಕೊಳೆಯನ್ನು ತೆಗೆದು ಮಡಿಮಾಡುವುದು/ ಬಟ್ಟೆ ಒಗೆಯುವುದು. |
| ದೊರೆತಿರುವ ವಚನಗಳು | : | ೩೩೯ |
| ವಚನಗಳ ಅಂಕಿತನಾಮ | : | ಕಲಿದೇವರದೇವ/ಕಲಿದೇವಯ್ಯ. |

೪೩. ಆಶಾಪಾಶವ ಬಿಟ್ಟಡೇನಯ್ಯಾ
ರೋಷಪಾಶವ ಬಿಡದನ್ನಕ್ಕರ

ರೋಷಪಾಶವ ಬಿಟ್ಟಡೇನಯ್ಯಾ
ಮಾಯಾಪಾಶವ ಬಿಡದನ್ನಕ್ಕರ

ಇಂತೀ ತ್ರಿವಿಧ ಪಾಶವ ಹರಿದು
ನಿಜನಿಂದ ಲಿಂಗೈಕ್ಯರ ತೋರಾ ಕಲಿದೇವರದೇವಾ.

**ವ್ಯಕ್ತಿಯು ತನ್ನ ಮನದಲ್ಲಿ ಮೂಡುವ ಆಸೆ, ಕೋಪ, ಮೋಹದ ಒಳಮಿಡಿತಗಳೆಲ್ಲವನ್ನೂ ಒಟ್ಟಾಗಿ ಹತೋಟಿಯಲ್ಲಿಟ್ಟುಕೊಂಡಾಗ ಮಾತ್ರ ಜೀವನದಲ್ಲಿ ಒಳ್ಳೆಯ ನಡೆನುಡಿಗಳನ್ನು ರೂಪಿಸಿಕೊಳ್ಳಲು ಆಗುತ್ತದೆ ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ಆಶಾ=ಆಸೆ/ಬಯಕೆ/ಇಚ್ಚೆಸಿದ್ದನ್ನು ಪಡೆಯಬೇಕೆಂಬ ಹಂಬಲ; ಪಾಶ=ಹಗ್ಗ/ಬಲೆ/ಜಾಲ/ನೇಣಿನ ಕುಣಿಕೆ/ಪ್ರಾಣಿಗಳನ್ನು ಮತ್ತು ಹಕ್ಕಿಗಳನ್ನು ಹಿಡಿಯಲು ನೂಲಿನಿಂದ ಹೆಣೆದು ಮಾಡಿರುವ ವಸ್ತು; ಆಶಾಪಾಶ=ಆಶೆಯೆಂಬ ಬಲೆ. ವ್ಯಕ್ತಿಯ ಮನದಲ್ಲಿ ಮೂಡುವ ಆಸೆಗಳಲ್ಲಿ 'ಒಳ್ಳೆಯ ಆಸೆ' ಮತ್ತು 'ಕೆಟ್ಟ ಆಸೆ' ಗಳೆಂಬ ಎರಡು ಬಗೆಗಳಿವೆ.

'ಒಳ್ಳೆಯ ಆಸೆ' ಎಂಬುದು ವ್ಯಕ್ತಿಗೆ ಒಲವು ನಲಿವನ್ನು ತಂದುಕೊಡುವುದರ ಜತೆಗೆ ಇತರರಿಗೂ ಒಳಿತನ್ನು ಉಂಟುಮಾಡುವಂತೆ ಇರುತ್ತದೆ.

'ಕೆಟ್ಟ ಆಸೆ' ಎಂಬುದು ವ್ಯಕ್ತಿಯ ಮನದ ಹಂಬಲವನ್ನು ಈಡೇರಿಸಿದರೂ, ಅದರಿಂದ ಇತರರಿಗೆ ಕೇಡು ತಟ್ಟುತ್ತದೆ. ಆದ್ದರಿಂದ ವ್ಯಕ್ತಿಯು ಕೆಟ್ಟ ಆಸೆಯ ಬಲೆಗೆ ಬೀಳಬಾರದು;

ಬಿಟ್ಟಡೆ+ಏನ್+ಅಯ್ಯಾ; ಬಿಡು=ತೊರೆ/ತ್ಯಜಿಸು/ಕಳಚು; ಬಿಟ್ಟಡೆ=ಬಿಟ್ಟರೆ/ತೊರೆದರೆ/ತ್ಯಜಿಸದರೆ; ಏನ್=ಯಾವುದು; ಅಯ್ಯಾ=ಇತರರನ್ನು ಒಲವು

ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ; ಏನಯ್ಯಾ= ಪ್ರಯೋಜನವೇನು/ಪರಿಣಾಮವೇನು;

ರೋಷ=ಕೋಪ/ಸಿಟ್ಟು/ಮುನಿಸು/ಆಕ್ರೋಶ; ಬಿಡದ+ಅನ್ನಕ್ಕರ; ಬಿಡದ= ತೊರೆಯದ/ತ್ಯಜಿಸದ/ದೂರ ಮಾಡದ; ಅನ್ನಕ್ಕರ=ವರೆಗೆ/ಆ ತನಕ/ ಅಲ್ಲಿಯವರೆಗೆ/ಅಲ್ಲಿಯ ತನಕ;

ಆಶಾಪಾಶವ ಬಿಟ್ಟಡೇನಯ್ಯಾ ರೋಷಪಾಶವ ಬಿಡದನ್ನಕ್ಕರ=ವ್ಯಕ್ತಿಯು ಕೆಟ್ಟ ಆಸೆಗಳನ್ನು ಬಿಡುವುದರ ಜತೆಗೆ, ಮನದಲ್ಲಿ ಕೆರಳುವ ಕೋಪತಾಪದ ನಡೆನುಡಿಗಳನ್ನು ಹತೋಟಿಯಲ್ಲಿಟ್ಟುಕೊಂಡು ಬಾಳಬೇಕು. ಕೆಟ್ಟ ಆಸೆಗಳ ಜತೆಗೆ ಕೆಟ್ಟ ಕೋಪವನ್ನು ಬಿಡದಿದ್ದರೆ ಜೀವನದಲ್ಲಿ ಒಳಿತನ್ನು ಪಡೆಯಲಾಗುವುದಿಲ್ಲ;

ಮಾಯಾ=ಮಾಯೆ/ವ್ಯಕ್ತಿಯ ಮಯ್ ಮನದಲ್ಲಿ ಆಸೆಯನ್ನು ಕೆರಳಿಸಿ ತನ್ನತ್ತ ಸೆಳೆಯುವ ವಸ್ತು, ಜೀವಿ, ವ್ಯಕ್ತಿಗಳು; ಮಾಯಾಪಾಶ=ವ್ಯಕ್ತಿಯು ತಾನು ಪಡೆಯಲು ಹಂಬಲಿಸುತ್ತಿರುವ ವಸ್ತು, ಜೀವಿ, ವ್ಯಕ್ತಿಯನ್ನು ತನ್ನದನ್ನಾಗಿಸಿ ಕೊಳ್ಳಲು ಹೆಣಗುತ್ತಿರುವುದು/ಸೆಣೆಸುತ್ತಿರುವುದು;

ರೋಷಪಾಶವ ಬಿಟ್ಟಡೇನಯ್ಯಾ ಮಾಯಾಪಾಶವ ಬಿಡದನ್ನಕ್ಕರ=ವ್ಯಕ್ತಿಯು ತನ್ನನ್ನು ತೀವ್ರವಾಗಿ ಸೆಳೆಯುತ್ತಿರುವ ವಸ್ತು, ಜೀವಿ, ವ್ಯಕ್ತಿಗಳನ್ನು ಮನಸ್ಸಿನಿಂದ ಹೊರಹಾಕದೆ, ಕೇವಲ ಕೋಪವನ್ನು ತ್ಯಜಿಸಿದ ಮಾತ್ರದಿಂದಲೇ ಒಳಿತಿನ ನಡೆನುಡಿಗಳನ್ನು ರೂಪಿಸಿಕೊಳ್ಳಲು ಆಗುವುದಿಲ್ಲ;

ಇಂತು+ಈ; ಇಂತು=ಈ ರೀತಿ/ಬಗೆ; ತ್ರಿ=ಮೂರು; ವಿಧ=ಬಗೆ/ರೀತಿ; ಈ ತ್ರಿವಿಧ ಪಾಶ=(೧) ಕೆಟ್ಟ ಆಸೆ. (೨) ಕೋಪದ ನಡೆನುಡಿ. (೩) ವಸ್ತು, ಜೀವಿ, ವ್ಯಕ್ತಿಗಳ ಬಗೆಗಿನ ಮೋಹ; ಹರಿ=ಕೀಳು/ಕತ್ತರಿಸು; ನಿಜ=ದಿಟ/ ವಾಸ್ತವ/ಸತ್ಯ; ನಿಜನಿಂದ=ದಿಟದ/ಸತ್ಯದ ನಡೆನುಡಿಗಳಿಂದ ಬಾಳುತ್ತಿರುವುದು; ಲಿಂಗ=ಶಿವ/ದೇವರು; ಐಕ್ಯ=ಒಂದಾಗು/ಒಟ್ಟಾಗು/ಕೂಡಿಕೊಳ್ಳುವುದು; ಲಿಂಗೈಕ್ಯರು=ಒಳ್ಳೆಯ ನಡೆನುಡಿಗಳಿಂದ ಶಿವನನ್ನು ಒಲಿದವರು/

ಪೂಜಿಸುತ್ತಿರುವವರು; ತೋರು=ಕಾಣುವಂತೆ ಮಾಡು; ಕಲಿದೇವರದೇವಾ=ಶಿವ/ಈಶ್ವರ/ಮಡಿವಾಳ ಮಾಚಿದೇವನ ವಚನಗಳ ಅಂಕಿತನಾಮ;

ಇಂತೀ ತ್ರಿವಿಧಪಾಶವ ಹರಿದು ನಿಜನಿಂದ ಲಿಂಗೈಕ್ಯರ ತೋರಾ=ತಮ್ಮ ನಿಜ ಜೀವನದಲ್ಲಿ ಕೆಟ್ಟ ಆಸೆಗಳನ್ನು ಬಿಟ್ಟು, ಕೋಪತಾಪಗಳನ್ನು ಹತೋಟಿಯಲ್ಲಿಟ್ಟುಕೊಂಡು, ಮನದಲ್ಲಿ ಮೂಡುವ ಮೋಹದ ಒಳಮಿಡಿತಗಳನ್ನು ತೊರೆದು ಬಾಳುತ್ತಿರುವ ಗುಣವಂತರನ್ನು ನನಗೆ ತೋರಿಸು ಎಂದು ವಚನಕಾರನು ದೇವರಲ್ಲಿ ಮೊರೆಯಿಡುತ್ತಿದ್ದಾನೆ.)



# ಮೋಳಿಗೆ ಮಾರಯ್ಯ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಊರು | : | ಹುಟ್ಟಿದ್ದು ಕಾಶ್ಮೀರ. ಅನಂತರ ಬಸವಣ್ಣನವರು ಇದ್ದ ಕಲ್ಯಾಣ ನಗರಕ್ಕೆ ಬಂದು ನೆಲೆಸಿದರು. |
| ಕಸುಬು | : | ಕಟ್ಟಿಗೆ/ಸವುದೆಯ ಹೊರೆಯನ್ನು ಹೊತ್ತು ಮಾರುವುದು. (ಮೋಳಿಗೆ=ಸವುದೆಯ ಕಟ್ಟು/ಒಣಗಿದ ಮರದ ಕೊಂಬೆ ರೆಂಬೆಗಳನ್ನು ಸೀಳಿದಾಗ ದೊರೆಯುವ ತುಂಡುಗಳ ಹೊರೆ.) |
| ದೊರೆತಿರುವ ವಚನಗಳು | : | ೮೧೬ |
| ವಚನಗಳ ಅಂಕಿತನಾಮ | : | ನಿಃಕಳಂಕ ಮಲ್ಲಿಕಾರ್ಜುನ |

೪೪. ಕದ್ದ ಕಳವ ಮರೆಸಿಕೊಂಡು
ನಾ ಸಜ್ಜನನೆಂಬಂತೆ

ಇದ್ದ ಗುಣವ ನೋಡಿ
ಹೊದ್ದಿ ಸೋದಿಸಲಾಗಿ

ಕದ್ದ ಕಳವು ಕೈಯಲ್ಲಿದ್ದ
ಮತ್ತೆ ಸಜ್ಜನತನವುಂಟೆ

ಇಂತೀ ಸಜ್ಜನಗಳ್ಳರ ಕಂಡು
ಹೊದ್ದದೆ ಹೋದ
ನಿಃಕಳಂಕ ಮಲ್ಲಿಕಾರ್ಜುನಾ.

**ಸಮಾಜದ ಮತ್ತು ಜನಸಮುದಾಯದ ಸಂಪತ್ತನ್ನು ಲೂಟಿಮಾಡಿ ಸಿರಿವಂತರಾಗಿದ್ದರೂ, ತಮ್ಮನ್ನು ತಾವೇ "ಒಳ್ಳೆಯವರು/ಗುಣವಂತರು/ಸತ್ಯವಂತರು" ಎಂದು ಹೇಳಿಕೊಂಡು ಮೆರೆಯುತ್ತಿರುವ ವ್ಯಕ್ತಿಗಳ ಲಜ್ಜೆಗೇಡಿತನದ ನಡೆನುಡಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ಕಳ್+ದ್+ಅ=ಕಳ್ದ>ಕದ್ದ; ಕಳ್=ಅಪಹರಿಸು/ಲಪಟಾಯಿಸು/ದೋಚು/ಎಗರಿಸು; ಕದ್ದ=ಅಪಹರಿಸಿದ/ದೋಚಿದ/ಲಪಟಾಯಿಸಿದ; ಕಳವ=ಕಳ್ಳತನ ಮಾಡಿದ ಒಡವೆ, ವಸ್ತು, ಸಂಪತ್ತನ್ನು; ಮರೆಸು=ಇತರರ ಕಣ್ಣಿಗೆ ಕಾಣದಂತೆ ಬಚ್ಚಿಡು/ಅಡಗಿಸಿಡು/ಮುಚ್ಚಿಡು; ಮರೆಸಿಕೊಂಡು=ಅಡಗಿಸಿಟ್ಟುಕೊಂಡು/ಬಚ್ಚಿಟ್ಟುಕೊಂಡು/ಮುಚ್ಚಿಟ್ಟುಕೊಂಡು:

ನಾ=ನಾನು; ಸಜ್ಜನನ್+ಎಂಬ+ಅಂತೆ; ಸಜ್ಜನ=ಒಳ್ಳೆಯ ನಡೆನುಡಿಗಳುಳ್ಳ ವ್ಯಕ್ತಿ; ಸಜ್ಜನನ್=ಒಳ್ಳೆಯವನು/ಗುಣವಂತ; ಎಂಬ=ಎನ್ನುವ/ಎಂದು ಹೇಳುವ; ಅಂತೆ=ಹಾಗೆ/ಆ ರೀತಿ/ ಆ ಬಗೆ;

ಕದ್ದ ಕಳವ ಮರೆಸಿಕೊಂಡು ನಾ ಸಜ್ಜನನೆಂಬಂತೆ=ಕದ್ದಿರುವ ಒಡವೆ ವಸ್ತುಗಳನ್ನು ಅಡಗಿಸಿಟ್ಟುಕೊಂಡು, ತಾನೊಬ್ಬ ಒಳ್ಳೆಯ ನಡೆನುಡಿಯುಳ್ಳವನು ಎಂದು ಇತರರ ಮುಂದೆ ಹೇಳಿಕೊಳ್ಳುವ ವ್ಯಕ್ತಿಯು ಜನಸಮುದಾಯದ ಕಣ್ಣಿಗೆ ಮಣ್ಣೆರಚುವ ಪ್ರಯತ್ನದಲ್ಲಿ ತೊಡಗಿರುತ್ತಾನೆ;

ಇರ್+ದ್+ಅ=ಇರ್ದ>ಇದ್ದ; ಇದ್ದ=ಇರುವ; ಗುಣ=ವ್ಯಕ್ತಿಯ ನಡೆನುಡಿಯಲ್ಲಿನ ರೀತಿನೀತಿ; ನೋಡಿ=ಕಂಡು/ತಿಳಿದು; ಹೊದ್ದು=ಹತ್ತಿರಕ್ಕೆ ಹೋಗುವುದು/ಸಮೀಪಿಸುವುದು; ಹೊದ್ದಿ=ಹತ್ತಿರಕ್ಕೆ ಹೋಗಿ; ಸೋದಿಸಲ್+ಆಗಿ; ಶೋಧ>ಸೋದ; ಶೋಧ=ಹುಡುಕುವುದು/ಕಂಡು ಹಿಡಿಯುವುದು/ತಡಕಾಡುವುದು;

ಇದ್ದ ಗುಣವ ನೋಡಿ ಹೊದ್ದಿ ಸೋದಿಸಲಾಗಿ=ತನ್ನನ್ನು ತಾನೇ ಸಜ್ಜನನೆಂದು ಹೇಳಿಕೊಳ್ಳುವ ವ್ಯಕ್ತಿಯ ಮಾತಿನ ದಿಟವನ್ನು ತಿಳಿಯಲೆಂದು, ಅವನ ಹತ್ತಿರಕ್ಕೆ ಹೋಗಿ, ಅವನು ತೊಟ್ಟಿದ್ದ ಬಟ್ಟೆಬರೆಗಳ ಒಳಗು ಹೊರಗನ್ನು ತಡಕಾಡಿ ನೋಡಿದಾಗ; ಕದ್ದ ಕಳವು=ಕಳ್ಳತನ ಮಾಡಿದ್ದ ಒಡವೆ ವಸ್ತು; ಕೈ+ಅಲ್ಲಿ+ಇದ್ದ; ಕೈಯಲ್ಲಿದ್ದ=ಅವನಲ್ಲಿಯೇ ಇತ್ತು/ಅವನ ಬಳಿಯಲ್ಲೇ ಇತ್ತು;

ಮತ್ತೆ=ಮಾಡಿದ್ದ ಕಳ್ಳತನದ ಮಾಲು/ಸರಕು/ವಸ್ತುವಿನ ಸಮೇತ ಸಿಕ್ಕಿಬಿದ್ದ ಮೇಲೆ; ಸಜ್ಜನತನ+ಉಂಟೆ; ಸಜ್ಜನತನ=ಒಳ್ಳೆಯತನ/ಒಳ್ಳೆಯ ವ್ಯಕ್ತಿತ್ವ; ಉಂಟೆ=ಇರುವುದೇ;

ಕದ್ದ ಕಳವು ಕೈಯಲ್ಲಿದ್ದ ಮೇಲೆ ಸಜ್ಜನತನವುಂಟೆ=ಕದ್ದ ಮಾಲು ಅವನ ಬಳಿಯಲ್ಲೇ ಸಿಕ್ಕಿದ ನಂತರವೂ ಅವನಲ್ಲಿ ಒಳ್ಳೆಯತನವನ್ನು ಕಾಣಲು ಆಗುತ್ತದೆಯೇ/ಅವನನ್ನು ಗುಣವಂತನೆಂದು ತಿಳಿಯಬಹುದೇ. ಅಂದರೆ ಆತ ಕಳ್ಳನೆಂಬುದು ದಿಟ;

ಇಂತು+ಈ; ಇಂತು=ಈ ರೀತಿಯಲ್ಲಿ/ಈ ಬಗೆಯಲ್ಲಿ; ಸಜ್ಜನ+ಕಳ್ಳರು; ಸಜ್ಜನಗಳ್ಳರು=ಜನರ ಮುಂದೆ ತಮ್ಮನ್ನು ತಾವೇ ಒಳ್ಳೆಯವರೆಂದು ಹೇಳಿಕೊಳ್ಳುತ್ತ, ನಿಜಜೀವನದಲ್ಲಿ ಸಮಾಜದ ಮತ್ತು ಜನಸಮುದಾಯದ ಸಂಪತ್ತನ್ನು ದೋಚುತ್ತಿರುವ ನೀಚರು, ವಂಚಕರು, ಕೇಡಿಗಳು, ಕ್ರೂರಿಗಳು;

ಕಂಡು=ನೋಡಿ; ಹೊದ್ದದೆ=ಹತ್ತಿರಕ್ಕೆ ಬಾರದೆ; ಹೋದ=ಹೋದನು; ಕಳಂಕ=ಕುಂದು/ಕೊರತೆ/ತಪ್ಪು; ನಿಃಕಳಂಕ=ಯಾವುದೇ ಬಗೆಯ ತಪ್ಪು/ಕೊರತೆ/ಕುಂದುಗಳು ಇಲ್ಲದವನು; ಮಲ್ಲಿಕಾರ್ಜುನಲಿಂಗ=ಶಿವ/ಈಶ್ವರ; ನಿಃಕಳಂಕ ಮಲ್ಲಿಕಾರ್ಜುನಲಿಂಗ=ಮೋಳಿಗೆ ಮಾರಯ್ಯನ ವಚನಗಳ ಅಂಕಿತನಾಮ;

ಇಂತೀ ಸಜ್ಜನಗಳ್ಳರ ಕಂಡು ಹೊದ್ದದೆ ಹೋದ ನಿಃಕಳಂಕ ಮಲ್ಲಿಕಾರ್ಜುನಲಿಂಗ =ಜನಸಮುದಾಯದ ಮತ್ತು ಸಮಾಜದ ಸಂಪತ್ತನ್ನು ದೋಚಿ, ಜನರಿಗೆ ಕೇಡನ್ನು ಬಗೆಯುವ ವ್ಯಕ್ತಿಗಳಿಂದ ದೇವರು ದೂರವಿರುತ್ತಾನೆ.

ಸಮಾಜಕ್ಕೆ ಮತ್ತು ಜನಸಮುದಾಯಕ್ಕೆ ಒಳಿತನ್ನು ಮಾಡುವ ನಡೆನುಡಿಯುಳ್ಳವರಿಗೆ ಮಾತ್ರ ದೇವರು ಒಲಿಯುತ್ತಾನೆ ಎಂಬ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು.)



# ಲಿಂಗಮ್ಮ

ಲಿಂಗಮ್ಮನು ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿದ್ದ ಶಿವಶರಣೆ. ಸಾಹಿತ್ಯ ಚರಿತ್ರೆಕಾರರು ಈಕೆಯು ರಚಿಸಿರುವ ವಚನಗಳನ್ನು "ಹಡಪದಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮನ ಬೋಧೆಯ ವಚನಗಳು" ಎಂದು ಕರೆದು, ಈ ಕೆಳಕಂಡ ವಿವರಣೆಗಳನ್ನು ನಮೂದಿಸಿದ್ದಾರೆ. ಪುಣ್ಯಸ್ತ್ರೀ ಎಂದರೆ ಹೆಂಡತಿ/ಪತ್ನಿ;

ಬೋಧೆ ಎಂದರೆ ಅರಿವು/ತಿಳಿವು/ಕಲಿಸುವಿಕೆ/ತಿಳುವಳಿಕೆ.

ಗಂಡ : ಹಡಪದ ಅಪ್ಪಣ್ಣ.

ದೊರೆತಿರುವ ವಚನಗಳ ಸಂಖ್ಯೆ: ೧೧೪

ವಚನಗಳ ಅಂಕಿತನಾಮ: ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣ.

೪೫. ಕಾಮವಿಲ್ಲ ಕ್ರೋಧವಿಲ್ಲ ಲೋಭವಿಲ್ಲ
ಮೋಹವಿಲ್ಲ ಮದವಿಲ್ಲ ಮತ್ಸರವಿಲ್ಲ
ಎಂಬ ಅಣ್ಣಗಳಿರಾ
ನೀವು ಕೇಳಿರೊ ಹೇಳಿಹೆನು
ಕಾಮವಿಲ್ಲದವಂಗೆ ಕಳವಳವುಂಟೆ
ಕ್ರೋಧವಿಲ್ಲದವಂಗೆ ರೋಷವುಂಟೆ
ಲೋಭವಿಲ್ಲದವಂಗೆ ಆಸೆಯುಂಟೆ
ಮೋಹವಿಲ್ಲದವಂಗೆ ಪಾಶವುಂಟೆ
ಮದವಿಲ್ಲದವಂಗೆ ತಾಮಸವುಂಟೆ
ಮತ್ಸರವಿಲ್ಲದವನು ಮನದಲ್ಲಿ ಮತ್ತೊಂದ ನೆನೆವನೆ
ಇವು ಇಲ್ಲವೆಂದು ಮನವ ಕದ್ದು ನುಡಿವ
ಅಬದ್ಧರ ಮಾತ ಮೆಚ್ಚುವನೆ
ನಮ್ಮ ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣ.

ಹರೆಯಕ್ಕೆ ಕಾಲಿಟ್ಟ ಪ್ರತಿಯೊಂದು ಗಂಡು ಹೆಣ್ಣಿನ ಮಯ್ ಮನದಲ್ಲಿ ನಿಸರ್ಗ ಸಹಜವಾದ ಕಾಮವೆಂಬುದು ತುಡಿಯುತ್ತಿರುತ್ತದೆ. ವ್ಯಕ್ತಿಯು ಹುಟ್ಟಿ ಬೆಳೆಯುವ ಕುಟುಂಬ ಮತ್ತು ಸಮಾಜದಲ್ಲಿನ ಸಂಪ್ರದಾಯಗಳು, ಕಟ್ಟುಪಾಡುಗಳು, ಆಚರಣೆಗಳು, ಆಸ್ತಿಪಾಸ್ತಿ ಹಣಕಾಸುಗಳ ಒಡೆತನ ಮತ್ತು ಹೊಂದಿರುವ ಹುದ್ದೆಗಳು ಮಾನವಜೀವಿಯ ಮನದಲ್ಲಿ "ಕಾಮ, ಕೋಪ, ದುರಾಸೆ, ಮೋಹ, ಮದ, ಮತ್ಸರ" ಎಂಬ ಒಳಮಿಡಿತಗಳು ಮೂಡುವುದಕ್ಕೆ ಕಾರಣವಾಗುತ್ತವೆ.

ಮಾನವಜೀವಿಯ ನಡೆನುಡಿಗಳನ್ನು ನಿಸರ್ಗ ಮತ್ತು ಸಾಮಾಜಿಕ ಸಂಗತಿಗಳ ಹಿನ್ನೆಲೆಯಲ್ಲಿ ನೋಡಿದಾಗ ಸಾವಿನ ಕೊನೆ ಗಳಿಗೆಯ ತನಕ ಪ್ರತಿಯೊಬ್ಬರಲ್ಲಿಯೂ ಈ ಎಲ್ಲಾ ಬಗೆಯ ಒಳಮಿಡಿತಗಳು ಇದ್ದೇ ಇರುತ್ತವೆ. ವ್ಯಕ್ತಿಯು ತನ್ನ ಮತ್ತು ಸಹಮಾನವರ ಒಳಿತಿಗಾಗಿ ಹಾಗೂ ಹೊಂದಾಣಿಕೆಯಿಂದ ಕೂಡಿದ ನೆಮ್ಮದಿಯ

ಬದುಕಿಗಾಗಿ ತನ್ನ ಮಯ್‍ದಲ್ಲಿ ತುಡಿಯುತ್ತಿರುವ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು ಸಮಾಜದ ನೀತಿನಿಯಮಗಳ ಎಲ್ಲೆಯೊಳಗೆ ಬಾಳಲು ಆಗುತ್ತದೆಯೇ ಹೊರತು, ಅಂತಹ ಒಳಮಿಡಿತಗಳೇ "ನನ್ನಲ್ಲಿ ಇಲ್ಲ" ಎಂದು ಹೇಳಲು ಆಗುವುದಿಲ್ಲ.

ಯಾರಾದರೂ "ನನ್ನ ಮಯ್ ಮನದಲ್ಲಿ ಕಾಮ, ಕೋಪ, ದುರಾಸೆ, ಮೋಹ, ಮದ, ಮತ್ಸರ" ಇಲ್ಲವೆಂದು ಹೇಳಿಕೊಂಡು ಮೆರೆದರೆ, ಅಂತಹ ವ್ಯಕ್ತಿಗಳು ತಮ್ಮ ನಯವಾದ ಮಾತುಗಾರಿಕೆಯಿಂದ ಸುಳ್ಳನ್ನೇ ದಿಟವೆಂದು ಜನರು ನಂಬುವಂತೆ ಮಾಡಿ, ಸಮಾಜವನ್ನು ವಂಚಿಸುವ ಕಲೆಯಲ್ಲಿ ಚೆನ್ನಾಗಿ ಪಳಗಿರುತ್ತಾರೆ ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

(ಕಾಮ+ಇಲ್ಲ; ಕಾಮ=ಬಯಕೆ/ಇಚ್ಚೆ/ಆಸೆ/ಗಂಡು ಹೆಣ್ಣಿನ ಮಯ್ ಮನಗಳು ಒಂದನ್ನೊಂದು ಜತೆಗೂಡಲು ಹಂಬಲಿಸುವ ಒಳಮಿಡಿತ; ಇಲ್ಲ=ಗೋಚರಿಸದು/ಕಂಡುಬರದು; ಕ್ರೋಧ+ಇಲ್ಲ; ಕ್ರೋಧ=ರೇಗು/ಸಿಟ್ಟು/ಕೋಪ/ಆಕ್ರೋಶ/ವ್ಯಕ್ತಿಯು ಆಸೆಪಟ್ಟ ವಸ್ತುಗಳು ದೊರೆಯದಿದ್ದಾಗ ಇಲ್ಲವೇ ಆತನ ಎಣಿಕೆಯಂತೆ ಕೆಲಸಗಳು ನಡೆಯದಿದ್ದಾಗ ಮಯ್ ಮನದಲ್ಲಿ ಕೆರಳುವ ಒಳಮಿಡಿತ; ಲೋಭ+ಇಲ್ಲ; ಲೋಭ=ಅತಿಯಾಸೆ/ದುರಾಸೆ/ಜಿಪುಣತನ/ಆಸ್ತಿಪಾಸ್ತಿ ಹಣಕಾಸು ಒಡವೆ ವಸ್ತುಗಳೆಲ್ಲವನ್ನೂ ಹೆಚ್ಚುಹೆಚ್ಚಾಗಿ ಗಳಿಸಿ ಕೂಡಿಡಬೇಕೆಂಬ ಆಸೆ;

ಮೋಹ+ಇಲ್ಲ; ಮೋಹ=ಯಾವುದೇ ಒಂದು ವಸ್ತು, ವ್ಯಕ್ತಿ, ಜಾಗ, ಕೆಲಸದ ಬಗ್ಗೆ ಅತಿಯಾದ ಒಲವು/ಸೆಳೆತಕ್ಕೆ ಒಳಗಾಗಿರುವುದು; ಮದ=ಸೊಕ್ಕು/ದರ್ಪ/ಅಮಲು/ನಾನೇ ಎಲ್ಲವನ್ನೂ ತಿಳಿದವನು–ನಾನೇ ಎಲ್ಲರಿಗಿಂತ ದೊಡ್ಡವನು–ನನ್ನಿಂದಲೇ ಎಲ್ಲವೂ ನಡೆಯುತ್ತಿದೆ ಎಂಬ ಒಳಮಿಡಿತ; ಮತ್ಸರ+ಇಲ್ಲ; ಮತ್ಸರ=ಹೊಟ್ಟೆಕಿಚ್ಚು/ಕರುಬು/ಇತರರಿಗೆ ಉಂಟಾದ ಒಳಿತನ್ನು ಕಂಡು ತನಗೆ ಅಂತಹುದು ದೊರೆಯಲಿಲ್ಲವೆಂಬ ಸಂಕಟದಿಂದ ಮನದಲ್ಲಿ ಕುದಿಯುವ ಒಳಮಿಡಿತ;

ಎಂಬ=ಎನ್ನುವ/ಎಂದು ಹೇಳುವ; ಅಣ್ಣಗಳು=ಸಮಾಜದಲ್ಲಿ ದೊಡ್ಡದೊಡ್ಡ ಗದ್ದುಗೆಯಲ್ಲಿರುವ ವ್ಯಕ್ತಿಗಳು, ಗುರುಹಿರಿಯರು, ಜಾತಿ ಜಗದ್ಗುರುಗಳು, ದೇವಮಾನವರು; ಅಣ್ಣಗಳಿರಾ=ಗುರುಹಿರಿಯರಾದ ವ್ಯಕ್ತಿಗಳನ್ನು ಕುರಿತು ಮಾತನಾಡುವಾಗ ಬಳಸುವ ಪದ; ಕೇಳಿರೊ=ಕೇಳಿಸಿಕೊಳ್ಳಿ; ಹೇಳಿ+ಇಹೆನು; ಇಹೆನು=ಇರುವೆನು; ಹೇಳಿಹೆನು=ಹೇಳುತ್ತಿದ್ದೇನೆ;

ಕಾಮ+ಇಲ್ಲದ+ಅವಂಗೆ; ಅವಂಗೆ=ಅವನಿಗೆ; ಕಾಮವಿಲ್ಲದವಂಗೆ=ಕಾಮವಿಲ್ಲದವನಿಗೆ; ಕಳವಳ+ಉಂಟೆ; ಕಳವಳ=ತಳಮಳ/ಕಸವಿಸಿ/ಚಿಂತೆ/ಏನಾಗುವುದೋ ಎಂಬ ಗಾಬರಿ/ತಲ್ಲಣ; ಉಂಟೆ=ಇರುತ್ತದೆಯೇ/ಇರುವುದೇ; ಕ್ರೋಧ+ಇಲ್ಲದ+ಅವಂಗೆ;

ಕ್ರೋಧವಿಲ್ಲದವಂಗೆ=ಕ್ರೋಧವಿಲ್ಲದವನಿಗೆ; ರೋಷ+ಉಂಟೆ; ರೋಷ=ಸಿಟ್ಟು/ಕೋಪ/ಆಕ್ರೋಶ;

ಲೋಭ+ಇಲ್ಲದ+ಅವಂಗೆ; ಲೋಭವಿಲ್ಲದವಂಗೆ='ಲೋಭವಿಲ್ಲದವನಿಗೆ'; ಆಸೆ+ಉಂಟೆ; ಆಸೆ=ಬಯಕೆ/ಏನನ್ನಾದರೂ ಪಡೆಯಬೇಕೆಂಬ ಹಂಬಲ; ಮೋಹ+ಇಲ್ಲದ+ಅವಂಗೆ; ಮೋಹವಿಲ್ಲದವಂಗೆ=ಮೋಹವಿಲ್ಲದವನಿಗೆ; ಪಾಶ+ಉಂಟೆ; ಪಾಶ=ಹಗ್ಗ/ನೇಣು/ಕೊರಳಿಗೆ ಹಾಕಿ ಎಳೆಯುವ ಕುಣಿಕೆ/ಯಾವುದೇ ವಸ್ತು–ವ್ಯಕ್ತಿ–ಸಂಗತಿಯ ಬಗ್ಗೆ ಅತಿಹೆಚ್ಚಿನ ಸೆಳೆತ/ತುಡಿತ; ಮದ+ಇಲ್ಲದ+ಅವಂಗೆ; ಮದವಿಲ್ಲದವಂಗೆ=ಮದವಿಲ್ಲದವನಿಗೆ; ತಾಮಸ+ಉಂಟೆ; ತಾಮಸ=ಕತ್ತಲೆ/ತಿಳಿವಳಿಕೆಯಿಲ್ಲದಿರುವುದು/ನೀಚತನ/ಕೆಟ್ಟ ನಡೆನುಡಿ;

ಮತ್ಸರ+ಇಲ್ಲದ+ಅವನು; ಮನದ+ಅಲ್ಲಿ; ಮನದಲ್ಲಿ=ಮನಸ್ಸಿನಲ್ಲಿ; ಮತ್ತು+ಒಂದ; ಮತ್ತೊಂದ=ಇನ್ನೊಂದನ್ನು/ಬೇರೆಯುದನ್ನು; ನೆನೆ=ಕಲ್ಪಿಸಿಕೊಳ್ಳುವುದು/ಸ್ಮರಿಸಿಕೊಳ್ಳುವುದು/ಬಯಸುವುದು; ನೆನೆವನೆ=ನೆನೆಯುತ್ತಾನೆಯೇ/ಬಯಸುತ್ತಾನೆಯೇ/ಸ್ಮರಿಸಿಕೊಳ್ಳುತ್ತಾನೆಯೇ;

ಇಲ್ಲ+ಎಂದು; ಇವು ಇಲ್ಲವೆಂದು=ಕಾಮ, ಕೋಪ, ದುರಾಸೆ, ಮೋಹ, ಮದ, ಮತ್ಸರಗಳೆಂಬ ಒಳಮಿಡಿತಗಳು ನನ್ನ ಮಯ್ ಮನದಲ್ಲಿ ಇಲ್ಲವೆಂದು; ಮನವ=ಮನಸ್ಸನ್ನು;

ಮನವ ಕದ್ದು ನುಡಿವ=ಮನದಲ್ಲಿ ಉಂಟಾಗುತ್ತಿರುವ ಒಳಮಿಡಿತಗಳನ್ನು ಮರೆಮಾಚಿ, ಬಹಿರಂಗದಲ್ಲಿ ಅವು ಇಲ್ಲವೆಂದು ಹೇಳುತ್ತಿರುವ/ತನ್ನ ಮನಸ್ಸಿಗೆ ತಾನೇ ವಂಚನೆ ಮಾಡಿಕೊಂಡು ಮಾತನಾಡುತ್ತಿರುವ; ಅಬದ್ಧ=ಸುಳ್ಳು/ದಿಟವಲ್ಲದ/ತಪ್ಪು/ವಾಸ್ತವವಲ್ಲದ; ಬದ್ಧ=ಸತ್ಯ/ದಿಟ/ನಿಜ; ಅಬದ್ಧರು=ಸುಳ್ಳುಗಾರರು/ಕಪಟಿಗಳು/ಮೋಸಗಾರರು/ವಂಚಕರು; ಮಾತ=ಮಾತುಗಳನ್ನು/ನುಡಿಗಳನ್ನು; ಮೆಚ್ಚು=ಒಪ್ಪು/ಸಮ್ಮತಿಸು/ಒಲಿ; ಮೆಚ್ಚುವನೆ=ಮೆಚ್ಚುತ್ತಾನೆಯೆ/ಮೆಚ್ಚಿಕೊಳ್ಳುತ್ತಾನೆಯೆ;

ಅಪ್ಪಣ್ಣ=ಶಿವಶರಣೆ ಲಿಂಗಮ್ಮನ ಗಂಡ; ಅಪ್ಪಣ್ಣಪ್ರಿಯ=ಅಪ್ಪಣ್ಣನಿಗೆ ಪ್ರಿಯನಾದ/ಆಪ್ತನಾದ/ಒಲವಿಗೆ ಪಾತ್ರನಾದ; ಚೆನ್ನಬಸವಣ್ಣ=ಹನ್ನೆರಡನೆಯ ಶತಮಾನದಲ್ಲಿದ್ದ ಒಬ್ಬ ಶಿವಶರಣ; ಅಪ್ಪಣ್ಣಪ್ರಿಯ ಚೆನ್ನಬಸವಣ್ಣ=ಲಿಂಗಮ್ಮನು ರಚಿಸಿದ ವಚನಗಳಲ್ಲಿ ಬಳಕೆಯಾಗಿರುವ ಅಂಕಿತನಾಮ;

ಅಬದ್ಧರ ಮಾತ ಮೆಚ್ಚುವನೆ ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ=ಮನದೊಳಗಿನ ಬಹುಬಗೆಯ ಒಳಮಿಡಿತಗಳನ್ನು ಮುಚ್ಚಿಟ್ಟುಕೊಂಡು, ಜನರನ್ನು ವಂಚಿಸುತ್ತಾ, ಸುಳ್ಳನ್ನಾಡುವ ಕಪಟ ವ್ಯಕ್ತಿಗಳನ್ನು ಒಪ್ಪಿಕೊಳ್ಳಬಾರದೆಂಬ, ಅಂತಹ ನೀಚ ವ್ಯಕ್ತಿಗಳಿಂದ ದೂರವಿರಬೇಕೆಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ.

ಯಾವುದೇ ಒಬ್ಬ ವ್ಯಕ್ತಿಯು ಸಂಸಾರಿಯಾಗಿರಲಿ ಇಲ್ಲವೇ ಸಂನ್ಯಾಸಿಯಾಗಿರಲಿ ಇಲ್ಲವೇ ಮತ್ತೇನೆ ಆಗಿದ್ದರೂ ತನ್ನ ಜೀವನದ ಉದ್ದಕ್ಕೂ ಒಂದಲ್ಲ ಒಂದು ಕಾರಣದಿಂದಾಗಿ ಬಹುಬಗೆಯ ಒಳಮಿಡಿತಗಳಿಂದ ಪರಿತಪಿಸುತ್ತಿರುತ್ತಾನೆ. ಬೀಸುತ್ತಿರುವ ಗಾಳಿಯ ಹೊಡೆತಕ್ಕೆ ತಕ್ಕಂತೆ ಕಡಲಿನಲ್ಲಿ ನೀರಿನ ಅಲೆಗಳು ಹೇಗೆ ಸದಾಕಾಲ ಹಿಂದಕ್ಕೂ ಮುಂದಕ್ಕೂ ಚಲಿಸುತ್ತಾ, ಒಂದಲ್ಲ ಒಂದು ರೀತಿಯಲ್ಲಿ ಏರಿಳಿತಕ್ಕೆ ಒಳಗಾಗುತ್ತಿರುತ್ತವೆಯೋ ಅಂತೆಯೇ ಮಾನವ ಜೀವಿಯ ಮನದಲ್ಲಿ ಒಳಮಿಡಿತಗಳು ನಿರಂತರವಾಗಿ ತುಡಿಯುತ್ತಿರುತ್ತವೆ ಎಂಬ ವಾಸ್ತವವನ್ನು ಈ ವಚನ ತಿಳಿಸುತ್ತದೆ.)



# ಷಣ್ಮುಖಸ್ವಾಮಿ

| | | |
|---|---|---|
| ಕಾಲ | : | ಕ್ರಿ.ಶ.೧೬೩೯ ರಿಂದ ೧೭೧೧ |
| ಗುರು | : | ಅಖಂಡೇಶ್ವರ |
| ಊರು | : | ಜೇವರಗಿ ಪಟ್ಟಣ, ಗುಲ್ಬರ್ಗಾ ಜಿಲ್ಲೆ. |
| ದೊರೆಕಿರುವ ವಚನಗಳು | : | ೭೧೭ |
| ವಚನಗಳ ಅಂಕಿತನಾಮ | : | ಅಖಂಡೇಶ್ವರ |

೪೬. ತನ್ನ ಎಡೆಯಲ್ಲಿ
ಕತ್ತೆ ಸತ್ತು ಬಿದ್ದುದನರಿಯದೆ
ಪರರೆಡೆಯಲ್ಲಿ
ನೊಣವನರಸುವ ಮರುಳ ಮಾನವನಂತೆ

ತನ್ನಂಗ ಮನದ ಅವಗುಣಂಗಳ
ತೊಲಗಿ ನೂಕಲರಿಯದೆ
ಅನ್ಯರಲ್ಲಿ ಅವಗುಣವ
ಸಂಪಾದನೆಯ ಮಾಡುವ
ಕುನ್ನಿಗಳ ಎನಗೊಮ್ಮೆ ತೋರದಿರಯ್ಯ
ಅಖಂಡೇಶ್ವರಾ.

**ತಮ್ಮ ನಡೆನುಡಿಯಲ್ಲಿನ ತಪ್ಪುಗಳನ್ನು, ನೀಚತನವನ್ನು, ಕೆಟ್ಟತನವನ್ನು ಮುಚ್ಚಿಟ್ಟುಕೊಂಡು, ಇತರರ ಸಣ್ಣಪುಟ್ಟ ತಪ್ಪುಗಳನ್ನೇ ದೊಡ್ಡದು ಮಾಡಿ ಆಡಿಕೊಳ್ಳುವ ವ್ಯಕ್ತಿಗಳ ತಿಳಿಗೇಡಿತನದ ವರ್ತನೆಯನ್ನು ಈ ವಚನದಲ್ಲಿ ಕಟುವಾಗಿ ಟೀಕಿಸಲಾಗಿದೆ.**

(ತನ್ನ=ತನಗೆ ಸೇರಿದ/ತನ್ನ ಮುಂದೆ ಇರುವ; ಎಡೆ+ಅಲ್ಲಿ; ಎಡೆ=ಊಟದ ತಟ್ಟೆ ಇಲ್ಲವೇ ಎಲೆ/ಅಗಲು/ಜಾಗ/ನೆಲೆ; ಎಡೆಯಲ್ಲಿ=ಅಗಲಿನಲ್ಲಿ/ಊಟದ ಎಲೆಯಲ್ಲಿ/ತಟ್ಟೆಯಲ್ಲಿ; ತನ್ನ ಎಡೆಯಲ್ಲಿ=ತಾನು ಇರುವ ಜಾಗದಲ್ಲಿ/ನೆಲೆಯಲ್ಲಿ; ಕತ್ತೆ=ಒಂದು ಪ್ರಾಣಿ; ಸತ್ತು=ಸಾವನ್ನಪ್ಪಿ/ಜೀವ ಕಳೆದುಕೊಂಡು/ಮರಣ ಹೊಂದಿ; ಬಿದ್ದುದನ್+ ಅರಿಯದೆ;ಬಿದ್ದುದನ್=ಬಿದ್ದಿರುವುದನ್ನು; ಅರಿ=ತಿಳಿಯುವುದು; ಅರಿಯದೆ= ತಿಳಿಯದೆ/ಗಮನಿಸದೆ;

ಪರರ+ಎಡೆ+ಅಲ್ಲಿ; ಪರ=ಬೇರೆಯ/ಇತರ/ಅನ್ಯ/ಎದುರಿನ/ಮುಂದಿನ; ಪರರ=ಬೇರೆಯವರ/ಇತರರ/ಎದುರುಗಡೆ ಇರುವವರ;

ನೊಣ+ಅನ್+ಅರಸುವ; ನೊಣ=ಹಾರುವ ರೆಕ್ಕೆಗಳಿರುವ ಒಂದು ಕೀಟ; ಅನ್=ಅನ್ನು; ಅರಸು=ಹುಡುಕು/ಬೆದಕು; ಅರಸುವ=ಹುಡುಕಿ ನೋಡುವ/ಬೆದಕಿ ಕಾಣುವ; ಮರುಳು=ತಿಳಿಗೇಡಿತನ/ಹುಚ್ಚು/ದಡ್ಡತನ; ಮಾನವನ್+ಅಂತೆ; ಮಾನವ=ವ್ಯಕ್ತಿ; ಅಂತೆ=ಹಾಗೆ/ಆ ಬಗೆ/ಆ ರೀತಿ; ಮರುಳ ಮಾನವ=ತಿಳಿಗೇಡಿತನದ ವ್ಯಕ್ತಿ/ತನ್ನದೇ ಆದ ಕಲ್ಪಿತ ವಿಚಾರಗಳಲ್ಲಿ ಮಗ್ನನಾದವನು/ತನ್ನದೇ ಸರಿಯೆಂಬ ಒಳಮಿಡಿತದಿಂದ ಕೂಡಿದವನು;

ತನ್ನ ಎಡೆಯಲ್ಲಿ ಕತ್ತೆ ಸತ್ತು ಬಿದ್ದುದನರಿಯದೆ ಪರರೆಡೆಯಲ್ಲಿ ನೊಣವನರಸುವ ಮರುಳ ಮಾನವ=ವ್ಯಕ್ತಿಯ ತಿಳಿಗೇಡಿತನದ ವರ್ತನೆಯನ್ನು ಬಣ್ಣಿಸುವುದಕ್ಕೆ ದೊಡ್ಡ ಆಕಾರದ ಕತ್ತೆಯ ಮತ್ತು ಸಣ್ಣ ಆಕಾರದ ನೊಣದ ಗಾತ್ರವನ್ನು ಒಂದು ರೂಪಕವಾಗಿ ಬಳಸಲಾಗಿದೆ. ಇತರರ ತಪ್ಪನ್ನು ಗುರುತಿಸಿ ಅಲ್ಲಗಳೆಯುವುದಕ್ಕಿಂತ ಮೊದಲು ವ್ಯಕ್ತಿಯು ತನ್ನ ನಡೆನುಡಿಯಲ್ಲಿನ ತಪ್ಪನ್ನು ಅರಿತು ತಿದ್ದುಕೊಂಡು ಬಾಳಬೇಕೆಂಬ ಎಚ್ಚರಿಕೆಯನ್ನು ಹೊಂದಿರಬೇಕು. ತಾನು ಮಾಡಿದ ದೊಡ್ಡ ದೊಡ್ಡ ತಪ್ಪುಗಳ ಬಗ್ಗೆ ಯಾವುದೇ ಬಗೆಯಲ್ಲೂ ಚಿಂತಿಸದೆ/ಕೊರಗದೆ, ಇತರರ ಸಣ್ಣಪುಟ್ಟ ತಪ್ಪುಗಳನ್ನೇ ದೊಡ್ಡದಾಗಿ ಎತ್ತಿ ಹಿಡಿದು ಗದ್ದಲ ಎಬ್ಬಿಸುವ ವ್ಯಕ್ತಿಯು ನೀಚನಾಗಿರುತ್ತಾನೆ ಎಂಬ ಸಂಗತಿಯನ್ನು ಈ ರೂಪಕದ ಮೂಲಕ ಸೂಚಿಸಲಾಗಿದೆ;

ತನ್ನ+ಅಂಗ; ಅಂಗ=ದೇಹ/ಶರೀರ/ಮಯ್; ಮನ=ಮನಸ್ಸು/ಚಿತ್ತ; ಅವಗುಣಂಗಳ=ಅವಗುಣಗಳನ್ನು; ಗುಣ=ನಡೆನುಡಿ/ನಡತೆ; ಅವಗುಣ=ಕೆಟ್ಟ ನಡೆನುಡಿ; ತೊಲಗು=ತೊರೆ/ಬಿಡು/ಕಳಚು; ನೂಕಲ್+ಅರಿಯದೆ; ನೂಕು=ತಳ್ಳು/ದೂಡು/ಕಳೆ/ದಬ್ಬು;

ತನ್ನಂಗ ಮನದ ಅವಗುಣಂಗಳ ತೊಲಗಿ ನೂಕಲರಿಯದೆ=ತನ್ನ ಮಯ್ ಮನದಲ್ಲಿ ತುಡಿಯುತ್ತಿರುವ ಕೆಟ್ಟ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು, ಒಳ್ಳೆಯತನದಿಂದ ಬಾಳುವ ಬಗೆಯನ್ನು ತಿಳಿಯದೆ;

ಅನ್ಯರ+ಅಲ್ಲಿ; ಅನ್ಯ=ಬೇರೆಯ/ಇತರ; ಅನ್ಯರಲ್ಲಿ=ಬೇರೆಯವರಲ್ಲಿ/ಇತರರಲ್ಲಿ/ಮತ್ತೊಬ್ಬರಲ್ಲಿ; ಸಂಪಾದನೆ=ಗಳಿಕೆ/ಆದಾಯ; ಸಂಪಾದನೆ ಮಾಡು=ಗುರುತಿಸಿ ಪಟ್ಟಿಮಾಡು ಎಂಬ ತಿರುಳಿನಲ್ಲಿ ಈ ಪದಕಂತೆಯು ಒಂದು ನುಡಿಗಟ್ಟಾಗಿ ಬಳಕೆಯಾಗಿದೆ.

ಅನ್ಯರಲ್ಲಿ ಅವಗುಣವ ಸಂಪಾದನೆಯ ಮಾಡುವ=ಇತರರ ನಡೆನುಡಿಗಳಲ್ಲಿ ಕಂಡುಬರುವ ತಪ್ಪುಗಳನ್ನು ಹುಡುಕಿ ತೆಗೆದು ಎಲ್ಲರಿಗೂ ತಿಳಿಯುವಂತೆ ಎತ್ತಿ ಆಡುವ/ಇತರರ ಗಮನಕ್ಕೆ ತರುವ;

ಕುನ್ನಿ=ನಾಯಿ ಮರಿ/ನಾಯಿ ; ಕುನ್ನಿಗಳ=ನಾಯಿಗಳನ್ನು; ಈ ಸನ್ನಿವೇಶದಲ್ಲಿ ನಾಯಿ ಎಂಬ ಪದವು ಒಂದು ಬಯ್ಗುಳವಾಗಿ ಬಳಕೆಯಾಗಿದೆ. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳಲಾಗದೆ, ಕೆಟ್ಟದ್ದರ ಕಡೆಗೆ ಹೊಯ್ದಾಡುವ ನಡೆನುಡಿಯುಳ್ಳ ವ್ಯಕ್ತಿಗಳನ್ನು ಬಯ್ಯುವಾಗ 'ನಾಯಿ' ಎಂಬ ಪದವನ್ನು ಆರೋಪದ ಬಯ್ಗುಳವಾಗಿ ಕನ್ನಡ ನುಡಿ ಸಮುದಾಯದಲ್ಲಿ ಬಳಸಲಾಗುತ್ತದೆ;

ಎನಗೆ+ಒಮ್ಮೆ; ಎನಗೆ=ನನಗೆ; ಒಮ್ಮೆ=ಒಂದು ಬಾರಿ/ಒಂದು ಸಲ; ತೋರದೆ+ಇರು+ಅಯ್ಯ; ತೋರು=ಕಾಣು/ಗೋಚರವಾಗು/ಕಣ್ಣಿಗೆ ಕಾಣಿಸಿಕೊ; ತೋರದಿರು=ತೋರಿಸಬೇಡ/ಕಣ್ಣಿಗೆ ಬೀಳುವಂತೆ ಮಾಡಬೇಡ; ಅಯ್ಯ=ಇತರರೊಡನೆ ಮಾತನಾಡುವಾಗ ಒಲವು ನಲಿವನ್ನು ಸೂಚಿಸಲು ಬಳಸುವ ಪದ;

ಎನಗೊಮ್ಮೆ ತೋರದಿರಯ್ಯ=ಕೆಟ್ಟ ನಡೆನುಡಿಯುಳ್ಳ ವ್ಯಕ್ತಿಗಳೊಡನೆ ಒಡನಾಟ, ವ್ಯವಹಾರ, ಗೆಳೆತನದ ನಂಟು ಒಳ್ಳೆಯದಲ್ಲವೆಂಬ ಇಂಗಿತವನ್ನು ಈ ಪದಕಂತೆಯು ಸೂಚಿಸುತ್ತಿದೆ; ಅಖಂಡೇಶ್ವರಾ=ವಚನಕಾರನಾದ ಷಣ್ಮುಖಸ್ವಾಮಿಯ ಗುರುವಿನ ಹೆಸರು ಮತ್ತು ಷಣ್ಮುಖಸ್ವಾಮಿಯ ವಚನಗಳ ಅಂಕಿತನಾಮ.)



೪೭. ತನ್ನ ತಾನರಿಯದೆ
ಅನ್ಯರ ಗುಣಾವಗುಣಗಳ
ಎತ್ತಿ ಎಣಿಸುವನ್ನಕ್ಕ
ಶಿವಶರಣನೆಂತಪ್ಪನಯ್ಯ

ಸಜ್ಜನ ಸದ್ಭಾವಿ
ಸತ್ಪುರುಷರುಗಳ ಮನನೋವಂತೆ
ಹಳಿದು ಹಾಸ್ಯವ ಮಾಡಿ ದೂಷಿಸುವನ್ನಕ್ಕ
ಶಿವಶರಣನೆಂತಪ್ಪನಯ್ಯ

ಗರ್ವಾಹಂಕಾರವೆಂಬ ಹಿರಿಯ ಪರ್ವತವನೇರಿ
ಮರವೆಯಿಂದ ಮುಂದುಗಾಣದೆ
ಮನದ ಪ್ರಪಂಚಿನಲ್ಲಿ ನಡೆದು
ಜನನ ಮರಣಂಗಳೆಂಬ ಭವಜಾಲದಲ್ಲಿ ಸಿಲ್ಕಿ
ದುಃಖವ ಪಡುವನ್ನಕ್ಕ
ಶಿವಶರಣನೆಂತಪ್ಪನಯ್ಯ
ಅಖಂಡೇಶ್ವರಾ.

**ಶಿವಶರಣನ ವ್ಯಕ್ತಿತ್ವದಲ್ಲಿ ಯಾವ ಬಗೆಯ ನಡೆನುಡಿಗಳು ಇರಬಾರದು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ತನ್ನ=ತನ್ನನ್ನು; ತಾನ್+ಅರಿಯದೆ; ತಾನು=ವ್ಯಕ್ತಿಯು; ಅರಿ=ತಿಳಿ; ಅರಿಯದೆ=ತಿಳಿಯದೆ/ತಿಳಿದುಕೊಳ್ಳದೆ; ತನ್ನ ತಾನರಿಯದೆ=ತನ್ನ ನಡೆನುಡಿಯಲ್ಲಿನ/ತನ್ನ ವ್ಯಕ್ತಿತ್ವದಲ್ಲಿನ ಇತಿಮಿತಿಗಳನ್ನು ತಿಳಿಯದೆ/ಅರಿತುಕೊಳ್ಳದೆ;

“ತನ್ನ ತಾನ್ ಅರಿಯುವುದು” ಎಂದರೆ ತನ್ನನ್ನು ಒಳಗೊಂಡಂತೆ ಪ್ರತಿಯೊಬ್ಬ ವ್ಯಕ್ತಿಯು ತಾನು ಹುಟ್ಟಿ ಬೆಳೆದು ಬಾಳುವ ಪರಿಸರದ ನಿಸರ್ಗದಲ್ಲಿನ

ಏರಿಳಿತಗಳಿಗೆ ಮತ್ತು ಸಮಾಜದ ಕಟ್ಟುಪಾಡುಗಳಿಗೆ ಒಳಪಟ್ಟು ವ್ಯವಹರಿಸುತ್ತಿರುತ್ತಾನೆ. ಆದುದರಿಂದಲೇ ಒಂದೆಡೆ ನಿಸರ್ಗದ ಸೆಳೆತ, ಮತ್ತೊಂದೆಡೆ ಸಮಾಜದ ಕಟ್ಟುಪಾಡು ಮತ್ತು ಆಚರಣೆಗಳ ನಡುವೆ ಸಿಲುಕಿರುವ ಎಲ್ಲಾ ಮಾನವ ಜೀವಿಗಳ ಮಯ್ ಮನ ಸದಾಕಾಲ ಒಳಿತು ಕೆಡುಕಿನ ಇಬ್ಬಗೆಯ ತೊಳಲಾಟದಲ್ಲಿ ಸಿಲುಕಿರುತ್ತದೆ ಎಂಬ ವಾಸ್ತವವನ್ನು ತಿಳಿದುಕೊಳ್ಳುವುದು;

ಅನ್ಯರ=ಬೇರೆಯವರ/ಇತರರ/ಮತ್ತೊಬ್ಬರ; ಗುಣ+ಅವಗುಣಗಳ; ಗುಣ=ನಡೆನುಡಿ/ನಡತೆ; ಅವಗುಣ=ಕೆಟ್ಟ ನಡೆನುಡಿ; ಎತ್ತಿ=ಬೆರಳು ಮಾಡಿ ತೋರಿಸುತ್ತ/ಮುಂದೊಡ್ಡುತ್ತ/ದೊಡ್ಡದು ಮಾಡಿ ತೋರಿಸುತ್ತ; ಎಣಿಸು+ಅನ್ನಕ್ಕ; ಎಣಿಸು=ಲೆಕ್ಕಹಾಕು; ಅನ್ನಕ್ಕ=ವರೆಗೆ/ತನಕ; ಶಿವಶರಣನ್+ಎಂತು+ಅಪ್ಪನ್+ಅಯ್ಯ; ಶಿವ=ಈಶ್ವರ/ದೇವರು;

ಶರಣ=ತಲೆಬಾಗಿದವನು/ಮೊರೆಹೊಕ್ಕವನು; ಶಿವಶರಣ=ಶಿವನಿಗೆ ತನ್ನನ್ನು ಒಪ್ಪಿಸಿಕೊಂಡವನು/ಒಳಿತಿನ ನಡೆನುಡಿಗಳಿಂದ ಶಿವನನ್ನು ಒಲಿಸಿಕೊಂಡವನು; ಎಂತು=ಹೇಗೆ/ಯಾವ ರೀತಿಯಲ್ಲಿ/ಬಗೆಯಲ್ಲಿ; ಅಪ್ಪನ್=ಆಗುವನು; ಅಯ್ಯ= ಮತ್ತೊಬ್ಬರೊಡನೆ ಮಾತನಾಡುವಾಗ ಒಲವು ನಲಿವನ್ನು ತೋರಿಸಲೆಂದು ಬಳಸುವ ಪದ;

ಶಿವಶರಣನೆಂತಪ್ಪನಯ್ಯ=ಹೇಗೆ ತಾನೆ ಶಿವಶರಣನಾಗುತ್ತಾನೆ. ಅಂದರೆ ತನ್ನನ್ನು ತಾನು ಅರಿತುಕೊಂಡು ಬಾಳದವನನ್ನು ಶಿವಶರಣನೆಂದು ಕರೆಯಲಾಗುವುದಿಲ್ಲ;

ಸಜ್ಜನ=ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿ; ಸದ್ಭಾವಿ=ಮನದಲ್ಲಿ ಒಳ್ಳೆಯ ಆಲೋಚನೆಗಳನ್ನು/ವಿಚಾರಗಳನ್ನು ಹೊಂದಿರುವವನು; ಸತ್ಪುರುಷರು+ಗಳ; ಸತ್ಪುರುಷ=ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿ; ಸಜ್ಜನ ಸದ್ಭಾವಿ ಸತ್ಪುರುಷರು=ಜೀವನದಲ್ಲಿ ತಮಗೆ ಒಳ್ಳೆಯದಾಗಬೇಕೆಂಬ ಹಂಬಲದಿಂದ ದುಡಿಯುವಂತೆಯೇ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ವ್ಯಕ್ತಿಗಳು;

ಮನ=ಮನಸ್ಸು/ಚಿತ್ತ; ನೋವು+ಅಂತೆ; ನೋವು=ಯಾತನೆ/ವೇದನೆ/ಬೇನೆ/ಅಳಲು/ಸಂಕಟ; ಅಂತೆ=ಹಾಗೆ; ನೋವಂತೆ=ಸಂಕಟದಿಂದ/ಯಾತನೆಯಿಂದ ನರಳುವಂತೆ; ಹಳಿ=ತೆಗಳು/ನಿಂದಿಸು/ಹೀಯಾಳಿಸು; ಹಳಿದು=ನಿಂದಿಸಿ/ಹೀಯಾಳಿಸಿ/ತೆಗಳಿ/ಕಡೆಗಣಿಸಿ; ಹಾಸ್ಯ=ನಲಿವು/ಉಲ್ಲಾಸ/ವಿನೋದ; ಹಳಿದು ಹಾಸ್ಯವ ಮಾಡಿ=ಅಣಕದ ಮಾತುಗಳಿಂದ/ಚುಚ್ಚು ಮಾತುಗಳಿಂದ/ಕಟು ನುಡಿಗಳಿಂದ ಒಳ್ಳೆಯವರ ವ್ಯಕ್ತಿತ್ವವನ್ನು ಅಲ್ಲಗಳೆಯುವುದು; ದೂಷಿಸು+ಅನ್ನಕ್ಕ; ದೂಷಿಸು=ನಿಂದಿಸುವುದು/ತೆಗಳುವುದು/ಅಪವಾದವನ್ನುಹೊರಿಸುವುದು/ಆರೋಪಿಸುವುದು; ಅನ್ನಕ್ಕ=ವರೆಗೆ/ತನಕ; ಶರಣನೆಂತಪ್ಪನಯ್ಯಾ=ಹೇಗೆ ತಾನೆ ಶಿವಶರಣನಾಗುತ್ತಾನೆ. ಅಂದರೆ ಒಳ್ಳೆಯವರ ಮನಸ್ಸನ್ನು ಕುಚೋದ್ಯದ ನಡೆನುಡಿಗಳಿಂದ ನೋಯಿಸಿ ಗಾಸಿಗೊಳಿಸುವವನು ಶಿವಶರಣನಲ್ಲ;

ಗರ್ವ+ಅಹಂಕಾರ+ಎಂಬ; ಗರ್ವ=ಸೊಕ್ಕು/ಹೆಮ್ಮೆ/ಜಂಬ; ಅಹಂಕಾರ=ನಾನೇ ದೊಡ್ಡವನು/ನನ್ನಿಂದಲೇ ಎಲ್ಲವೂ ಎಂಬ ಸೊಕ್ಕಿನ ನಡೆನುಡಿ; ಎಂಬ=ಎನ್ನುವ; ಹಿರಿಯ=ದೊಡ್ಡದಾದ; ಪರ್ವತ+ಅನ್+ಏರಿ; ಪರ್ವತ=ಎತ್ತರದ ಬೆಟ್ಟ ಗುಡ್ಡ ಕಾಡು ಮೇಡುಗಳಿಂದ ಕೂಡಿರುವ ಜಾಗ; ಅನ್=ಅನ್ನು; ಏರಿ=ಮೇಲಕ್ಕೆ ಹೋಗಿ/ಹತ್ತಿ;

ಗರ್ವಾಹಂಕಾರವೆಂಬ ಹಿರಿಯ ಪರ್ವತವನೇರಿ=ಅತಿ ಹೆಚ್ಚಿನ ಅಹಂಕಾರದಿಂದ ಮೆರೆಯುತ್ತಾ, ಇತರರನ್ನು ಬಹು ಕೀಳಾಗಿ ಕಾಣುತ್ತಿರುವ ಸೊಕ್ಕಿನ ನಡೆನುಡಿಗಳು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ರೂಪಕ;

ಮರವೆ+ಇಂದ; ಮರವು=ನೆನಪಿಲ್ಲದಿರುವುದು/ಎಲ್ಲವನ್ನು ಮರೆತಿರುವುದು; ಮರವೆಯಿಂದ=ಯಾವುದನ್ನು ನೆನೆಸಿಕೊಳ್ಳದೆ/ಒಳಿತು ಕೆಡುಕಿನ ಅರಿವಿಲ್ಲದೆ/ಯಾವುದನ್ನು ಮಾಡಬೇಕು ಯಾವುದನ್ನು ಮಾಡಬಾರದು ಎಂಬ ಎಚ್ಚರವಿಲ್ಲದೆ; ಮುಂದು+ಕಾಣದೆ; ಮುಂದು=ಎದುರಿಗೆ ಇರುವುದು/ಅನಂತರ ಜರುಗುವುದು; ಕಾಣು=ನೋಡು/ತಿಳಿ/ಅರಿತುಕೊ; ಮುಂದುಗಾಣದೆ=ಮುಂದೆ ಏನಾಗುತ್ತದೆ ಎಂಬುದನ್ನು ತಿಳಿಯದೆ/ಅರಿಯದೆ; ಪ್ರಪಂಚಿ+ಅಲ್ಲಿ; ಪ್ರಪಂಚ=ಜಗತ್ತು/ಲೋಕ; ಪ್ರಪಂಚಿ=ಲೋಕದ ವ್ಯವಹಾರಗಳಲ್ಲಿ ಮಗ್ನನಾದವನು; ನಡೆ=ವರ್ತಿಸು/ವ್ಯವಹರಿಸು/ಆಚರಿಸು; ಮನದ ಪ್ರಪಂಚಿನಲ್ಲಿ ನಡೆದು=ಮನದಲ್ಲಿ ಮೂಡಿಬಂದ

ಒಳಮಿಡಿತಗಳಲ್ಲಿ ಕೆಟ್ಟದ್ದನ್ನು ಹತ್ತಿಕ್ಕಲಾಗದೆ ಇಚ್ಚೆ ಬಂದಂತೆ ವ್ಯವಹರಿಸುತ್ತಾ; ಜನನ=ಹುಟ್ಟು/ಜನ್ಮ; ಮರಣ+ಗಳ್+ಎಂಬ; ಮರಣ=ಸಾವು/ಜೀವ ಹೋಗುವುದು;

ಭವ+ಜಾಲ+ಅಲ್ಲಿ; ಭವ=ಹುಟ್ಟು/ಪ್ರಪಂಚದ ವ್ಯವಹಾರ/ಜಗತ್ತು; ಜಾಲ= ಪ್ರಾಣಿಗಳನ್ನು ಮತ್ತು ಹಕ್ಕಿಗಳನ್ನು ಹಿಡಿಯುವದಕ್ಕಾಗಿ ನೂಲು/ಹುರಿಯಿಂದ ಮಾಡಿದ ಸಣ್ಣ ಸಣ್ಣ ಕಂಡಿಗಳುಳ್ಳ ಬಲೆ/ಗಾಳ; ಭವಜಾಲ=ಜಗತ್ತಿನ ವ್ಯವಹಾರಗಳಲ್ಲಿ ವ್ಯಕ್ತಿಯ ಜೀವನದಲ್ಲಿ ಉಂಟಾಗುವ ಬಹುಬಗೆಯ ತೊಡಕಿನ ಸಂಗತಿಗಳು/ಹುಟ್ಟು ಬದುಕು ಸಾವಿನ ನಡುವೆ ಜರುಗುವ ಬಹುಬಗೆಯ ಏರಿಳಿತಗಳು; ಸಿಲ್ಕಿ=ಸಿಲುಕಿ/ಸೆರೆಯಾಗಿ/ಒಳಗಾಗಿ; ದುಃಖ=ಸಂಕಟ/ವೇದನೆ/ ಯಾತನೆ; ಪಡು+ಅನ್ನಕ್ಕ; ಪಡು=ಹೊಂದು/ಪಡೆ; ಪಡುವನ್ನಕ್ಕ=ಹೊಂದಿರುವ ತನಕ/ಪಡೆಯುತ್ತಿರುವವರೆಗೆ;

ಶಿವಶರಣನೆಂತಪ್ಪನಯ್ಯಾ=ಹೇಗೆ ತಾನೆ ಶಿವಶರಣನಾಗುತ್ತಾನೆ. ಅಂದರೆ ನಾನೇ ಎಂಬ ಅಹಂಕಾರದಿಂದ ಕೂಡಿ, ಒಳಿತಿನ ನಡೆನುಡಿಗಳನ್ನು ಮರೆತು, ಕೆಟ್ಟ ಬಯಕೆಗಳನ್ನು ಈಡೇರಿಸಿಕೊಳ್ಳುವುದರಲ್ಲಿ ಮಗ್ನನಾದವನು ಎಂದೆಂದಿಗೂ ಶಿವಶರಣನಾಗುವುದಿಲ್ಲ; ಅಖಂಡೇಶ್ವರಾ=ವಚನಕಾರ ಷಣ್ಮುಖಸ್ವಾಮಿಯ ಗುರು ಮತ್ತು ಷಣ್ಮುಖಸ್ವಾಮಿಯ ವಚನಗಳ ಅಂಕಿತನಾಮ;

ಶಿವಶರಣನಾದವನು ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಮತ್ತು ಒಳ್ಳೆಯ ನಡೆನುಡಿಗಳ ಮೂಲಕವೇ ಶಿವನನ್ನು ಒಲಿಸಿಕೊಳ್ಳಬೇಕೆಂಬ ಹಂಬಲದಿಂದ ಕೂಡಿರುತ್ತಾನೆ ಎಂಬ ನಿಲುವನ್ನು ವಚನಕಾರರು ಹೊಂದಿದ್ದರು.



೪೮. ಭಾಷೆಗಳ್ಳಗೇಕೊ ಸಹಭೋಜನ
ದ್ವೇಷಗುಣಿಗೇಕೊ ಸಹಭೋಜನ

ವೇಷಧಾರಿಗೇಕೊ ಸಹಭೋಜನ
ಹುಸಿಹುಂಡಗೇಕೊ ಸಹಭೋಜನ

ಮೋಸ ಮರವೆಯಿಂದೆ ಈಶನೊಡನೆ
ಸಹಭೋಜನ ಮಾಡಿದಡೆ

ಭವದಲ್ಲಿ ಘಾಸಿಯಾಗುತಿರ್ಪರು ನೋಡಾ
ಅಖಂಡೇಶ್ವರಾ.

**ಹೊರನೋಟಕ್ಕೆ ಎಲ್ಲರೊಡನೆ ಒಂದಾಗಿ ಬಾಳುವವನಂತೆ ನಟಿಸುತ್ತಾ, ಒಳಗೊಳಗೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವ ವ್ಯಕ್ತಿಗಳ ಸೋಗಲಾಡಿತನದ ನಡೆನುಡಿಗಳನ್ನು ಈ ವಚನದಲ್ಲಿ ಟೀಕಿಸಲಾಗಿದೆ.**

**ಸೋಗಲಾಡಿತನದ ನಡೆನುಡಿಗಳು ಎಂದರೆ "ವ್ಯಕ್ತಿಯು ಆಡುವುದೇ ಒಂದು, ಮಾಡುವುದೇ ಮತ್ತೊಂದು. ಅಂದರೆ ಬಾಯಲ್ಲಿ ಒಳ್ಳೆಯ ಮಾತುಗಳನ್ನಾಡುತ್ತಾ, ಕೈಯಲ್ಲಿ ಕೆಟ್ಟಕೆಲಸಗಳನ್ನು ಮಾಡುತ್ತಿರುವುದು".**

(ಭಾಷೆ+ಕಳ್ಳ+ಗೆ+ಏಕೊ; ಭಾಷೆ=ಮಾತು/ನುಡಿ; ಕಳ್ಳ=ಪರರ ಒಡವೆ, ವಸ್ತುಗಳನ್ನು ದೋಚುವವನು; ಕಳ್ಳಗೆ=ಕಳ್ಳನಿಗೆ; ಏಕೊ=ಯಾವುದಕ್ಕಾಗಿ/ಏತಕ್ಕಾಗಿ/ಏನು ತಾನೆ ಪ್ರಯೋಜನ; ಭಾಷೆಗಳ್ಳ=ಕೊಟ್ಟ ಮಾತಿಗೆ ತಪ್ಪಿ ನಡೆಯುವವನು/ಮೋಡಿಯ ಮಾತುಗಳಿಂದ ಜನರನ್ನು ವಂಚಿಸುವವನು/ಮಾತಿನಲ್ಲಿ ಮೊದಲು ಆಸೆ ಹುಟ್ಟಿಸಿ, ಕಡೆಗೆ ಮೋಸ ಮಾಡುವವನು; ಸಹ=ಜೊತೆಯಲ್ಲಿ/ಎಲ್ಲರೊಡನೆ ಬೆರೆತು; ಭೋಜನ=ಊಟ/ಆಹಾರ ಸೇವನೆ/ಉಣ್ಣುವುದು; ಸಹಭೋಜನ=ಇತರರೊಡನೆ ಜತೆಗೂಡಿ ಊಟ ಮಾಡುವುದು; 'ಸಹಭೋಜನ' ಎಂಬ ಈ ಪದವು ಒಂದು ನುಡಿಗಟ್ಟಾಗಿ ರೂಪಕದ ತಿರುಳಿನಲ್ಲಿ ಬಳಕೆಯಾಗಿದೆ.

ಕನ್ನಡ ನುಡಿಸಮುದಾಯದ ಸಮಾಜವು ಅನೇಕ ಬಗೆಯ ಮತ, ಜಾತಿ, ಲಿಂಗ, ವರ್ಗಗಳ ಹೆಣಿಗೆಯಿಂದ ರಚನೆಗೊಂಡಿದೆ. ಇದರಿಂದಾಗಿ ವ್ಯಕ್ತಿ ವ್ಯಕ್ತಿಗಳ ನಡುವೆ ಬಹುಬಗೆಯ ತಾರತಮ್ಯಗಳಿವೆ. ಮತಗಳ ನಡುವೆ ಹಗೆತನ, ಜಾತಿಗಳಲ್ಲಿ ಮೇಲು ಕೀಳಿನ ತಾರತಮ್ಯ, ಹೆಣ್ಣುಗಂಡಿನ ನಡುವೆ ಗಂಡಿನ ಮೇಲುಗಯ್, ಬಡವ ಬಲ್ಲಿದರ ನಡುವಣ ಅಂತರಗಳೆಲ್ಲವೂ ಜನರನ್ನು ಮಾನಸಿಕವಾಗಿ ಒಡೆದು ಬೇರೆ ಬೇರೆ ಮಾಡಿದೆ. ಜನರನ್ನು ವಿಂಗಡಿಸಿರುವ ಈ ಎಲ್ಲಾ ಬಗೆಯ ಸಾಮಾಜಿಕ ಸಂಗತಿಗಳನ್ನು ದೂರವಿಟ್ಟು, "ನಾವೆಲ್ಲ ಕೇವಲ ಮಾನವರು ಎಂಬುದನ್ನು ತೋರಿಸುವುದಕ್ಕಾಗಿ ಮಾಡುವ ಸಾಂಕೇತಿಕ ಆಚರಣೆಯೇ 'ಸಹಭೋಜನ';

ಭಾಷೆಗಳ್ಗೇಕೋ ಸಹಭೋಜನ=ಆಡುವ ಮಾತುಗಳಿಗೆ ತಕ್ಕಂತೆ ಒಳ್ಳೆಯ ನಡೆನುಡಿಗಳಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡದ ವ್ಯಕ್ತಿಯು ಮಾಡುವ 'ಸಹಭೋಜನ'ದ ಆಚರಣೆಯಿಂದ ಯಾವುದೇ ಪ್ರಯೋಜನವಿಲ್ಲವೆಂಬ ಸಾಮಾಜಕ ವಾಸ್ತವವನ್ನು ಈ ನುಡಿಗಳು ತಿಳಿಸುತ್ತಿವೆ;

ದ್ವೇಷ+ಗುಣಿ+ಗೆ+ಏಕೊ; ದ್ವೇಷ=ಹಗೆತನ/ಆಕ್ರೋಶವನ್ನು ಕಾರುವುದು/ಸೇಡಿನಿಂದ ಕೂಡಿರುವುದು; ಗುಣ=ನಡತೆ/ನಡವಳಿಕೆ/ವರ್ತನೆ; ಗುಣಿ=ಗುಣವುಳ್ಳವನು; ಗುಣಿಗೆ=ಗುಣವುಳ್ಳವನಿಗೆ; ದ್ವೇಷಗುಣಿ=ಹಗೆತನ/ಮಚ್ಚರ/ಸೇಡು/ಆಕ್ರೋಶದ ನಡೆನುಡಿಗಳಿಂದ ಕೂಡಿ ಜನರಿಗೆ ಕೇಡನ್ನು ಬಗೆಯುವವನು;

ವೇಷ+ಧಾರಿ+ಗೆ+ಏಕೊ; ವೇಷ=ಉಡುಗೆ ತೊಡುಗೆ/ಒಡವೆ/ವಸ್ತ್ರ/ಬಟ್ಟೆ; ಧಾರಿ=ತೊಟ್ಟಿರುವವನು/ಉಟ್ಟಿರುವವನು; ವೇಷಧಾರಿ=ಪ್ರದರ್ಶನ ಕಲೆಗಳಾದ ನಾಟಕ, 'ಯಕ್ಷಗಾನ', ಬಯಲಾಟಗಳಲ್ಲಿ ಪಾತ್ರವನ್ನು ಮಾಡುವ ನಟ;

'ವೇಷಧಾರಿ' ಎಂಬ ಪದವು ಈ ಸನ್ನಿವೇಶದಲ್ಲಿ ಒಂದು ನುಡಿಗಟ್ಟಾಗಿ ರೂಪಕದ ತಿರುಳಿನಲ್ಲಿ ಬಳಕೆಯಾಗಿದೆ. 'ವೇಷಧಾರಿ' ಎಂದರೆ ತೋರಿಕೆಯ ನಡೆನುಡಿಗಳಿಂದ ಜನರನ್ನು ಮರುಳುಮಾಡಿ ವಂಚಿಸುವವನು/ಸಮಯ ಸನ್ನಿವೇಶಕ್ಕೆ ತಕ್ಕಂತೆ ತನ್ನ ನಡೆನುಡಿಗಳನ್ನು ಬದಲಾಯಿಸಿಕೊಳ್ಳುತ್ತ, ಜನರನ್ನು ಮೋಸಗೊಳಿಸುವವನು/ಒಳಗೊಂದು ಹೊರಗೊಂದು ಎನ್ನುವಂತೆ

ಮನದೊಳಗೆ ಕೆಟ್ಟ ಉದ್ದೇಶವನ್ನಿಟ್ಟುಕೊಂಡು, ಬಹಿರಂಗದಲ್ಲಿ ತಳುಕಿನ ಮಾತುಗಳಿಂದ ಜನರಿಗೆ ಹಾನಿಯನ್ನುಂಟು ಮಾಡುವವನು/ನಂಬಿಕೆಗೆ ಯೋಗ್ಯನಲ್ಲದ ವ್ಯಕ್ತಿ;

ಹುಸಿ+ಹುಂಡ+ಗೆ+ಏಕೊ; ಹುಸಿ=ಸುಳ್ಳು/ಸಟೆ/ಅಸತ್ಯ; ಹುಂಡ=ನೀಚ/ಕೇಡಿ/ಹಾಳು ಮಾಡುವವನು/ನಾಶ ಮಾಡುವವನು; ಹುಂಡಗೆ=ಹುಂಡನಿಗೆ; ಹುಸಿಹುಂಡ=ಸುಳ್ಳನ್ನಾಡುವುದರ ಜತೆಗೆ ನೀಚತನದಿಂದ, ಒರಟುತನದಿಂದ, ದಬ್ಬಾಳಿಕೆಯಿಂದ ಎಲ್ಲವನ್ನು ಹಾಳು ಮಾಡುವವನು/ಒಳಿತನ್ನು ನಾಶ ಪಡಿಸುವವನು;

ಮೋಸ=ಕಪಟ/ವಂಚನೆ; ಮರವೆ+ಇಂದ; ಮರವೆ=ಗುಟ್ಟು/ಗೋಪ್ಯ/ರಹಸ್ಯ; ಮೋಸ ಮರವೆ=ನಂಬಿಕೆ ದ್ರೋಹದ ನಡೆನುಡಿ/ನಂಬಿಸಿ ಕತ್ತನ್ನು ಕುಯ್ಯುವಿಕೆ/ಹೊರನೋಟಕ್ಕೆ ಕಾಣದಂತೆ ಒಳಗೊಳಗೆ ಹೀನ ಕೆಲಸಗಳನ್ನು ಮಾಡುವುದು; 'ಮರೆಮೋಸ' ಎಂಬ ನುಡಿಗಟ್ಟು "ಕೇಡನ್ನು ಬಗೆಯುವುದು" ಎಂಬ ತಿರುಳಿನಲ್ಲಿ ಕನ್ನಡ ಜನಸಮುದಾಯದ ಮಾತುಕತೆಗಳಲ್ಲಿ ಬಳಕೆಯಲ್ಲಿದೆ;

ಈಶನ್+ಒಡನೆ; ಈಶ=ಒಡೆಯ/ಶಿವ/ಈಶ್ವರ; ಒಡನೆ=ಜತೆಯಲ್ಲಿ/ಸಂಗಡ/ಒಟ್ಟಿಗೆ; ಮಾಡಿದಡೆ=ಮಾಡಿದರೆ; ಈಶನೊಡನೆ ಸಹಭೋಜನ=ಶಿವ/ಈಶ್ವರ/ಲಿಂಗದ ಪೂಜೆಯ ನೆಪದಲ್ಲಿ ಜನರನ್ನು ಒಗ್ಗೂಡಿಸಿ ಮಾಡುವ ಸಹಭೋಜನ; ಭವ+ಅಲ್ಲಿ; ಭವ=ಪ್ರಪಂಚದ ವ್ಯವಹಾರ/ಜೀವನದಲ್ಲಿನ ಆಗುಹೋಗು; ಭವದಲ್ಲಿ=ಜೀವನದಲ್ಲಿ/ಬದುಕಿನಲ್ಲಿ ನಡೆಯುವ ಪ್ರಸಂಗಗಳಲ್ಲಿ/ವ್ಯವಹಾರಗಳಲ್ಲಿ; ಘಾಸಿ+ಆಗುತ+ಇರ್ಪರು; ಘಾಸಿ=ತೊಂದರೆ/ಹಿಂಸೆ/ನೋವು/ಸಂಕಟ; ಆಗು=ಒದಗಿ ಬರುವುದು/ಜರುಗುವುದು/ನಡೆಯುವುದು; ಇರ್ಪರು=ಇರುವರು;

ಮೋಸ ಮರವೆಯಿಂದ ಈಶನೊಡನೆ ಸಹಭೋಜನ ಮಾಡಿದಡೆ ಭವದಲ್ಲಿ ಘಾಸಿಯಾಗುತಿರ್ಪರು=ಇತ್ತ ನಿಜ ಜೀವನದಲ್ಲಿ ಸುಳ್ಳು, ಕಪಟತನ ಮತ್ತು ನಂಬಿಕೆದ್ರೋಹದ ನಡೆನುಡಿಗಳಿಂದ ಜನರನ್ನು ವಂಚಿಸುತ್ತಾ, ಅತ್ತ ಶಿವನನ್ನು ಒಲಿಸಿಕೊಳ್ಳಲೆಂದು ಪೂಜೆಮಾಡುವುದರ ಮೂಲಕ ಎಲ್ಲರೊಡನೆ ಕೂಡಿ ಬಾಳುವವರಂತೆ ನಟನೆಯನ್ನು ಮಾಡುವವರು, ತಮ್ಮ ಜೀವನದಲ್ಲಿ

ನೆಮ್ಮದಿಯನ್ನು ಹೊಂದಲಾಗದೆ ನರಳುತ್ತಿರುತ್ತಾರೆ. ಏಕೆಂದರೆ ಅವರ ನಯವಂಚನೆಯ ನಡೆನುಡಿಗಳೇ ಅವರನ್ನು ನಾನಾ ಬಗೆಗಳಲ್ಲಿ ಗಾಸಿಗೊಳಿಸುತ್ತಿರುತ್ತವೆ ಎಂಬ ಇಂಗಿತವನ್ನು ಈ ವಾಕ್ಯ ಸೂಚಿಸುತ್ತದೆ;

ನೋಡು+ಆ; ನೋಡು=ಕಾಣು/ತಿಳಿ; ನೋಡಾ=ಅರಿತುಕೊ/ತಿಳಿದುಕೊ; ಅಖಂಡೇಶ್ವರಾ=ಶಿವ/ದೇವರು/ಷಣ್ಮುಖಸ್ವಾಮಿಯ ವಚನಗಳಲ್ಲಿನ ಅಂಕಿತನಾಮ.)



೪೯. ಹಲವು ವೇಷವ ಧರಿಸಿ
ಹಲವು ಭಾಷೆಯ ಕಲಿತು
ಹಲವು ದೇಶಕ್ಕೆ ಹರಿದಾಡಿದಡೇನು
ಕಾಲಾಡಿಯಂತಲ್ಲದೆ
ನಿಜ ವಿರಕ್ತಿಯಿಲ್ಲ ನೋಡಾ
ಅದೇನು ಕಾರಣವೆಂದೊಡೆ

ತನುವಿನ ಆಶೆಯಾಮಿಷ ಹಿಂಗದಾಗಿ
ಊರಾಶ್ರಯವ ಬಿಟ್ಟು
ಕಾಡಾಶ್ರಮ ಗಿರಿಗಹ್ವರದಲ್ಲಿರ್ದಡೇನು
ಹಗಲು ಕಣ್ಣು ಕಾಣದ ಗೂಗೆಯಂತಲ್ಲದೆ
ನಿಜ ವಿರಕ್ತಿಯಿಲ್ಲ ನೋಡಾ
ಅದೇನು ಕಾರಣವೆಂದೊಡೆ

ಮನದ ಮಾಯವಡಗದಾಗಿ
ಹಸಿವು ತೃಷೆಯ ಬಿಟ್ಟು
ಮಾತನಾಡದೆ ಮೌನವಾಗಿರ್ದಡೇನು
ಕಲ್ಲು ಮರ ಮೋಟು ಗುಲ್ಮಂಗಳಂತಲ್ಲದೆ
ನಿಜ ವಿರಕ್ತಿಯಿಲ್ಲ ನೋಡಾ
ಅದೇನು ಕಾರಣವೆಂದೊಡೆ

ವಿಷಯ ವ್ಯವಹಾರ ಹಿಂಗದಾಗಿ
ನಿದ್ರೆಯ ತೊರೆದು ಎದ್ದು ಕುಳ್ಳಿರ್ದಡೇನು
ಕಳ್ಳ ಊರ ಹೊಕ್ಕು
ಉಲುಹು ಅಡಗುವನ್ನಬರ

ಮರೆಯಲ್ಲಿ ಕುಳಿತಂತಲ್ಲದೆ
ನಿಜ ವಿರಕ್ತಿಯಿಲ್ಲ ನೋಡಾ
ಅದೇನು ಕಾರಣವೆಂದೊಡೆ

ಅಂತರಂಗದ ಘನಗಂಭೀರ ಮಹಾಬೆಳಗಿನ
ಶಿವಸಮಾಧಿಯನರಿಯದ ಕಾರಣ
ಇಂತಪ್ಪ ಹೊರವೇಷದ
ಡಂಭಕ ಜೊಳ್ಳುಮನದವರ
ವಿರಕ್ತರೆಂದಡೆ ಮಚ್ಚರಯ್ಯ ನಿಮ್ಮ ಶರಣರು
ಅಖಂಡೇಶ್ವರಾ.

**ಯಾವ ಬಗೆಯ ನಡೆನುಡಿಯಲ್ಲಿ ಮತ್ತು ಆಚರಣೆಯಲ್ಲಿ ವಿರಕ್ತಿಯು ಇರುವುದಿಲ್ಲ ಎಂಬುದನ್ನು ಗುರುತಿಸಿ ಹೇಳುವುದರ ಜತೆಗೆ, ಯಾವುದೇ ಒಬ್ಬ ವ್ಯಕ್ತಿಯು ವಿರಕ್ತಿಯನ್ನು ಹೊಂದಬೇಕಾದರೆ ತನ್ನ ಮಯ್ ಮನವನ್ನು ಹೇಗೆ ಹತೋಟಿಯಲ್ಲಿ ಇಟ್ಟುಕೊಂಡಿರಬೇಕು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

**‘ವಿರಕ್ತಿ’ ಎಂಬುದು ಜನರ ಗಮನವನ್ನು ತನ್ನತ್ತ ಸೆಳೆಯಲು ಇಲ್ಲವೇ ಜನರನ್ನು ಮೆಚ್ಚಿಸಲು ಮಾಡುವ ತೋರಿಕೆಯ ಆಚರಣೆಯಲ್ಲ. ‘ವಿರಕ್ತಿ’ ಎಂದರೆ ವ್ಯಕ್ತಿಯು ತನ್ನ ಮಯ್ ಮನದಲ್ಲಿ ತುಡಿಯುವಂತಹ ಒಳಮಿಡಿತಗಳಲ್ಲಿ, ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಒಳ್ಳೆಯದನ್ನು ತನ್ನ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡು, ತನ್ನನ್ನು ಒಳಗೊಂಡಂತೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿ.**

(ಹಲವು=ಬಹು ಬಗೆಗಳು/ಬಹಳ/ಅನೇಕ; ವೇಷ=ಉಡುಗೆ ತೊಡುಗೆ/ಬಟ್ಟೆ/ವಸ್ತ್ರ/ಒಡವೆ; ಧರಿಸು=ಉಡು/ತೊಡು; ಧರಿಸಿ=ತೊಟ್ಟುಕೊಂಡು/ಉಟ್ಟುಕೊಂಡು/ಹಾಕಿಕೊಂಡು; ಹಲವು ವೇಷವ ಧರಿಸಿ=ಬಗೆಬಗೆಯಾದ ಉಡುಗೆ ತೊಡುಗೆಗಳನ್ನು ಹಾಕಿಕೊಂಡು/ಸಿಂಗರಿಸಿಕೊಂಡು; ಭಾಷೆ=ನುಡಿ/ಮಾತು; ಕಲಿ=ತಿಳಿದುಕೊಂಡು/ಅರಿತುಕೊಂಡು;

ಹಲವು ಭಾಷೆಯ ಕಲಿತು=ಅನೇಕ ನುಡಿಗಳನ್ನಾಡುವುದರಲ್ಲಿ ಪರಿಣತಿಯನ್ನು/ಕುಶಲತೆಯನ್ನು/ಚತುರತೆಯನ್ನು ಪಡೆದುಕೊಂಡು; ದೇಶ=ನಾಡು/ಸೀಮೆ/ಪ್ರಾಂತ್ಯ; ಹರಿದು+ಆಡಿದಡೆ+ಏನು; ಹರಿ=ತಿರುಗಾಡು/ಸಂಚರಿಸು/ನಡೆದಾಡು/ಪಯಣಿಸು/ಸುತ್ತಾಡು/ಓಡಾಡು; ಆಡಿದಡೆ=ಆಡಿದರೆ; ಏನು=ಯಾಕೆ/ಯಾವುದು/ಪ್ರಯೋಜನವೇನು; ಕಾಲಾಡಿ+ಅಂತು+ಅಲ್ಲದೆ; ಕಾಲಾಡಿ=ಒಂದೆಡೆ ನಿಲ್ಲದೆ, ಸದಾಕಾಲ ಸಂಚರಿಸುವವನು/ಅಲೆಮಾರಿ/ಏನನ್ನು ಮಾಡದೆ ಕಾಲವನ್ನು ಕಳೆಯುವವನು; ಅಂತು=ಹಾಗೆ/ಆ ರೀತಿ; ಅಂತಲ್ಲದೆ=ಹಾಗಲ್ಲದೆ/ಆ ರೀತಿಯಲ್ಲಿ ಇರದೆ; ನಿಜ=ದಿಟ/ಸತ್ಯ/ವಾಸ್ತವ; ವಿರಕ್ತಿ+ಇಲ್ಲ; ನೋಡು+ಆ; ನೋಡು=ತಿಳಿ/ಅರಿತುಕೊ; ನೋಡಾ=ವಾಸ್ತವವನ್ನು ಕುರಿತು ಚಿಂತಿಸಿದಾಗ ದೊರೆಯುವಂತಹ ಅರಿವು;

ಅದು+ಏನು, ಕಾರಣ+ಎಂದೊಡೆ; ಕಾರಣ=ನಿಮಿತ್ತ/ಉದ್ದೇಶ; ಎಂದೊಡೆ=ಎಂದರೆ/ಎನ್ನುವುದಾದರೆ; ಅದೇನು ಕಾರಣವೆಂದೊಡೆ=ಇಂತಹವರಲ್ಲಿ ಏತಕ್ಕೆ ವಿರಕ್ತಿಯಿಲ್ಲವೆಂದರೆ; ತನು=ದೇಹ/ಶರೀರ/ಮಯ್; ಆಶೆ+ಆಮಿಷ; ಆಶೆ=ಬಯಕೆ/ಕಾಮನೆ; ಆಮಿಷ=ಬಯಸಿದ್ದನ್ನು ಪಡೆಯಬೇಕೆಂಬ ಹಂಬಲ; ಹಿಂಗದು+ಆಗಿ; ಹಿಂಗು=ಕಡಿಮೆಯಾಗು/ತಗ್ಗು/ಅಡಗು; ಹಿಂಗದಾಗಿ=ಕಡಿಮೆಯಾಗುವುದಿಲ್ಲ/ಹೋಗುವುದಿಲ್ಲ/ಬಿಡುವುದಿಲ್ಲ;

ತನ್ನನ್ನು ತಾನು ವಿರಾಗಿಯೆಂದು, ಸರ್ವಸಂಗ ಪರಿತ್ಯಾಗಿಯೆಂದು, ದೇವ ಮಾನವನೆಂದು ಅಂದರೆ ಎಲ್ಲ ಬಗೆಯ ಕಾಮನೆಗಳನ್ನು ತೊರೆದವನೆಂದು ತೋರಿಸಿಕೊಳ್ಳುವುದಕ್ಕಾಗಿ ಬಹುತರದ ಉಡುಗೆ ತೊಡುಗೆಗಳನ್ನು ತೊಟ್ಟು; ಹಲವು ಬಗೆಯ ನುಡಿಗಳನ್ನು ಚೆನ್ನಾಗಿ ಕಲಿತು, ಜನರನ್ನು ಮಾತುಗಾರಿಕೆಯಿಂದ ಮರುಳುಮಾಡುತ್ತಾ; ಸಿರಿವಂತರನ್ನು ತಮ್ಮೆಡೆಗೆ ಸೆಳೆದುಕೊಂಡು, ಅವರಿಂದ ಎಲ್ಲಾ ಬಗೆಯ ಅನುಕೂಲಗಳನ್ನು ಪಡೆದುಕೊಂಡು, ದೇಶ ದೇಶಾಂತರಗಳಲ್ಲಿ ಸಂಚರಿಸುವುದರಿಂದ ಏನು ತಾನೆ ಪ್ರಯೋಜನ? ಇಂತಹ ಹೊರಗಣ ನಡೆನುಡಿಯಿಂದ ಯಾವ ಪ್ರಯೋಜನವೂ ಇಲ್ಲ; ಇಂತಹ ವ್ಯಕ್ತಿಗಳು ಜೀವನದಲ್ಲಿ ಯಾವೊಂದು ದುಡಿಮೆಯನ್ನು ಮಾಡದೆ, ಸಮಯವನ್ನು ಹಾಳು ಮಾಡುತ್ತ, ವಿರಕ್ತಿಯ ನೆಪದಲ್ಲಿ ಎಲ್ಲೆಡೆ ತಿರುಗುವ ಸೋಗಲಾಡಿಗಳೇ

ಹೊರತು, ಒಳ್ಳೆಯ ವ್ಯಕ್ತಿಗಳಲ್ಲ; ಇಂತಹವರಿಂದ ಸಹಮಾನವರಿಗಾಗಲಿ ಇಲ್ಲವೇ ಸಮಾಜಕ್ಕಾಗಲಿ ಯಾವುದೇ ರೀತಿಯಿಂದಲೂ ಒಳಿತಾಗುವುದಿಲ್ಲ; ನಿಜವಾದ ವಿರಕ್ತಿಯನ್ನು ಹೊಂದಿದ ವ್ಯಕ್ತಿಯು ಮೊದಲು ತನ್ನ ದೇಹದಲ್ಲಿ ತುಡಿಯುವ ಕೆಟ್ಟ ಕಾಮನೆಗಳನ್ನು ಹತ್ತಿಕ್ಕಿಕೊಂಡು ಬಾಳುವುದನ್ನು ಅರಿತಿರಬೇಕು ಎಂಬ ಇಂಗಿತವನ್ನು ಈ ನುಡಿಗಳು ಸೂಚಿಸುತ್ತಿವೆ;

ಊರ್+ಆಶ್ರಯ; ಊರು=ಜನರು ವಾಸಿಸುವ ಹಳ್ಳಿ/ಗ್ರಾಮ/ಪಟ್ಟಣ; ಆಶ್ರಯ= ಆಸರೆ/ಅವಲಂಬನ/ಮೂಲ ನೆಲೆ; ಕಾಡು+ಆಶ್ರಮ; ಕಾಡು=ಮರಗಿಡಬಳ್ಳಿ ಬೆಟ್ಟಗುಡ್ಡಗಳಿಂದ ಕೂಡಿರುವ ಪ್ರದೇಶ; ಆಶ್ರಮ=ಮುನಿಗಳು/ಗುರುಗಳು/ ತಪಸ್ವಿಗಳು ನೆಲೆಸಿರುವ ಜಾಗ; ಗಿರಿ+ಗಹ್ವರ+ಅಲ್ಲಿ+ಇರ್ದಡೆ+ಏನು; ಗಿರಿ=ಬೆಟ್ಟ/ ಪರ್ವತ; ಗಹ್ವರ=ಗವಿ/ಗುಹೆ; ಇರ್ದಡೆ=ಇದ್ದರೆ;

ಊರಾಶ್ರಯ ಬಿಟ್ಟು ಕಾಡಾಶ್ರಮ ಗಿರಿಗಹ್ವರದಲ್ಲಿರ್ದಡೇನು=ಜನರು ವಾಸಿಸುತ್ತಿರುವ ಊರನ್ನು ತೊರೆದು ಕಾಡಿನಲ್ಲಿ ತಪಸ್ವಿಯಾಗಿ ಬಾಳತೊಡಗಿದರೇನು/ಸಂಸಾರದ ಹೊಣೆಗಾರಿಕೆಯನ್ನು ಬಿಟ್ಟು, ಕಾಡಿನಲ್ಲಿ ದೇವರ ಹೆಸರನ್ನು ಜಪಿಸುತ್ತಿರುವುದರಿಂದ ಏನು ತಾನೆ ಪ್ರಯೋಜನ; ಹಗಲು=ಸೂರ್ಯನ ಬೆಳಕು ಬುವಿಯಲ್ಲಿ ಹರಡಿರುವ ಸಮಯ; ಕಣ್ಣು ಕಾಣದ=ಕಣ್ಣಿನಿಂದ ನೋಡಲಾಗದ/ಕಣ್ಣು ಕಾಣಿಸಿದ; ಗೂಗೆ+ಅಂತೆ+ಅಲ್ಲದೆ; ಗೂಗೆ=ಗೂಬೆ/ಒಂದು ಬಗೆಯ ಹಕ್ಕಿ; ಅಂತೆ=ಹಾಗೆ/ ಆ ರೀತಿ/ಬಗೆ; ಗೂಬೆಗೆ ಹಗಲಿನ ವೇಳೆಯೂ ಕಣ್ಣುಗಳು ಕಾಣುತ್ತವೆ. ಆದರೆ ಅದು ಇರುಳಿನ ವೇಳೆ ಹೆಚ್ಚು ಚಟುವಟಿಕೆಯಿಂದ ಕೂಡಿ, ತನಗೆ ಅಗತ್ಯವಾದ ಆಹಾರವನ್ನು ಪಡೆದುಕೊಳ್ಳುತ್ತದೆ. ಗೂಬೆಗೆ ಹಗಲಿನಲ್ಲಿ ಕಣ್ಣುಕಾಣುವುದಿಲ್ಲ ಎನ್ನುವ ಮಾತು ಜನರ ಒಂದು ಅನಿಸಿಕೆ;

ಮನ=ಮನಸ್ಸು; ಮಾಯ+ಅಡಗದು+ಆಗಿ; ಮಾಯ=ಸೆಳೆತ/ವ್ಯಾಮೋಹ; ಮನದ ಮಾಯ=ಮನದಲ್ಲಿ ಆಸೆಗಳನ್ನು ಕೆರಳಿಸಿ ಕಾಡುವ ಒಳಮಿಡಿತಗಳು; ಅಡಗು=ಮರೆಯಾಗು/ತೊಲಗು; ಅಡಗದು=ಬಿಟ್ಟುಹೋಗುವುದಿಲ್ಲ/ ತೊಲಗುವುದಿಲ್ಲ/ನಾಶವಾಗುವುದಿಲ್ಲ/ಕಡಿಮೆಯಾಗುವುದಿಲ್ಲ;

ಮನದ ಮಾಯವಡಗದಾಗಿ=ಮನದೊಳಗೆ ಮೂಡಿ ಕಾಡುವ ಕೆಟ್ಟ ಆಸೆಗಳನ್ನು ಹತ್ತಿಕ್ಕಿಕೊಳ್ಳದೆ, ಒಳ್ಳೆಯ ನಡೆನುಡಿಗಳಿಂದ ಕೂಡಿ ಬಾಳಬೇಕೆಂಬ ಎಚ್ಚರವನ್ನು ಹೊಂದದೆ ಊರನ್ನು ತೊರೆದು, ಕಾಡನ್ನು ಸೇರಿ, ಜಪತಪಗಳಲ್ಲಿ ತೊಡಗುವುದರಿಂದ ಯಾವುದೇ ಪ್ರಯೋಜನವಿಲ್ಲವೆಂಬುದನ್ನು ಈ ನುಡಿಗಳು ಸೂಚಿಸುತ್ತವೆ;

ಹಸಿವು=ಉಂಡು ತಿಂದು ಕುಡಿದು ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕೆಂಬ ತುಡಿತ; ತೃಷೆ=ಬಾಯಾರಿಕೆ/ನೀರಡಿಕೆ; ಬಿಟ್ಟು=ತ್ಯಜಿಸಿ/ತೊರೆದು; ಮಾತನ್+ಆಡದೆ; ಮೌನ+ಆಗಿ+ಇರ್ದಡೆ+ಏನು; ಮೌನ=ಮಾತನಾಡದೆ ಸುಮ್ಮನಿರುವುದು; ಮೋಟು=ತುದಿ ಮುರಿದ/ಚಿಕ್ಕದಾಗಿರುವ ಗಿಡಮರದ ಬುಡ; ಗುಲ್ಮಂಗಳ್+ಅಂತೆ+ಅಲ್ಲದೆ; ಗುಲ್ಮ=ಕುರುಚಲು ಗಿಡಗಳಿಂದ, ಬಳ್ಳಿಹಂಬುಗಳಿಂದ ಹೆಣೆದುಕೊಂಡಿರುವ ಪೊದೆ; ಗುಲ್ಮಂಗಳ್=ಗುಲ್ಮಗಳು; ಅಂತು+ಅಲ್ಲದೆ; ವಿಷಯ=ಇಂದ್ರಿಯಗಳ ಬಯಕೆ/ಮಯ್ ಮನಗಳಲ್ಲಿ ಉಂಟಾಗುವ ನೂರೆಂಟು ಬಗೆಯ ಕಾಮನೆಗಳು; ವ್ಯವಹಾರ=ಒಡನಾಟ/ವಹಿವಾಟು/ಇತರರೊಡನೆ ಮಾಡುವ ಕೊಳುಕೊಡುಗೆಯ ಕೆಲಸ;

ದೇಹದಲ್ಲಿ ಉಂಟಾಗುವ ನಿಸರ್ಗ ಸಹಜವಾದ ಹಸಿವನ್ನು ಮತ್ತು ಬಾಯಾರಿಕೆಯನ್ನು ಹಿಂಗಿಸಿಕೊಳ್ಳದೆ, ಇತರರೊಡನೆ ಒಂದು ಮಾತನ್ನೂ ಆಡದೆ ಸುಮ್ಮನಿದ್ದ ಮಾತ್ರಕ್ಕೆ ವ್ಯಕ್ತಿಯಲ್ಲಿ ವಿರಕ್ತಿಯೆಂಬುದು ಮೂಡುವುದಿಲ್ಲ. ಇಂತಹ ಆಚರಣೆಗಳು ವ್ಯಕ್ತಿಯನ್ನು ಕೆಲಸಕ್ಕೆ ಬಾರದವನನ್ನಾಗಿ, ಸಮಾಜಕ್ಕೆ ಹೊರೆಯಾಗಿ ರೂಪಿಸುತ್ತವೆಯೇ ಹೊರತು, ಕ್ರಿಯಾಶೀಲನನ್ನಾಗಿ ಮಾಡುವುದಿಲ್ಲ. ಬದುಕಿನ ಆಗುಹೋಗುಗಳಿಂದ ದೂರಸರಿಯುವುದು ವಿರಕ್ತಿಯಲ್ಲ; ಮಯ್ ಮನದಲ್ಲಿ ತುಡಿಯುವ ಕಾಮನೆಗಳನ್ನು ನಿಯಂತ್ರಣದಲ್ಲಿಟ್ಟುಕೊಂಡು ವ್ಯವಹರಿಸುತ್ತಾ, ಬದುಕಿನಲ್ಲಿ ಒಳ್ಳೆಯ ಕೆಲಸಗಳಲ್ಲಿ ತೊಡಗಿಕೊಂಡು, ಸಹಮಾನವರ ಮತ್ತು ಸಮಾಜದ ಏಳಿಗೆಗೆ ನೆರವಾಗುವ ನಡೆನುಡಿಗಳೇ ವಿರಕ್ತಿ.

ನಿದ್ರೆ=ಮಯ್‌ಮನಕ್ಕೆ ಬಿಡುವನ್ನು ನೀಡುವುದಕ್ಕಾಗಿ ಮಲಗುವುದು; ತೊರೆ=ಬಿಡುವುದು/ತ್ಯಜಿಸುವುದು; ನಿದ್ರೆಯ ತೊರೆದು=ನಿದ್ರೆಯನ್ನು ಮಾಡದೆ/

ಮಲಗದೆ ; ಕುಳ್+ಇರ್ದಡೆ+ಏನು; ಕುಳ್=ಕುಳಿತುಕೊಂಡು; ಇರ್ದಡೆ=ಇದ್ದರೆ; ಏನು=ಯಾವುದನ್ನು ತಾನೆ ಪಡೆದಂತಾಗುತ್ತದೆ/ಮಾಡಿದಂತಾಗುತ್ತದೆ;

ಕಳ್ಳ=ಪರರ ಒಡವೆ, ವಸ್ತುಗಳನ್ನು ದೋಚುವವನು; ಹೊಕ್ಕು=ನುಗ್ಗಿ/ನುಸುಳಿ/ಒಳಬಂದು; ಉಲುಹು=ಕೂಗು/ದನಿ/ಶಬ್ದ; ಅಡಗು+ಅನ್ನಬರ; ಅಡಗು=ಮರೆಯಾಗು/ತೊಲಗು/ಬಚ್ಚಿಟ್ಟುಕೊಂಡು; ಅನ್ನಬರ=ಅಲ್ಲಿಯ ವರೆಗೆ/ಆ ತನಕ; ಮರೆ+ಅಲ್ಲಿ; ಮರೆ=ಯಾರ ಕಣ್ಣಿಗೂ ಬೀಳದಂತೆ ಅವಿತುಕೊಳ್ಳುವುದು/ಗುಟ್ಟಾಗಿ ಅಡಗಿಕೊಳ್ಳುವುದು/ಬಚ್ಚಿಟ್ಟುಕೊಳ್ಳುವುದು; ಕುಳಿತ+ಅಂತೆ+ಅಲ್ಲದೆ;

ಊರನ್ನು ಹೊಕ್ಕಿದ ಕಳ್ಳನು ರಾತ್ರಿ ಸದ್ದಡಗುವ ಸಮಯದ ತನಕ ಕಾದು, ಅಂದರೆ ಊರಿನ ಜನರೆಲ್ಲರೂ ಮಲಗಿ ನಿದ್ರಿಸುವ ತನಕ ಕಾದು, ಅನಂತರ ಮನೆಗಳಿಗೆ ಕನ್ನಹಾಕಿ ಸಂಪತ್ತನ್ನು ದೋಚುವ ಹಾಗೆ ವಿರಕ್ತರಂತೆ ನಟಿಸುವ ವ್ಯಕ್ತಿಗಳು ಜನರನ್ನು ವಂಚಿಸುವ ಬಗೆಯನ್ನು ಇಂತಹ ರೂಪಕಗಳ ಮೂಲಕ ವಚನಕಾರನು ಕಟುವಾಗಿ ಟೀಕಿಸಿದ್ದಾನೆ;

ಅಂತರಂಗ=ಮನಸ್ಸು; ಘನ=ದೊಡ್ಡದು/ಹಿರಿದಾದುದು; ಗಂಭೀರ=ಗಹನವಾದುದು/ಮಹತ್ತರವಾದುದು; ಮಹಾ=ದೊಡ್ಡದು ವಿಸ್ತಾರದುದು; ಬೆಳಗು=ಹೊಳಪು/ಕಾಂತಿ/ಪ್ರಕಾಶ; ಶಿವ+ಸಮಾಧಿ+ಅನ್ +ಅರಿಯದ; ಶಿವ=ಈಶ್ವರ/ದೇವರು; ಸಮಾಧಿ=ಮನಸ್ಸನ್ನು ಒಂದೆಡೆ ನೆಲೆಗೊಳಿಸುವುದು/ಏಕಾಗ್ರತೆ; ಶಿವ ಸಮಾಧಿ=ವ್ಯಕ್ತಿಯು ಒಳ್ಳೆಯ ನಡೆನುಡಿಗಳಲ್ಲಿ ತನ್ನ ಮಯ್ ಮನವನ್ನು ತೊಡಗಿಸಿಕೊಳ್ಳುವುದು; ಅನ್=ಅನ್ನು; ಅರಿ=ತಿಳಿ/ಕಲಿ; ಅರಿಯದ=ತಿಳಿಯದ/ಕಲಿಯದ;

ಅಂತರಂಗದ ಘನಗಂಭೀರ ಮಹಾಬೆಳಗಿನ ಶಿವ ಸಮಾಧಿ=ನಿಸರ್ಗ ಸಹಜವಾಗಿ ಉಂಟಾಗುವ ಒಳಮಿಡಿತಗಳ ಮತ್ತು ಸಮಾಜದಲ್ಲಿನ ಕಟ್ಟುಪಾಡುಗಳ, ಸಂಪ್ರದಾಯಗಳ ಮತ್ತು ಆಚರಣೆಗಳ ನಡುವೆ ಸಿಲುಕಿರುವ ಮಯ್ ಮನವನ್ನು ಹತೋಟಿಯಲ್ಲಿಟ್ಟುಕೊಂಡು ತನ್ನ ಸಹಮಾನವರ ಮತ್ತು ಸಮಾಜದ ಒಳಿತಿಗಾಗಿ ಬಾಳಬೇಕೆಂಬ ಅರಿವಿನಿಂದ ಕೂಡಿರುವ ನಡೆನುಡಿಗಳಲ್ಲಿ ದೇವರನ್ನು ಶಿವಶರಣಶರಣೆಯರು ಕಾಣುತ್ತಿದ್ದರು.

ಇಂತು+ಅಪ್ಪ; ಇಂತು=ಈ ರೀತಿ/ಈ ಬಗೆ; ಅಪ್ಪ=ಆಗಿರುವ/ಕಂಡುಬರುವ; ಇಂತಪ್ಪ=ಈ ರೀತಿಯಲ್ಲಿರುವ; ಹೊರ=ಬಹಿರಂಗ; ಹೊರವೇಷ=ಬಹಿರಂಗದಲ್ಲಿ ಕಾಣುವ ಉಡುಗೆ ತೊಡುಗೆಗಳು; ಡಂಭಕ=ಮೋಸಗಾರ/ವಂಚಕ/ಸೋಗಲಾಡಿ/ತಳುಕುಬಳುಕಿನವನು/ಒಳಗೊಂದು ಹೊರಗೊಂದು ನಡೆನುಡಿಯುಳ್ಳವನು; ಹೊರವೇಷದ ಡಂಭಕ=ಬಹಿರಂಗದಲ್ಲಿ ವಿರಕ್ತನಂತೆ ಕಾಣಿಸಿಕೊಳ್ಳುತ್ತ, ಅಂತರಂಗದಲ್ಲಿ ತನ್ನ ಮಯ್ ಮನದ ಕೆಟ್ಟ ಕಾಮನೆಗಳನ್ನು ಈಡೇರಿಸಿಕೊಳ್ಳುವುದರಲ್ಲಿ ಮಗ್ನನಾದವನು/ಒಳ್ಳೆಯವನಂತೆ ನಟಿಸುತ್ತಾ, ಜನರ ಕಣ್ಣಿಗೆ ಮಣ್ಣೆರಚಿ, ತನ್ನ ಹಿತವನ್ನು ನೋಡಿಕೊಳ್ಳುವವನು;

ಜೊಳ್ಳು=ಒಳಗೆ ಗಟ್ಟಿಯಾದ ಕಾಳು ಇಲ್ಲದೆ, ಮೇಲೆ ಮಾತ್ರ ಸಿಪ್ಪೆ ಇರುವ 'ಧಾನ್ಯ'; ಮನ=ಮನಸ್ಸು; ಜೊಳ್ಳುಮನದವರು=ಒಳ್ಳೆಯ ಮನಸ್ಸಿಲ್ಲದವರು/ಒಳಿತಿನ ನಡೆನುಡಿಗಳಿಲ್ಲದ ಚಂಚಲಮನದ ವ್ಯಕ್ತಿಗಳು; ವಿರಕ್ತರ್+ಎಂದೊಡೆ; ವಿರಕ್ತ=ಮಯ್ ಮನವನ್ನು ಹತೋಟಿಯಲ್ಲಿಟ್ಟುಕೊಂಡು ಒಳ್ಳೆಯ ಬದುಕನ್ನು ನಡೆಸುವವನು; ಮಚ್ಚರು+ಅಯ್ಯ; ಮಚ್ಚು=ಒಪ್ಪು/ಸಮ್ಮತಿಸು/ಒಲಿ/ಪ್ರೀತಿಸು; ಮಚ್ಚರು=ಒಪ್ಪುವುದಿಲ್ಲ/ಒಲಿಯುವುದಿಲ್ಲ; ಶರಣರು=ಶಿವನಿಗೆ ಒಲಿದವರು/ಸತ್ಯದ ನಡೆನುಡಿಗಳಲ್ಲೇ ಶಿವನನ್ನು ಕಾಣುವವರು; ಅಖಂಡೇಶ್ವರಾ=ಶಿವ/ಈಶ್ವರ/ಷಣ್ಮುಖ ಸ್ವಾಮಿಯ ವಚನಗಳಲ್ಲಿನ ಅಂಕಿತನಾಮ.)



# ಶಿವಲೆಂಕ ಮಂಚಣ್ಣ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ದೊರೆತಿರುವ ವಚನಗಳು | : | ೧೩೨ |
| ವಚನಗಳ ಅಂಕಿತನಾಮ | : | ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ |

೫೦. ಗುರು ವೈಭವಕ್ಕೆ ಸಿಕ್ಕಿದಾಗಲೆ
ಶಿಷ್ಯಂಗೆ ನರಕ ಪ್ರಾಪ್ತಿ

ಲಿಂಗ ಭಜನೆಗೆ ಸಿಕ್ಕಿದಾಗಲೆ
ಮರಣಕ್ಕೊಳಗು

ಜಂಗಮ ಜಂಗುಳಿಯಾಗಿ
ಕಂಡಕಂಡವರಂಗಳಕ್ಕೆ ಜಂಘೆಯನಿಕ್ಕಲಾಗಿ
ನಿರಂಗಕ್ಕೆ ಹೊರಗು

ಇಂತೀ ಇವರು ನಿಂದುದಕ್ಕೆ
ಬಂಧವಿಲ್ಲದಿರಬೇಕು
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವನರಿವುದಕ್ಕೆ.

**ಯಾವುದನ್ನಾಗಲಿ ಆಡಂಬರದಿಂದ ಮತ್ತು ಬೂಟಾಟಿಕೆಯಿಂದ ಹೊತ್ತು ಮೆರೆಸುವುದಕ್ಕೆ ತೊಡಗಿದಾಗ, ಅದು ತನ್ನ ನಿಜಗುಣವನ್ನು ಕಳೆದುಕೊಳ್ಳುತ್ತದೆ ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

**'ನಿಜಗುಣ' ಎಂದರೆ ಯಾವುದೇ ಒಂದು ವಸ್ತು, ಜೀವಿ, ವ್ಯಕ್ತಿಯಲ್ಲಿ ವಾಸ್ತವವಾಗಿ ಇರುವ ರೂಪ ಮತ್ತು ಗುಣ.**

(ಗುರು=ವಿದ್ಯೆಯನ್ನು ಕಲಿಸುವ, ಅರಿವನ್ನು ಮೂಡಿಸುವ, ಒಳ್ಳೆಯ ನಡೆನುಡಿಗಳನ್ನು ರೂಪಿಸುವ ವ್ಯಕ್ತಿ; ವೈಭವ=ಸಿರಿವಂತಿಕೆಯ ತೋರಿಕೆ/ಆಡಂಬರದಿಂದ ಮೆರೆಯುವುದು/ನೋಡುವವರ ಕಣ್ಮನಗಳನ್ನು ಸೆಳೆದು, ಅವರಲ್ಲಿ ಅಚ್ಚರಿಯನ್ನು ಮೂಡಿಸುವಂತೆ ತಮ್ಮ ಸಿರಿಸಂಪದವನ್ನು ಮೆರೆಸುವುದು; ಸಿಕ್ಕಿದ+ಆಗಲೆ; ಸಿಕ್ಕು=ಒಳಗಾಗು/ಈಡಾಗು/ಗುರಿಯಾಗು; ಆಗಲೆ=ಆ ಗಳಿಗೆಯಲ್ಲೇ/ಆ ಸಮಯದಲ್ಲೇ/ಅಂತಹ ಸನ್ನಿವೇಶದಲ್ಲಿಯೇ;

ಶಿಷ್ಯ=ಗುಡ್ಡ/ವಿದ್ಯೆಯನ್ನು ಕಲಿಯುವವನು/ಅರಿವನ್ನು ಪಡೆಯುವ ಹಂಬಲವುಳ್ಳವನು; ಶಿಷ್ಯಂಗೆ=ಗುಡ್ಡನಿಗೆ; ನರಕ=ನಮ್ಮ ಕಣ್ಣ ಮುಂದಿನ ಈ

ಲೋಕದಲ್ಲಿ ಜನರಿಗೆ ಕೇಡನ್ನು ಬಗೆದು ಸಾವನ್ನಪ್ಪಿದ ವ್ಯಕ್ತಿಯು, ಅನಂತರ ತಾನು ಮಾಡಿದ ಕೆಟ್ಟ ಕೆಲಸಗಳಿಗೆ ತಕ್ಕಂತೆ ನಾನಾ ಬಗೆಯ ದಂಡನೆಗಳಿಗೆ ಗುರಿಯಾಗಿ ನರಳುವ ಮತ್ತೊಂದು ಲೋಕದಲ್ಲಿರುವ ಜಾಗ. ಜನರಿಗೆ ಕೇಡನ್ನು ಬಗೆದವರು ಸತ್ತ ನಂತರ ಸಂಕಟದ ನೆಲೆಯಾದ ನರಕಕ್ಕೆ, ಒಳಿತನ್ನು ಮಾಡಿದವರು ಆನಂದದ ನೆಲೆಯಾದ ಸ್ವರ್ಗಕ್ಕೆ ಹೋಗುತ್ತಾರೆ ಎಂಬ ನಂಬಿಕೆಯು ಜನಸಮುದಾಯದ ಮನದಲ್ಲಿದೆ; ಪ್ರಾಪ್ತಿ=ಉಂಟಾಗುವುದು/ದೊರೆಯುವುದು/ತೋರುವುದು;

ಗುರು ವೈಭವಕ್ಕೆ ಸಿಲುಕಿದಾಗಲೆ ಶಿಷ್ಯಂಗೆ ನರಕ ಪ್ರಾಪ್ತಿ=ಗುಡ್ಡನಿಗೆ ತಿಳುವಳಿಕೆಯನ್ನು ಹೇಳಬೇಕಾದ ಗುರು, ತಾನು ಇತರರಿಗಿಂತ ದೊಡ್ಡವನು/ತಿಳಿದವನು/ಹೆಚ್ಚಿನವನು ಎಂಬ ಅಹಂಕಾರಕ್ಕೆ ಒಳಗಾಗಿ ತನ್ನತನವನ್ನು ಮರೆಯಲು ತೊಡಗಿದಾಗ, ಗುಡ್ಡನ ಬದುಕು ಬಹುಬಗೆಯ ಸಂಕಟಕ್ಕೆ ಗುರಿಯಾಗುತ್ತದೆ. ಏಕೆಂದರೆ ಅಂತಹ ಸನ್ನಿವೇಶದಲ್ಲಿ ಗುರುವಾದವನು ತಿಳುವಳಿಕೆ ಮತ್ತು ವಿನಯದ ನಡೆನುಡಿಗಳನ್ನು ಮರೆತು ಸಿರಿವಂತರ ಮತ್ತು ಸಾಮಾಜಿಕವಾಗಿ ಎತ್ತರದ ಗದ್ದುಗೆಯಲ್ಲಿರುವ ವ್ಯಕ್ತಿಗಳ ಹಿಂಬಾಲಕನಾಗುತ್ತಾನೆ. ಈ ರೀತಿ ಸಂಪತ್ತಿನ ಅಡಿಯಾಳಾದ ಮತ್ತು ಅಹಂಕಾರಿಯಾದ ಗುರುವಿನಿಂದ ಗುಡ್ಡನು ಒಳ್ಳೆಯ ನಡೆನುಡಿಗಳನ್ನು ಕಲಿಯಲಾಗದೆ ಮತ್ತು ಒಳ್ಳೆಯ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲಾಗದೆ, ಸಂಕಟಕ್ಕೆ ಗುರಿಯಾಗಿ ನರಳತೊಡಗುತ್ತಾನೆ;

ಲಿಂಗ=ಶಿವ/ಶಿವನ ಸಂಕೇತವಾದ ವಿಗ್ರಹ/ದೇವರು; ಭಜನೆ=ವಾದ್ಯಗಳನ್ನು ನುಡಿಸುತ್ತ/ಚಪ್ಪಾಳೆಯನ್ನು ತಟ್ಟುತ್ತ ದೇವರ ಹೆಸರನ್ನು ಉಚ್ಚರಿಸುವುದು/ದೇವರ ಮಹಿಮೆಯನ್ನು ಹಾಡುತ್ತ ಬಣ್ಣಿಸುವುದು; ಮರಣಕ್ಕೆ+ಒಳಗು; ಮರಣ=ಸಾವು/ಜೀವ ಹೋಗುವುದು; ಒಳಗು=ಸಿಲುಕುವುದು/ವಶವಾಗುವುದು; ಮರಣಕ್ಕೊಳಗು=ಇಲ್ಲವಾಗುವುದು;

ಲಿಂಗ ಭಜನೆಗೆ ಸಿಕ್ಕಿದಾಗಲೆ ಮರಣಕ್ಕೊಳಗು=ವ್ಯಕ್ತಿಯು ತನ್ನ ನಿಜ ಜೀವನದ ವ್ಯವಹಾರಗಳಲ್ಲಿ ಒಳ್ಳೆಯ ನಡೆನುಡಿಗಳನ್ನು ತೊರೆದು, ಲಿಂಗದ ಮಹಿಮೆಯನ್ನು ಬಾಯಿಮಾತಿನಲ್ಲಿ ಕೊಂಡಾಡುವುದಕ್ಕೆ ತೊಡಗಿದಾಗ ದೇವರು ಅಂತಹ ವ್ಯಕ್ತಿಯ ಪಾಲಿಗೆ ತೋರಿಕೆಯ ವಸ್ತುವಾಗುತ್ತಾನೆ ಇಲ್ಲವೇ ಅವನ ಪಾಲಿಗೆ

ಇಲ್ಲವಾಗುತ್ತಾನೆ. ಏಕೆಂದರೆ ಲಿಂಗಕ್ಕೆ ಮೆಚ್ಚುಗೆಯಾಗುವುದು ವ್ಯಕ್ತಿಯ ಒಳ್ಳೆಯ ನಡೆನುಡಿಗಳೇ ಹೊರತು ಯಾವುದೇ ಬಗೆಯ ಪೂಜೆ ಮತ್ತು ಆಚರಣೆಗಳಲ್ಲ ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ;

ಜಂಗಮ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳಲ್ಲಿ ಶಿವನನ್ನು ಕಾಣುವವನು/ಒಳ್ಳೆಯ ನಡೆನುಡಿಗೆ ಪ್ರೇರಣೆಯಾಗುವಂತಹ ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಜನಮನದಲ್ಲಿ ಮೂಡಿಸುವವನು; ಜಂಗುಳಿ+ಆಗಿ; ಜಂಗುಳಿ=ಕೀಳು/ಹೀನ/ಕೆಟ್ಟ; ಜಂಗುಳಿಯಾಗಿ=ಕೆಟ್ಟ ನಡೆನುಡಿಯುಳ್ಳ ವ್ಯಕ್ತಿಯಾಗಿ; ಕಂಡ+ಕಂಡವರ+ ಅಂಗಳಕ್ಕೆ; ಕಾಣ್=ನೋಡು; ಕಂಡ=ಕಣ್ಣಿಗೆ ಕಾಣಿಸಿದ; ಕಂಡಕಂಡವರ=ಕಣ್ಣಿಗೆ ಕಂಡವರ/ಕಣ್ಣಿಗೆ ಬಿದ್ದವರ; ಅಂಗಳ=ಮನೆಯ ಮುಂದಿನ ಬಯಲು/ಮನೆಗೆ ಸೇರಿಕೊಂಡಂತೆ ಇರುವ ತೆರೆದ ಜಾಗ/ಆವರಣ;

ಜಂಘೆ+ಅನ್+ಇಕ್ಕಲಾಗಿ; ಜಂಘೆ=ಕಣಕಾಲು/ಮಂಡಿಚಿಪ್ಪಿನಿಂದ ಕೆಳಗೆ ಕಂಡುಬರುವ ಕಾಲು; ಅನ್=ಅನ್ನು; ಇಡು=ಇರಿಸು/ಹಾಕು/ಮಡಗು; ಇಕ್ಕಲಾಗಿ=ಇಡಲಾಗಿ/ಹಾಕಲಾಗಿ; ಜಂಘೆಯನಿಕ್ಕುವುದು=ತಂಗುವುದು/ಬಿಡಾರ ಹೂಡುವುದು/ಇಳಿದುಕೊಳ್ಳುವುದು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ಒಂದು ನುಡಿಗಟ್ಟು; ನಿರಂಗ=ಮುಕ್ತಿ/ಬಿಡುಗಡೆ/ಮಯ್ ಮನದಲ್ಲಿ ಮೂಡುವ ಕೆಡುಕಿನ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು, ಒಳ್ಳೆಯ ನಡೆನುಡಿಗಳಿಂದ ಬಾಳುವುದು; ಹೊರಗು=ದೂರವಿರುವುದು/ಹೊರಗಡೆ ಇರುವುದು; ನಿರಂಗಕ್ಕೆ ಹೊರಗು=ಒಳ್ಳೆಯತನದಿಂದ ದೂರವಾಗುವುದು/ ಮಯ್ ಮನದ ಮೇಲಣ ಹತೋಟಿಯನ್ನು ಕಳೆದುಕೊಳ್ಳುವುದು;

ಜಂಗಮ ಜಂಗುಳಿಯಾಗಿ ಕಂಡಕಂಡವರಂಗಳಕ್ಕೆ ಜಂಘೆಯನಿಕ್ಕಲಾಗಿ ನಿರಂಗಕ್ಕೆ ಹೊರಗು=ಜನಮನದಲ್ಲಿ ಒಳಿತಿನ ನಡೆನುಡಿಗಳ ಬಗ್ಗೆ ತಿಳಿವನ್ನು ಮೂಡಿಸುತ್ತ, ಎಲ್ಲಿಯೂ ಒಂದೆಡೆ ನಿಲ್ಲದೆ, ಯಾವುದೇ ಬಗೆಯ ಕೆಟ್ಟ ಒಳಮಿಡಿತಗಳಿಗೆ ಒಳಗಾಗದೆ ನಿರಂತರವಾಗಿ ಸಂಚರಿಸುತ್ತಿರಬೇಕಾದ ಜಂಗಮನು, ತನ್ನ ಉದ್ದೇಶವನ್ನು ಮರೆತು ಊಟೋಪಾಚಾರಗಳ ಆಸೆಯಿಂದ, ಇನ್ನಿತರ ನಲಿವಿನ ಬಯಕೆಯಿಂದ ಉಳ್ಳವರ ಮನೆಗಳಲ್ಲಿ ಬಿಡಾರ ಹೂಡುವುದಕ್ಕೆ ತೊಡಗಿದರೆ,

ಆಗ ತನ್ನ ಮಯ್ ಮನದ ಮೇಲಣ ಹತೋಟಿಯನ್ನು ಕಳೆದುಕೊಂಡು ಕೆಟ್ಟ ಬಯಕೆಗಳಿಗೆ ಬಲಿಯಾಗುತ್ತಾನೆ/ಒಳ್ಳೆಯ ನಡೆನುಡಿಗಳಿಂದ ದೂರವಾಗುತ್ತಾನೆ;

ಇಂತು+ಈ; ಇಂತು=ಈ ರೀತಿಯಲ್ಲಿ/ಈ ಬಗೆಯಲ್ಲಿ; ಈ ಇವರು=ಈ ಮೂವರು (೧) ಗುರು (೨) ಲಿಂಗವನ್ನು ಪೂಜಿಸುವವನು (೩) ಜಂಗಮ; ನಿಲ್=ಉಳಿ/ತಂಗು/ಜೀವಿಸು/ಬದುಕು/ಇಳಿದುಕೊಳ್ಳು; ನಿಂದುದಕ್ಕೆ=ಬದುಕುವುದಕ್ಕೆ/ಜೀವಿಸುವುದಕ್ಕೆ; ಬಂಧ+ಇಲ್ಲದೆ+ಇರಬೇಕು; ಬಂಧ=ಕಟ್ಟು/ಪಾಶ/ಮೋಹ; ಬಂಧವಿಲ್ಲದಿರಬೇಕು=ಕೆಟ್ಟ ನಡೆನುಡಿಗಳಿಗೆ ಒಳಗಾಗಬಾರದು;

ಮಲ್ಲಿಕಾರ್ಜುನಲಿಂಗ+ಅನ್+ಅರಿವುದಕ್ಕೆ; ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ=ಶಿವ/ಈಶ್ವರ/ಶಿವಲೆಂಕ ಮಂಚಣ್ಣನ ವಚನಗಳ ಅಂಕಿತನಾಮ; ಅರಿ=ತಿಳಿ/ಕಲಿ; ಅರಿವುದಕ್ಕೆ=ತಿಳಿದುಕೊಳ್ಳುವುದಕ್ಕೆ ;

ಇಂತೀ ಇವರು ನಿಂದುದಕ್ಕೆ ಬಂಧವಿಲ್ಲದಿರಬೇಕು ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವನರಿವುದಕ್ಕೆ=ಒಳ್ಳೆಯ ನಡೆನುಡಿಗಳ ಸಂಕೇತವಾದ ಮಲ್ಲಿಕಾರ್ಜುನಲಿಂಗವನ್ನು ತಿಳಿಯಬೇಕಾದರೆ ಈ ಮೂವರು ಅಂದರೆ ಗುರುವಾದವನು, ಲಿಂಗದಲ್ಲಿ ಒಲವುಳ್ಳವನು, ಜಂಗಮನಾದವನು ತಮ್ಮ ಜೀವನದಲ್ಲಿ ಯಾವುದೇ ಬಗೆಯ ಅಹಂಕಾರದ ಮೆರೆಯುವಿಕೆಗೆ, ತೋರಿಕೆಯ ನಡೆನುಡಿಗಳಿಗೆ, ಕೆಟ್ಟ ಬಯಕೆಗಳಿಗೆ ಒಳಗಾಗಬಾರದು.)



# ಸಕಲೇಶ ಮಾದರಸ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ದೊರೆತಿರುವ ವಚನಗಳು | : | ೧೩೪ |
| ವಚನಗಳ ಅಂಕಿತನಾಮ | : | ಸಕಲೇಶ್ವರದೇವ |

೫೧. ಕಂಡುದ ನುಡಿದಡೆ
ಕಡುಪಾಪಿಯೆಂಬರು

ಸುಮ್ಮನಿದ್ದಡೆ
ಮುಸುಕುರ್ಮಿಯೆಂಬರು

ಎನಲುಬಾರದು
ಎನದಿರಲುಬಾರದು

ಸಟೆ ಕುಹಕ ಪ್ರಪಂಚಿಗಲ್ಲದೆ ಭಜಿಸರು
ಸಕಲೇಶ್ವರದೇವಾ ನಿಮ್ಮಾಣೆ.

**ಸುಳ್ಳು, ತಟವಟ, ಮೋಸ, ವಂಚನೆಗಳಿಂದ ಜನರನ್ನು ಮರುಳುಮಾಡುವ ವ್ಯಕ್ತಿಗೆ ನಮ್ಮ ಕಣ್ಣ ಮುಂದಿನ ಸಮಾಜದಲ್ಲಿ ದೊರಕುವ ಜನಮನ್ನಣೆಯು ನೇರವಾದ ನಡೆನುಡಿಯುಳ್ಳ ಸತ್ಯವಂತರಿಗೆ ದೊರೆಯುವುದಿಲ್ಲವೆಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ಕಾಣ್/ಕಾಣು=ನೋಡು/ಅರಿತುಕೊ/ತಿಳಿದಿಕೊ; ಕಂಡುದ=ಕಂಡಿದ್ದನ್ನು/ನೋಡಿದ್ದನ್ನು/ತಿಳಿದಿರುವುದನ್ನು/ಗೊತ್ತಿರುವುದನ್ನು; ನುಡಿ=ಹೇಳು/ಮಾತನಾಡು; ನುಡಿದಡೆ=ಹೇಳಿದರೆ; ಕಂಡುದ ನುಡಿದಡೆ=ವ್ಯಕ್ತಿಯು ತಾನು ಕಂಡಿರುವ/ತಿಳಿದಿರುವ/ತನಗೆ ಗೊತ್ತಿರುವ ವಾಸ್ತವದ ಸಂಗತಿಯನ್ನು ಹೇಳಿದರೆ; ಕಡು+ಪಾಪಿ+ಎಂಬರು; ಕಡು=ಹೆಚ್ಚಾಗಿ/ಅತಿಯಾಗಿ; ಪಾಪ=ಕೆಟ್ಟ ಕೆಲಸ/ನೀಚ ಕಾರ್ಯ/ತನಗೆ ಮತ್ತು ಇತರರಿಗೆ ಕೇಡನ್ನು ಉಂಟು ಮಾಡಿಕೊಳ್ಳುವ ನಡೆನುಡಿ; ಪಾಪಿ=ಕೆಟ್ಟವನು/ನೀಚ; ಕಡುಪಾಪಿ=ಕೆಟ್ಟ ನಡೆನುಡಿಗಳಲ್ಲೇ ತೊಡಗಿದವನು/ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವವನು; ಎಂಬರು=ಎನ್ನುತ್ತಾರೆ/ಎಂದು ಕರೆಯುತ್ತಾರೆ;

ಸುಮ್ಮನೆ+ಇದ್ದಡೆ; ಸುಮ್ಮನೆ=ಮಾತನಾಡದಿರುವುದು ಮತ್ತು ಯಾವೊಂದು ಬಗೆಯ ಪ್ರತಿಕ್ರಿಯೆಯನ್ನು ತೋರಿಸದಿರುವುದು; ಇದ್ದಡೆ=ಇದ್ದರೆ; ಮುಸುಕುರ್ಮಿ+ಎಂಬರು; ಮುಸುಕುರ್ಮಿ/ಮುಸುಕರ್ಮಿ=ಇತರರ ಕಣ್ಣಿಗೆ

ಕಾಣದಂತೆ ಇಲ್ಲವೇ ತಿಳಿಯದಂತೆ ಒಳಗೊಳಗೆ ಕೆಟ್ಟಕೆಲಸಗಳಲ್ಲಿ ತೊಡಗಿದವನು/ಗುಮ್ಮನಗುಸುಕ/ತನ್ನ ಮನದ ಒಳಮಿಡಿತವನ್ನಾಗಲಿ, ಅನಿಸಿಕೆಯನ್ನಾಗಲಿ ಇತರರ ಮುಂದೆ ಹೇಳಿಕೊಳ್ಳದೆ ಯಾರೊಂದಿಗೂ ಬೆರೆಯದಿರುವವನು;

ಎನ್+ಅಲ್+ಬಾರದು; ಎನ್+ಅಲು=ಎನಲು; ಎನ್=ಹೇಳು/ನುಡಿ/ ಮಾತನಾಡು; ಎನಲು=ಹೇಳಲು/ನುಡಿಯಲು/ಮಾತನಾಡಲು; ಬಾರದು=ಆಗುವುದಿಲ್ಲ; ಎನದೆ+ಇರಲು+ಬಾರದು; ಎನದೆ=ಹೇಳದೆ/ ನುಡಿಯದೆ/ಮಾತನಾಡದೆ; ಎನಲುಬಾರದು=ಹೇಳಲಾಗುವುದಿಲ್ಲ; ಎನದಿರಲುಬಾರದು=ಹೇಳದೇ ಇರಲು ಆಗದು;

ಎನಲುಬಾರದು ಎನದಿರಲುಬಾರದು=ವ್ಯಕ್ತಿಯು ತನಗೆ ತಿಳಿದಿರುವ/ತಾನು ಕಂಡಿರುವ ಸಂಗತಿಯನ್ನು ನೇರವಾಗಿ ಹೇಳುವಂತೆಯೂ ಇಲ್ಲ, ಹೇಳದೆ ಇರುವಂತೆಯೂ ಇಲ್ಲ. ವ್ಯಕ್ತಿಯು ಹೇಗೆ ನಡೆದುಕೊಂಡರೂ ಸುತ್ತಮುತ್ತಲಿನ ಜನರಲ್ಲಿ ಕೆಲವರಾದರೂ ಒಂದಲ್ಲ ಒಂದು ಬಗೆಯ ತಪ್ಪನ್ನು ಕಂಡುಹಿಡಿದು ತೆಗಳುತ್ತಾರೆ;

ಸಟೆ=ಸುಳ್ಳು/ಹುಸಿ/ಇರುವುದನ್ನು ಇಲ್ಲವೆಂದು, ಇಲ್ಲದಿರುವುದನ್ನು ಇದೆಯೆಂದು ಹೇಳುವುದು; ಕುಹಕ=ಮೋಸ/ಕಪಟ/ವಂಚನೆ; ಪ್ರಪಂಚಿ+ಗೆ+ಅಲ್ಲದೆ; ಪ್ರಪಂಚಿ=ನಿತ್ಯಜೀವನದ ವ್ಯವಹಾರಗಳಲ್ಲಿ ಕುಶಲನಾದವನು/ತನ್ನ ಹಿತಕ್ಕಾಗಿ ಯಾವುದೇ ಬಗೆಯ ಕೆಲಸವನ್ನು ಮಾಡಲು ಹಿಂಜರಿಯದ ಮತ್ತು ಯಾರನ್ನು ಬೇಕಾದರೂ ಹಾಳುಮಾಡುವ ಕೆಟ್ಟ ನಡೆನುಡಿಗಳನ್ನು ಹೊಂದಿರುವವನು; ಅಲ್ಲದೆ=ಮಾತ್ರ/ಕೇವಲ; ಭಜಿಸು=ಅನುಸರಿಸು/ಆಶ್ರಯಿಸು/ಪೂಜಿಸು/ಹೊಗಳು/ ಕೊಂಡಾಡು;

ಸಟೆ ಕುಹಕ ಪ್ರಪಂಚಿಗಲ್ಲದೆ ಭಜಿಸರು=ಸುಳ್ಳುಗಾರನನ್ನು, ಕ್ರೂರಿಯನ್ನು, ಮೋಸಗಾರನನ್ನು ಜನಸಮುದಾಯದಲ್ಲಿ ಹೆಚ್ಚಿನ ಮಂದಿ ಮೆಚ್ಚಿಕೊಂಡು ಕೊಂಡಾಡುತ್ತಾರೆಯೇ ಹೊರತು ಒಳ್ಳೆಯ ನಡೆನುಡಿಯುಳ್ಳವರನ್ನು ಒಂದಲ್ಲ ಒಂದು ಬಗೆಯ ಕೊಂಕುನುಡಿಗಳ ಮೂಲಕ ತೆಗಳುತ್ತಾರೆ;

ಸಕಲೇಶ್ವರದೇವ=ಶಿವ/ದೇವರು/ಸಕಲೇಶ ಮಾದರಸನ ವಚನಗಳಲ್ಲಿ ಕಂಡುಬರುವ ಅಂಕಿತನಾಮ; ನಿಮ್ಮ+ಆಣೆ; ಆಣೆ=ವ್ಯಕ್ತಿಯು ತಾನು ಹೇಳುತ್ತಿರುವ ಸಂಗತಿಯು ನಿಜವಾದುದೆಂದು ಪ್ರತಿಪಾದಿಸಲು ದೇವರ ಹೆಸರನ್ನು, ತನ್ನ ಮಯ್ಯಿನ ಅಂಗಾಂಗಗಳನ್ನು, ಪವಿತ್ರವೆಂದು ನಂಬಿರುವ ವಸ್ತುಗಳನ್ನು, ತನ್ನ ಒಲವಿಗೆ ಪಾತ್ರರಾಗಿರುವ ವ್ಯಕ್ತಿಗಳ ಹೆಸರನ್ನು ಹೇಳುತ್ತಾ ಮಾತನಾಡುವ ಬಗೆಯನ್ನು ಆಣೆಯಿಡುವುದು ಎಂದು ಕರೆಯುತ್ತಾರೆ;

ನಿಮ್ಮ ಆಣೆ=ವಚನಕಾರನು ತಾನು ಹೇಳುತ್ತಿರುವ ನುಡಿಗಳು ನಿಜವೆಂದು ತಿಳಿಸಲು ಸಕಲೇಶ್ವರ ದೇವರನ್ನೇ ಹೆಸರಿಸಿದ್ದಾನೆ.)



೫೨. ಜನಮೆಚ್ಚೆ ಶುದ್ಧನಲ್ಲದೆ
ಮನಮೆಚ್ಚೆ ಶುದ್ಧನಲ್ಲವಯ್ಯಾ

ನುಡಿಯಲ್ಲಿ ಜಾಣನಲ್ಲದೆ
ನಡೆಯಲ್ಲಿ ಜಾಣನಲ್ಲವಯ್ಯಾ

ವೇಷದಲ್ಲಿ ಅಧಿಕನಲ್ಲದೆ
ಭಾಷೆಯಲ್ಲಿ ಅಧಿಕನಲ್ಲವಯ್ಯಾ

ಧನ ದೊರಕದಿದ್ದಡೆ ನಿಸ್ಪೃಹನಲ್ಲದೆ
ಧನ ದೊರಕಿ ನಿಸ್ಪೃಹನಲ್ಲವಯ್ಯಾ

ಏಕಾಂತ ದ್ರೋಹಿ
ಗುಪ್ತ ಪಾತಕಿ
ಯುಕ್ತಿ ಶೂನ್ಯಂಗೆ

ಸಕಲೇಶ್ವರದೇವ ಒಲಿ ಒಲಿಯೆಂದಡೆ
ಎಂತೊಲಿವನಯ್ಯಾ.

ನಿಸರ್ಗ ಸಹಜವಾದ ಕಾಮ, ಹಸಿವು ಮತ್ತು ಮಾನವ ನಿರ್ಮಿತವಾದ ಸಾಮಾಜಿಕ ಕಟ್ಟುಪಾಡು ಹಾಗೂ ಸಂಪ್ರದಾಯಗಳ ನಡುವೆ ಸಿಲುಕಿರುವ ಮಾನವ ಜೀವಿಯ ಮಯ್ ಮನದ ಇಬ್ಬಗೆಯ ತೊಳಲಾಟವನ್ನು ಈ ವಚನದಲ್ಲಿ ಹೇಳಲಾಗಿದೆ.

ಜಗತ್ತಿನ ಜೀವರಾಶಿಗಳಲ್ಲಿ ಮಾನವಜೀವಿಯನ್ನು ಹೊರತುಪಡಿಸಿ, ಇನ್ನುಳಿದ ಪ್ರಾಣಿ, ಹಕ್ಕಿ, ಕ್ರಿಮಿ, ಕೀಟಗಳೆಲ್ಲವೂ ನಿಸರ್ಗದ ನೆಲೆಯಲ್ಲಿ ಬೆತ್ತಲೆಯಾಗಿ/ಬರಿ ಮಯ್ಯಲ್ಲಿ ಹುಟ್ಟಿ ಬೆಳೆದು ಬಾಳಿ ಬೆತ್ತಲೆಯಾಗಿಯೇ ಸಾಯುತ್ತವೆ. ತನ್ನ ಮಯ್ಯನ್ನು ಬಟ್ಟೆಯಿಂದ ಮುಚ್ಚಿಕೊಂಡಿರುವ ಮಾನವ ಜೀವಿಯು ಮಾತ್ರ ಇತ್ತ ನಿಸರ್ಗದ ನೆಲೆಯಲ್ಲಿ ಒಂದು ಪ್ರಾಣಿಯಾಗಿ, ಅತ್ತ ತಾನೇ ಕಟ್ಟಿಕೊಂಡಿರುವ ಕುಟುಂಬ,

**ಜಾತಿ, ಮತ, ವಿದ್ಯೆ, ಕಾನೂನು ಮುಂತಾದ ಒಕ್ಕೂಟಗಳ ನೆಲೆಯಲ್ಲಿ ಸಾಮಾಜಿಕ ಪ್ರಾಣಿಯಾಗಿದ್ದಾನೆ. ಆದುದರಿಂದಲೇ ಬದುಕಿನ ಉದ್ದಕ್ಕೂ "ಸರಿ/ತಪ್ಪು, ನೀತಿ/ಅನೀತಿ, ನ್ಯಾಯ/ಅನ್ಯಾಯ, ಒಳ್ಳೆಯದು/ಕೆಟ್ಟದ್ದು" ಎಂಬ ನಡೆನುಡಿಗಳ ನಡುವೆ ಹೊಯ್ದಾಡುತ್ತಿರುತ್ತಾನೆ.**

(ಜನ=ಸಮಾಜದಲ್ಲಿರುವ ವ್ಯಕ್ತಿಗಳು/ಮಾನವರು; ಮೆಚ್ಚು=ಒಲಿ/ಪ್ರೀತಿಸು/ಬಯಸು/ಹೊಗಳು/ಕೊಂಡಾಡು/ಒಪ್ಪು; ಶುದ್ಧನ್+ಅಲ್ಲದೆ; ಶುದ್ಧ=ಚೊಕ್ಕಟ/ಶುಚಿ/ಕೊಳೆಯಿಲ್ಲದಿರುವುದು; ಶುದ್ಧನ್=ಯಾವುದೇ ಬಗೆಯ ಕೆಟ್ಟ ನಡೆನುಡಿಗಳಿಲ್ಲದೆ, ಒಳ್ಳೆಯತನದಿಂದ ಬಾಳುತ್ತಿರುವವನು; ಅಲ್ಲದೆ=ಮಾತ್ರ/ಕೇವಲ; ಮನ=ಮನಸ್ಸು/ಚಿತ್ತ; ಶುದ್ಧನ್+ಅಲ್ಲ+ಅಯ್ಯಾ; ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ;

ಜನಮೆಚ್ಚೆ ಶುದ್ಧನಲ್ಲದೆ ಮನಮೆಚ್ಚೆ ಶುದ್ಧನಲ್ಲವಯ್ಯಾ=ನೋಡುವವರ ಕಣ್ಣಿಗೆ ನಾನು ಒಳ್ಳೆಯ ವ್ಯಕ್ತಿಯಂತೆ ಕಾಣಿಸಿಕೊಳ್ಳುತ್ತ, ನಯವಂಚನೆಯ ನಡೆನುಡಿಗಳಿಂದ ಜನರನ್ನು ಮರುಳುಮಾಡುತ್ತಿದ್ದೇನೆ. ಆದರೆ ನನ್ನ ಮನದೊಳಗೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವಂತಹ ಕೆಟ್ಟ ಒಳಮಿಡಿತಗಳು ಒಂದೇ ಸಮನೆ ತುಡಿಯುತ್ತಿವೆ.

ನುಡಿ+ಅಲ್ಲಿ; ನುಡಿ=ಮಾತು/ಸೊಲ್ಲು; ನುಡಿಯಲ್ಲಿ=ಆಡುವ ಮಾತುಗಳಲ್ಲಿ; ಜಾಣನ್+ಅಲ್ಲದೆ; ಜಾಣ=ಚತುರನಾದವನು/ಕುಶಲನಾದವನು/ಯಾವುದನ್ನು ಮಾಡುವುದರಿಂದ ತನಗೆ ಒಳಿತಾಗುತ್ತದೆ ಇಲ್ಲವೇ ಕೆಡುಕಾಗುತ್ತದೆ ಎಂಬುದನ್ನು ಅರಿಯಬಲ್ಲವನು; ನಡೆ+ಅಲ್ಲಿ; ನಡೆ=ದಿನನಿತ್ಯ ಮಾಡುವ ಕೆಲಸ/ವ್ಯವಹಾರ/ಆಚರಣೆ; ಜಾಣನ್+ಅಲ್ಲ+ಅಯ್ಯಾ;

ನುಡಿಯಲ್ಲಿ ಜಾಣನಲ್ಲದೆ ನಡೆಯಲ್ಲಿ ಜಾಣನಲ್ಲವಯ್ಯಾ=ಕೇಳುವವರು ಮರುಳಾಗುವಂತೆ ಚೆನ್ನಾಗಿ ಮಾತನಾಡುತ್ತೇನೆಯೇ ಹೊರತು, ಜನಸಮುದಾಯಕ್ಕೆ ಮತ್ತು ಸಮಾಜಕ್ಕೆ ಒಳಿತನ್ನುಂಟುಮಾಡುವಂತಹ ಯಾವುದೇ ಕೆಲಸವನ್ನು ಮಾಡುತ್ತಿಲ್ಲ;

ವೇಷ+ಅಲ್ಲಿ; ವೇಷ=ಉಡುಗೆ ತೊಡುಗೆ/ಉಟ್ಟುಕೊಳ್ಳುವ ಬಟ್ಟೆ, ತೊಟ್ಟು ಕೊಳ್ಳುವ ಒಡವೆ; ವೇಷದಲ್ಲಿ=ಮಯ್ಯನ್ನು ಸಿಂಗರಿಸಿಕೊಳ್ಳುವ ಉಡುಗೆ ತೊಡುಗೆಗಳಲ್ಲಿ; ಅಧಿಕನ್+ಅಲ್ಲದೆ; ಅಧಿಕ=ಹೆಚ್ಚಿನದು/ಮೇಲಾದುದು/ ಉತ್ತಮವಾದುದು; ಅಧಿಕನ್=ಹೆಚ್ಚಿನವನು/ಉತ್ತಮನಾದವನು; ಭಾಷೆ+ಅಲ್ಲಿ; ಭಾಷೆ=ಮಾತು/ನುಡಿ/ಸೊಲ್ಲು;

ವೇಷದಲ್ಲಿ ಅಧಿಕನಲ್ಲದೆ ಭಾಷೆಯಲ್ಲಿ ಅಧಿಕನಲ್ಲ=ಮಯ್ ಮೇಲೆ ತೊಟ್ಟಿರುವ ಬೆಲೆಬಾಳುವ ಉಡುಗೆ ತೊಡುಗೆಗಳಿಂದ ನೋಡುವವರ ಕಣ್ಣನಗಳಿಗೆ ಸಿರಿವಂತನಂತೆ, ದೊಡ್ಡ ಗದ್ದುಗೆಯಲ್ಲಿರುವ ವ್ಯಕ್ತಿಯಂತೆ ಕಾಣುತ್ತಿದ್ದೇನೆ. ಆದರೆ ನಾನು ಆಡುವ ಮಾತುಗಳು ನಿಜದಿಂದ ಕೂಡಿಲ್ಲ;

ಧನ=ಸಂಪತ್ತು, ಹಣ, ಆಸ್ತಿಪಾಸ್ತಿ, ಒಡವೆವಸ್ತು; ದೊರಕದೆ+ಇದ್ದಡೆ; ದೊರಕು= ಸಿಗುವುದು/ಸಿಕ್ಕುವುದು; ದೊರಕದೆ=ಸಿಗದೆ/ಸಿಕ್ಕದೆ; ಇದ್ದಡೆ=ಇದ್ದರೆ; ನಿಸ್ಪೃಹನ್+ಅಲ್ಲದೆ; ನಿಸ್ಪೃಹನ್=ಕೆಟ್ಟ ಆಸೆಗಳಿಲ್ಲದವನು/ಕೆಟ್ಟ ಬಯಕೆಗಳಿಲ್ಲದವನು/ಪ್ರಾಮಾಣಿಕ ವ್ಯಕ್ತಿ/ಇತರರ ಒಡವೆ ವಸ್ತುಗಳನ್ನು ದೋಚಿಕೊಳ್ಳಬೇಕೆಂಬ ಉದ್ದೇಶವಿಲ್ಲದವನು; ದೊರಕಿ=ಸಿಕ್ಕಾಗ/ತನ್ನ ವಶಕ್ಕೆ ದೊರೆತಾಗ; ನಿಸ್ಪೃಹನ್+ಅಲ್ಲ+ ಅಯ್ಯಾ;

ಧನ ದೊರಕದಿದ್ದಡೆ ನಿಸ್ಪೃಹನಲ್ಲದೆ ಧನ ದೊರಕಿ ನಿಸ್ಪೃಹನಲ್ಲವಯ್ಯಾ= ಹಣಕಾಸಿನ ವ್ಯವಹಾರಗಳೇ ಇಲ್ಲದಿದ್ದಾಗ ನಾನು ತುಂಬಾ ಪ್ರಾಮಾಣಿಕನಾಗಿದ್ದೆ. ಆದರೆ ಹಣಕಾಸಿನ ವ್ಯವಹಾರವನ್ನು ನಡೆಸಲು ಅವಕಾಶ ದೊರೆತಾಗ ನನ್ನ ಮನಸ್ಸು ಬಹುಬಗೆಯ ಆಸೆಗಳಿಗೆ ಒಳಗಾಗಿ ಇತರರ, ಜನಸಮುದಾಯದ, ಸಮಾಜದ ಸಂಪತ್ತನ್ನು ದೋಚತೊಡಗಿದ್ದೇನೆ; ಹಣಕಾಸು, ಸಂಪತ್ತಿನ ವ್ಯವಹಾರ ತಮ್ಮ ಕಯ್ಯಿಗೆ ಬಂದಾಗ ಮಾನವ ಸಮುದಾಯದಲ್ಲಿ ಬಹುತೇಕ ಮಂದಿ ಸಾಮಾಜಿಕ ಮನ್ನಣೆ ಮತ್ತು ಅಂತಸ್ತಿಗೆ ಕಾರಣವಾದ ಅಪಾರವಾದ ಆಸ್ತಿಪಾಸ್ತಿಯನ್ನು ಗಳಿಸಿಕೊಂಡು, ತಾವು ಮತ್ತು ತಮ್ಮ ಕುಟುಂಬದ ಮಂದಿ ಮುದದಿಂದ ಬಾಳುವುದಕ್ಕಾಗಿ ಇತರರ ಸಂಪತ್ತನ್ನು ಲಪಟಾಯಿಸಲು ತೊಡಗುತ್ತಾರೆ;

ಏಕಾಂತ=ವ್ಯಕ್ತಿಯು ಒಂಟಿಯಾಗಿರುವುದು/ಒಬ್ಬಂಟಿಯಾಗಿರುವುದು/ಇತರರಿಂದ ದೂರವಿರುವುದು; ದ್ರೋಹಿ=ವಂಚಕ/ಕೇಡಿಗ/ಮೋಸಗಾರ/ನಂಬಿದವರಿಗೆ ಹಾನಿಯನ್ನುಂಟುಮಾಡುವವನು; ಏಕಾಂತದ್ರೋಹಿ=ಇತರರಿಗೆ ತಿಳಿಯದಂತೆ ಬಹುಬಗೆಯ ಕೆಟ್ಟ ಕೆಲಸಗಳಲ್ಲಿ ತೊಡಗಿದವನು;

ಗುಪ್ತ=ಗುಟ್ಟು/ರಹಸ್ಯ/ಇತರರಿಗೆ ಕಾಣದಿರುವುದು/ತಿಳಿಯದಿರುವುದು; ಪಾತಕ= ಪಾಪದ ಕೆಲಸ/ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವ ನಡೆನುಡಿ; ಪಾತಕಿ=ಪಾಪಿ/ನೀಚ/ಕೇಡಿಗ; ಗುಪ್ತ ಪಾತಕಿ=ಇತರರಿಗೆ ಕಾಣದಂತೆ/ ತಿಳಿಯದಂತೆ ಕೆಟ್ಟಕೆಲಸಗಳಲ್ಲಿ ತೊಡಗಿದವನು/ಪಾಪಿ/ನೀಚ; ಯುಕ್ತಿ=ಯಾವುದೇ ಒಂದು ಕೆಲಸವನ್ನು ಮಾಡಲು ಅಗತ್ಯವಾದ ಕುಶಲತೆ/ ನಿಪುಣತೆ/ಉಪಾಯ/ತಂತ್ರ; ಶೂನ್ಯ=ಬರಿದಾದುದು/ಏನು ಇಲ್ಲದಿರುವುದು; ಶೂನ್ಯಂಗೆ=ಶೂನ್ಯನಿಗೆ;

ಯುಕ್ತಿಶೂನ್ಯನು=ಒಳ್ಳೆಯ ನಡೆನುಡಿಗಳಿಂದ ತನಗೆ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಹಂಬಲವಿಲ್ಲದವನು/ಗುರಿಯಿಲ್ಲದವನು;

ಸಕಲೇಶ್ವರದೇವ=ಶಿವ/ಈಶ್ವರ/ದೇವರು; ಒಲಿ=ಒಪ್ಪು/ಮೆಚ್ಚು; ಒಲಿ+ಎಂದಡೆ; ಎಂದಡೆ=ಎಂದರೆ; ಎಂತು+ಒಲಿವನ್+ಅಯ್ಯಾ; ಎಂತು=ಹೇಗೆ ತಾನೆ/ಯಾವ ರೀತಿಯಲ್ಲಿ/ಯಾವ ಬಗೆಯಲ್ಲಿ; ಒಲಿವನ್=ಮೆಚ್ಚುವನು/ಒಪ್ಪುವನು;

ಸಕಲೇಶ್ವರದೇವ ಒಲಿ ಒಲಿಯೆಂದಡೆ ಎಂತೊಲಿವನಯ್ಯಾ=ದೇವರು ಮೆಚ್ಚುವಂತೆ ವ್ಯಕ್ತಿಯು ಬಾಳಬೇಕಾದರೆ, ಅವನಲ್ಲಿ ಒಳ್ಳೆಯ ನಡೆನುಡಿಗಳು ಇರಬೇಕು. ಆದರೆ ಮಾನವಜೀವಿಯು ನಿಸರ್ಗದ ಸೆಳೆತ ಮತ್ತು ಸಾಮಾಜಿಕ ಕಟ್ಟುಪಾಡುಗಳ ನಡುವೆ ಸಿಲುಕಿರುವುದರಿಂದ, ಜೀವನದಲ್ಲಿ ಹೆಜ್ಜೆಹೆಜ್ಜೆಗೂ ಒಳಿತು ಕೆಡುಕುಗಳ ನಡುವೆ ತೊಳಲಾಡುತ್ತಿದ್ದಾನೆ ಎಂಬ ವಾಸ್ತವವನ್ನು ಈ ನುಡಿಗಳು ಸೂಚಿಸುತ್ತಿವೆ.)



# ಸಿದ್ಧರಾಮೇಶ್ವರ

| | | |
|---|---|---|
| ಕಾಲ | : | ಕ್ರಿ.ಶ. ಹನ್ನೆರಡನೆಯ ಶತಮಾನ |
| ಕಸುಬು | : | ಸೊನ್ನಲಿಗೆಯಲ್ಲಿ ಜನರನ್ನು ಒಗ್ಗೂಡಿಸಿಕೊಂಡು ಸಮುದಾಯದ ಬದುಕಿಗೆ ಒಳಿತನ್ನು ಉಂಟುಮಾಡುವ ಕೆರೆಕಟ್ಟೆ, ಬಾವಿ, ಅರವಟ್ಟಿಗೆಗಳನ್ನು ಕಟ್ಟಿಸುವ ಮತ್ತು ಇನ್ನಿತರ ಜನಪರ ಕೆಲಸಗಳನ್ನು ಮಾಡುವ ನೇತಾರನಾಗಿದ್ದನು. |
| ದೊರೆತಿರುವ ವಚನಗಳು | : | ೧೯೬೫ |
| ವಚನಗಳ ಅಂಕಿತನಾಮ | : | ಕಪಿಲಸಿದ್ಧಮಲ್ಲಿಕಾರ್ಜುನ. |

೫೩. ನಡೆನುಡಿಗಳೊಂದಾದವರಿಗೊಲಿವೆ ಕಂಡಯ್ಯಾ
ನುಡಿಯೆ ಬ್ರಹ್ಮವಾದವರ ನೀನೊಲ್ಲೆಯಯ್ಯಾ

ಮೃಡನೆ ಕಪಿಲಸಿದ್ಧಮಲ್ಲಿಕಾರ್ಜುನಲಿಂಗ
ನುಡಿಯ ಬ್ರಹ್ಮಂಗಳಿಂದಪ್ಪುದೇನೊ.

**ವಾದದಲ್ಲಿ ಎದುರಾಳಿಗಳನ್ನು ಸೋಲಿಸಲೆಂದೇ ತರ್ಕ ವಿತರ್ಕವನ್ನು ಒಡ್ಡುವ ಕುಶಲತೆಯ ಮಾತುಗಳಿಂದಾಗಲಿ ಇಲ್ಲವೇ ಕೇಳುಗರ ಮನಸೆಳೆಯುವ ಮೋಡಿಯ ಮಾತುಗಳಿಂದಾಗಲಿ ಯಾವ ಪ್ರಯೋಜನವೂ ಇಲ್ಲ; ಜೀವನದಲ್ಲಿ ಕೇವಲ ಮಾತಿನ ಜಾಣ್ಮೆಯನ್ನು ಮೆರೆಯುವುದರ ಬದಲು, ವ್ಯಕ್ತಿಯು ತಾನಾಡುವ ಮಾತುಗಳಿಗೆ ತಕ್ಕಂತೆ ಒಳ್ಳೆಯ ಕೆಲಸಗಳನ್ನು ಮಾಡಬೇಕೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

**'ಒಳ್ಳೆಯ ಕೆಲಸ' ಎಂದರೆ ತನ್ನ ಏಳಿಗೆಗೆ ಮತ್ತು ನೆಮ್ಮದಿಗೆ ನೆರವಾಗುವಂತೆಯೇ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ ಕೆಲಸ.**

(ನಡೆ+ನುಡಿ+ಗಳ್+ಒಂದು+ಆದ+ಅವರಿಗೆ+ಒಲಿವೆ; ನಡೆ=ನಡವಳಿಕೆ/ಆಚರಣೆ/ವರ್ತನೆ/ಮಾಡುವ ಕೆಲಸ; ನುಡಿ=ಆಡುವ ಮಾತು; ನಡೆನುಡಿಗಳೊಂದಾದವರಿಗೆ=ಆಡುವ ಒಳ್ಳೆಯ ನುಡಿಗಳಿಗೆ ತಕ್ಕಂತೆ ಒಳ್ಳೆಯ ಕೆಲಸಗಳನ್ನು ಮಾಡುವವರಿಗೆ/ಇತರರಿಗೆ ಹೇಳುವ ನೀತಿ ನಿಯಮಗಳ ನುಡಿಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಬಾಳುತ್ತಿರುವವರಿಗೆ;

ಒಲ್+ಇ; ಒಲಿ=ಮೆಚ್ಚು/ಒಪ್ಪು/ಬಯಸು/ಸಮ್ಮತಿಸು; ಒಲಿವೆ=ಮೆಚ್ಚಿಕೊಳ್ಳುವೆ/ಒಪ್ಪಿಕೊಳ್ಳುವೆ; ಕಂಡು+ಅಯ್ಯ; ಕಂಡು=ನೋಡಿ/ಕಾಣು; ಅಯ್ಯ=ಇತರರೊಡನೆ ಒಲವು ನಲಿವಿನಿಂದ ಮಾತನಾಡುವಾಗ ಬಳಸುವ ಪದ; ಕಂಡಯ್ಯ=ಅರಿತು ನೋಡು/ತಿಳಿದು ನೋಡು;

ನುಡಿಯೆ=ಮಾತುಗಳೇ; ಬ್ರಹ್ಮ+ಆದವರ; ಬ್ರಹ್ಮ=ಜಗತ್ತಿನಲ್ಲಿರುವ ಎಲ್ಲಾ ಬಗೆಯ

ಜೀವರಾಶಿಗಳ ಹುಟ್ಟಿಗೆ ಕಾರಣನೆಂದು ಜನ ಸಮುದಾಯವು ನಂಬಿರುವ ದೇವತೆ/ಓದು ಬರಹದಿಂದ ಪಡೆದಿರುವ ತಿಳುವಳಿಕೆ/ಹೆಚ್ಚಿನ ಅರಿವು; ಆದವರ=ಆಗಿರುವವರನ್ನು; ನೀನ್+ಒಲ್ಲೆ+ಅಯ್ಯ; ನೀನು=ದೇವರಾದ ನೀನು; ಒಲ್+ಎ; ಒಲ್ಲೆ=ಒಪ್ಪುವುದಿಲ್ಲ/ಮೆಚ್ಚುವುದಿಲ್ಲ;

ನುಡಿಯೆ ಬ್ರಹ್ಮವಾದವರು=ದೇಹವನ್ನು ದಂಡಿಸಿ ಯಾವುದೇ ಒಂದು ಬಗೆಯ ದುಡಿಮೆಯನ್ನು ಮಾಡದೆ, ಕೇವಲ ಮಾತಿನ ಚತುರತೆಯಿಂದಲೇ ಎಲ್ಲರನ್ನೂ ಮರುಳುಮಾಡಿ ವಂಚಿಸುತ್ತಾ, ತಮಗೆ ಬೇಕಾದುದೆಲ್ಲವನ್ನು ಪಡೆದುಕೊಳ್ಳುವ ವ್ಯಕ್ತಿಗಳು/ ಅಕ್ಕರ ವಿದ್ಯೆಯ ಪಾಂಡಿತ್ಯದಿಂದ ಎದುರಾಳಿಗಳನ್ನು ಮಾತಿನ ಕುಶಲತೆಯಿಂದಲೇ ಸೋಲಿಸುವವರು/ಮಾತನ್ನೇ ಬಂಡವಾಳ ಮಾಡಿಕೊಂಡಿರುವವರು; ನೀನೊಲ್ಲೆ=ದೇವರಾದ ನೀನು ಮೆಚ್ಚುವುದಿಲ್ಲ;

ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣಶರಣೆಯರು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಕಾಯಕದಲ್ಲಿ ದೇವರನ್ನು ಕಾಣುತ್ತಿದ್ದರು. ಆದುದರಿಂದ ಕಾಯಕವಿಲ್ಲದ ಬರಿ ಮಾತಿನ ಜಾಣ್ಮೆಯಿಂದ ಇಲ್ಲವೇ ಅಕ್ಕರ ವಿದ್ಯೆಯ ಪಾಂಡಿತ್ಯವನ್ನು ಮೆರೆಯುವುದರಿಂದ ಸಹಮಾನವರಿಗಾಗಲಿ ಇಲ್ಲವೇ ಸಮಾಜಕ್ಕಾಗಲಿ ಒಳಿತಾಗುವುದಿಲ್ಲವೆಂಬ ನಿಲುವನ್ನು ಹೊಂದಿದ್ದರು.

ಮೃಡ=ಶಿವ/ಈಶ್ವರ; ಮೃಡನೆ=ಶಿವನೇ/ಈಶ್ವರನೇ/ದೇವರೇ; ಕಪಿಲಸಿದ್ಧಮಲ್ಲಿಕಾರ್ಜುನಲಿಂಗ=ವಚನಕಾರನಾದ ಸಿದ್ಧರಾಮೇಶ್ವರನ ಮೆಚ್ಚಿನ ದೇವರು/ಸಿದ್ಧರಾಮೇಶ್ವರನ ವಚನಗಳ ಅಂಕಿತನಾಮ;

ನುಡಿಯ ಬ್ರಹ್ಮಂಗಳ್+ಇಂದ+ಅಪ್ಪುದು+ಏನೊ; ಅಪ್ಪುದು=ಆಗುವುದು/ ನೆರವೇರುವುದು/ಉಂಟಾಗುವುದು; ಏನೊ=ಏನು ತಾನೆ/ಯಾವುದು ತಾನೆ; ಅಪ್ಪುದೇನೊ=ಏನಾಗುತ್ತದೆ/ಏನೊಂದು ಆಗುವುದಿಲ್ಲ;

'ನುಡಿಯ ಬ್ರಹ್ಮ' ಎಂಬುದು 'ಶಬ್ದಬ್ರಹ್ಮ' ಎಂಬ ಪದಕ್ಕೆ ಬದಲಾಗಿ ಬಳಸಿರುವ ಒಂದು ನುಡಿಗಟ್ಟಾಗಿದೆ. ಕೇವಲ ಮಾತುಗಾರಿಕೆಯಿಂದಲೇ/ಓದುಬರಹದ ಪಾಂಡಿತ್ಯದಿಂದಲೇ ಲೋಕವನ್ನು ಗೆಲ್ಲಬಲ್ಲನೆಂಬ/ಎಲ್ಲರನ್ನೂ ಮರುಳುಮಾಡುವನೆಂಬ ವ್ಯಕ್ತಿಗಳನ್ನು ಶಬ್ದಬ್ರಹ್ಮರೆಂದು ಕರೆಯಲಾಗುತ್ತಿತ್ತು;

ನುಡಿಯ ಬ್ರಹ್ಮಂಗಳಿಂದಪ್ಪುದೇನೊ=ವ್ಯಕ್ತಿಯು ತನ್ನ ನಿತ್ಯಜೀವನದಲ್ಲಿ ಒಳ್ಳೆಯ ಕೆಲಸಗಳನ್ನು ಮಾಡದೆ, ಕೇವಲ ಮಾತಿನ ಜಾಣ್ಮೆಯನ್ನು ಓದುಬರಹದ ಪಾಂಡಿತ್ಯವನ್ನು ಹೊಂದಿದ್ದರೆ, ಅಂತಹ ವ್ಯಕ್ತಿಯಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಯಾವ ಪ್ರಯೋಜನವೂ ಇಲ್ಲವೆಂಬ ಇಂಗಿತವನ್ನು ಈ ಸೊಲ್ಲು ಸೂಚಿಸುತ್ತದೆ.)



೫೪. ನುಡಿಯಬಹುದು ಅದ್ವೈತವನೊಂದು ಕೋಟಿ ವೇಳೆ
ಒಮ್ಮೆ ನಡೆಯಬಹುದೆ ನಿರ್ಧರವಾಗಿ ಸದ್ಭಕ್ತಿ ಸದಾಚಾರವ
ನುಡಿದಂತೆ ನಡೆವ
ನಡೆದಂತೆ ನುಡಿವ
ಸದ್ಭಕ್ತಿ ಸದಾಚಾರಯುಕ್ತರ ಮಹಾತ್ಮರ
ಪಾದವ ಹಿಡಿದು ಬದುಕಿಸಯ್ಯಾ ಪ್ರಭುವೆ
ಕಪಿಲಸಿದ್ಧ ಮಲ್ಲಿಕಾರ್ಜುನಾ.

**ಒಳ್ಳೆಯ ನಡೆನುಡಿಗಳ ಬಗ್ಗೆ ದೊಡ್ಡ ದೊಡ್ಡ ಮಾತುಗಳನ್ನು ಎಡೆಬಿಡದೆ ಆಡುತ್ತಿರಬಹುದು. ಆದರೆ ಆಡಿದ ನುಡಿಗಳಿಗೆ ತಕ್ಕಂತೆ ವ್ಯಕ್ತಿಯು ತನ್ನ ನಿತ್ಯ ಜೀವನದ ಸಾಮಾಜಿಕ ವ್ಯವಹಾರಗಳಲ್ಲಿ ನಡೆದುಕೊಳ್ಳುವುದು ಬಹು ದೊಡ್ಡ ಸವಾಲಿನ ಮತ್ತು ಜವಾಬ್ದಾರಿಯ ಕೆಲಸವೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ನುಡಿ=ಆಡುವ ಮಾತು; ಅದ್ವೈತ+ಅನ್+ಒಂದು; ಅದ್ವೈತ=ಜೀವಾತ್ಮ ಮತ್ತು ಪರಮಾತ್ಮ ಬೇರೆಬೇರೆಯಲ್ಲ, ಅವೆರಡೂ ಒಂದೇ ಎಂಬ ನಿಲುವು; ಅನ್=ಅನ್ನು; ಕೋಟಿ=ಒಂದು ನೂರು 'ಲಕ್ಷ'; ವೇಳೆ=ಸಮಯ/ಕಾಲ; ಒಂದು ಕೋಟಿ ವೇಳೆ=ಲೆಕ್ಕಕ್ಕೆ ಸಿಗದಂತೆ ಅನೇಕ ಬಾರಿ/ನಿರಂತರವಾಗಿ/ಸದಾಕಾಲ;

ನುಡಿಯಬಹುದು ಅದ್ವೈತವನೊಂದು ಕೋಟಿ ವೇಳೆ=ಜೀವಾತ್ಮ ಪರಮಾತ್ಮ ಒಂದೇ ಎಂಬ ಸಂಗತಿಯನ್ನು ಕುರಿತು ಇಲ್ಲವೇ ನೀತಿನಿಯಮಗಳನ್ನು ಸಾರುವ ದೊಡ್ಡ ದೊಡ್ಡ ಮಾತುಗಳನ್ನು ಸದಾಕಾಲ ಆಡುತ್ತಿರಬಹುದು;

ಒಮ್ಮೆ=ಒಂದು ಸಲ/ಒಂದು ಬಾರಿ; ನಡೆ=ನಡವಳಿಕೆ/ಮಾಡುವ ಕೆಲಸ/ ಆಚರಣೆ/ವರ್ತನೆ; ನಡೆಯಬಹುದೆ=ಆಚರಿಸಿ ತೋರಿಸಲು ಆಗುತ್ತದೆಯೇ/ ಮಾಡಲು ಆಗುತ್ತದೆಯೇ; ನಿರ್ಧರ+ಆಗಿ; ನಿರ್ಧರ= ಗಟ್ಟಿತನ/ಒಂದೇ ಮನಸ್ಸು/

ಚಂಚಲತೆಯಿಲ್ಲದಿರುವಿಕೆ; ಸದ್ಭಕ್ತಿ=ಒಳ್ಳೆಯ ನಡೆನುಡಿಯಲ್ಲಿ ದೇವರನ್ನು ಕಾಣುವುದು/ಒಳ್ಳೆಯ ನಡೆನುಡಿಗಳಿಂದ ದೇವರನ್ನು ಒಲಿಸಿಕೊಳ್ಳುವುದು; ಸದಾಚಾರ=ತನ್ನನ್ನು ಒಳಗೊಂಡಂತೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಹ ಕೆಲಸ/ಒಳ್ಳೆಯ ನಡೆನುಡಿ;

ಒಮ್ಮೆ ನಡೆಯಬಹುದೆ ನಿರ್ಧರವಾಗಿ ಸದ್ಭಕ್ತಿ ಸದಾಚಾರವ=ವ್ಯಕ್ತಿಯು ಜೀವನದಲ್ಲಿ ಒಳ್ಳೆಯವನಾಗಿ ಬಾಳಬೇಕಾದರೆ ಸದಾಕಾಲ ತನ್ನ ಮಯ್ ಮನಗಳಲ್ಲಿ ತುಡಿಯುವ ಒಳಮಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು, ಕೆಟ್ಟದ್ದನ್ನು ಮಾಡಬಾರದೆಂಬ ಎಚ್ಚರದಿಂದ ಕೂಡಿದವನಾಗಿರಬೇಕು;

ನುಡಿದ+ಅಂತೆ; ನುಡಿದ=ಹೇಳಿದ/ಆಡಿದ ಮಾತು; ಅಂತೆ=ಹಾಗೆ/ರೀತಿ; ನಡೆವ=ಜೀವನದಲ್ಲಿ ಕೆಲಸಗಳನ್ನು ಮಾಡುವ/ಆಚರಿಸುವ/ಬಾಳುತ್ತಿರುವ; ನಡೆದ+ಅಂತೆ;

ನುಡಿದಂತೆ ನಡೆವ=ವ್ಯಕ್ತಿಯು ತಾನು ಆಡುವ ಸತ್ಯ, ನೀತಿ, ನ್ಯಾಯದ ಮಾತುಗಳಿಗೆ ತಕ್ಕಂತೆ ಒಳ್ಳೆಯತನದ ಕೆಲಸಗಳನ್ನು ಜೀವನದಲ್ಲಿ ಮಾಡುವುದು; ನಡೆದಂತೆ ನುಡಿವ=ಜೀವನದಲ್ಲಿ ತಾನು ಮೊದಲು ಒಳ್ಳೆಯತನದ ಕೆಲಸಗಳನ್ನು ಮಾಡಿ, ಅನಂತರ ಅವನ್ನು ಇತರರಿಗೆ ಮಾಡುವಂತೆ ಹೇಳುವುದು;

ಯುಕ್ತ=ಕೂಡಿದ/ಹೊಂದಿದ/ಪಡೆದ; ಸದ್ಭಕ್ತಿ ಸದಾಚಾರ ಯುಕ್ತರು=ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿಗಳು; ಮಹಾತ್ಮ=ಜನಸಮುದಾಯದ ಒಳಿತಿಗಾಗಿ ತನ್ನ ಜೀವನವನ್ನು ಮುಡಿಪಾಗಿಟ್ಟ /ನುಡಿದಂತೆ ನಡೆದು ಲೋಕಕ್ಕೆ ಒಳಿತನ್ನು ಮಾಡಿದ ವ್ಯಕ್ತಿ;

ಪಾದ=ಕಾಲು/ಚರಣ/ಅಡಿ; ಹಿಡಿ=ಮುಟ್ಟು; ಬದುಕಿಸು+ಅಯ್ಯಾ; ಬದುಕಿಸು=ಉಳಿದು ಬಾಳುವಂತೆ ಮಾಡು; ಅಯ್ಯಾ=ಇತರರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ; ಪ್ರಭು=ಒಡೆಯ/ ಯಜಮಾನ; ಕಪಿಲಸಿದ್ಧ ಮಲ್ಲಿಕಾರ್ಜುನಾ=ಈಶ್ವರ/ಶಿವ;

ಪಾದವ ಹಿಡಿದು ಬದುಕಿಸಯ್ಯಾ ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ= ಒಳ್ಳೆಯವರ ಜೀವನದಲ್ಲಿನ ನಡೆನುಡಿಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡು ಬಾಳುವಂತಹ ಅರಿವು ನನ್ನಲ್ಲಿ ಮೂಡುವಂತಾಗಲಿ ಎಂಬ ಇಂಗಿತವನ್ನು ಈ ಸೊಲ್ಲು ಸೂಚಿಸುತ್ತಿದೆ.)



೫೫. ವೇಷದಲ್ಲಿ ಭಕ್ತನಾದಡೇನು
ವೇಷದಲ್ಲಿ ಮಹೇಶನಾದಡೇನು
ಗುಣವಿಲ್ಲದನ್ನಕ್ಕರ
ಕ್ಷೀರಕ್ಕೂ ತಕ್ರಕ್ಕೂ ಭೇದವೇನುಂಟು
ರುಚಿಯಿಂದಲ್ಲದೆ ರೂಪದಿಂದವೆ
ಕಪಿಲಸಿದ್ಧ ಮಲ್ಲಿಕಾರ್ಜುನಾ.

**ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ ಒಳ್ಳೆಯ ನಡೆನುಡಿಗಳನ್ನು ಹೊಂದಿಲ್ಲದ ವ್ಯಕ್ತಿಯು, ದೇವರಲ್ಲಿ ಒಲವು ಉಳ್ಳವನಂತೆ ಬಗೆಬಗೆಯ ಉಡುಗೆ ತೊಡುಗೆಗಳನ್ನು ತೊಟ್ಟುಕೊಂಡು, ಬಹುಬಗೆಯ ಆಚರಣೆಗಳಲ್ಲಿ ತೊಡಗುವುದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ವೇಷ+ಅಲ್ಲಿ; ವೇಷ=ಉಡುಗೆ/ತೊಡುಗೆ/ಒಡವೆ/ವಸ್ತ್ರ/ಅಲಂಕಾರ ಮಾಡಿಕೊಳ್ಳುವುದು/ಸಿಂಗರಿಸಿಕೊಳ್ಳುವುದು; ಭಕ್ತನ್+ಆದಡೆ+ಏನು; ಭಕ್ತ=ಒಳ್ಳೆಯ ನಡೆನುಡಿಗಳಲ್ಲಿ ದೇವರನ್ನು ಕಾಣುವವನು/ಒಳ್ಳೆಯ ನಡೆನುಡಿಗಳಿಂದ ದೇವರನ್ನು ಒಲಿಸಿಕೊಳ್ಳುವವನು; ಆದಡೆ=ಆದರೆ; ಏನು=ಯಾವುದು;

ವೇಷದಲ್ಲಿ ಭಕ್ತನಾದಡೇನು=ನಿತ್ಯದ ಬದುಕಿನ ಸಾಮಾಜಿಕ ವ್ಯವಹಾರದ ನಡೆನುಡಿಗಳಲ್ಲಿ ಒಳ್ಳೆಯವನಾಗಿ ಬಾಳುತ್ತಿರದೆ, ನೋಡುವವರ ಕಣ್ಣಿಗೆ ದೇವರಲ್ಲಿ ಒಲವುಳ್ಳವನಂತೆ ಹೊರನೋಟಕ್ಕೆ ಕಾಣಿಸಿಕೊಳ್ಳುವುದರಿಂದ ಯಾವುದೇ ಪ್ರಯೋಜನವಿಲ್ಲ;

ಮಹೇಶನ್+ಆದಡೆ+ಏನು; ಮಹೇಶ=ಶಿವ/ಈಶ್ವರ; ಗುಣ+ಇಲ್ಲದ+ಅನ್ನಕ್ಕರ; ಗುಣ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಹ

ನಡೆನುಡಿ; ಅನ್ನಕ್ಕರ=ಅಲ್ಲಿಯವರೆಗೆ/ಅಲ್ಲಿಯ ತನಕ; ಗುಣವಿಲ್ಲದನ್ನಕ್ಕರ=ಗುಣವಿಲ್ಲದಿರುವ ತನಕ/ಒಳ್ಳೆಯ ನಡೆನುಡಿಗಳು ಇರದಿದ್ದರೆ ಯಾವ ರೀತಿಯಲ್ಲಿ ಕಾಣಿಸಿಕೊಂಡರು ಪ್ರಯೋಜನವಿಲ್ಲ;

ಕ್ಷೀರ=ಹಾಲು; ತಕ್ರ=ಮಜ್ಜಿಗೆ; ಭೇದ+ಏನ್+ಉಂಟು; ಭೇದ=ವ್ಯತ್ಯಾಸ/ಅಂತರ/ಬೇರೆ ಬಗೆ/ರೀತಿ; ಉಂಟು=ಇದೆ; ರುಚಿ+ಇಂದ+ಅಲ್ಲದೆ; ರುಚಿ=ಯಾವುದೇ ಬಗೆಯ ಉಣಿಸು ತಿನಸುಗಳನ್ನು ಸೇವಿಸಿದಾಗ ನಾಲಗೆಯ ಮೂಲಕ ಉಂಟಾಗುವ ಸಂವೇದನೆ; ರೂಪ+ಇಂದವೆ; ರೂಪ=ಆಕಾರ/ಹೊರನೋಟಕ್ಕೆ ಕಂಡು ಬರುವ ರೀತಿ/ಬಗೆ; ರುಚಿಯಿಂದಲ್ಲದೆ ರೂಪದಿಂದವೆ=ರುಚಿಯಿಂದ ತಿಳಿದು ಬರುತ್ತದೆಯೇ ಹೊರತು ರೂಪದಿಂದಲ್ಲ;

ಕ್ಷೀರಕ್ಕೂ ತಕ್ರಕ್ಕೂ ಭೇದವೇನುಂಟು ರುಚಿಯಿಂದಲ್ಲದೆ ರೂಪದಿಂದವೆ= ಹೊರನೋಟಕ್ಕೆ ಹಾಲು ಮತ್ತು ಮಜ್ಜಿಗೆಯ ಬಣ್ಣ 'ಬೆಳ್ಳಗೆ' ಒಂದೇ ರೀತಿಯಲ್ಲಿ ಕಂಡುಬರುತ್ತದೆ. ಆದರೆ ನಾಲಿಗೆಯಿಂದ ಸವಿದಾಗ, ಅವೆರಡರ ರುಚಿ ಬೇರೆಬೇರೆಯಾಗಿರುವುದು ತಿಳಿದುಬರುತ್ತದೆ;

ಯಾವುದೇ ವ್ಯಕ್ತಿಗಳನ್ನು ಅವರು ತೊಟ್ಟಿರುವ ಉಡುಗೆ ತೊಡುಗೆಗಳ ಮೂಲಕ ಒಳ್ಳೆಯವರು ಇಲ್ಲವೇ ಕೆಟ್ಟವರು ಎಂದು ಅಳೆಯಬಾರದು. ಅವರು ಮಾಡುವ ಕೆಲಸಗಳ ಮೂಲಕ ಅವರ ವ್ಯಕ್ತಿತ್ವವನ್ನು ತಿಳಿಯಬೇಕೆಂಬ ಅರಿವನ್ನು ಮತ್ತು ಎಚ್ಚರವನ್ನು ಹಾಲು ಮತ್ತು ಮಜ್ಜಿಗೆಯ ಬಣ್ಣ ಮತ್ತು ರುಚಿಯ ರೂಪಕದ ಮೂಲಕ ಸೂಚಿಸಲಾಗಿದೆ; ಕಪಿಲಸಿದ್ಧ ಮಲ್ಲಿಕಾರ್ಜುನಾ=ಶಿವ/ಈಶ್ವರ;).



# ಸ್ವತಂತ್ರ ಸಿದ್ಧಲಿಂಗೇಶ್ವರ

| | | |
|---|---|---|
| ಕಾಲ | : | ಕ್ರಿ.ಶ. ಹದಿನಾರನೆಯ ಶತಮಾನ (೧೫೦೧–೧೬೦೦) |
| ಊರು | : | ೧) ಹುಟ್ಟಿದ ಊರು: ಹರದನ ಹಳ್ಳಿ (ವಾಣಿಜ್ಯಪುರ) ಚಾಮರಾಜ ನಗರ ತಾಲ್ಲೂಕು, ಚಾಮರಾಜ ನಗರ ಜಿಲ್ಲೆ. ೨) ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ಕಾಪನಹಳ್ಳಿ ಎಂಬ ಊರಿನ ಹತ್ತಿರದಲ್ಲಿರುವ ಗಜರಾಜಗಿರಿಯಲ್ಲಿ ದೊರಕಿರುವ ಒಂದು ಸಮಾಧಿಯನ್ನು ಈತನದೆಂದು ಗುರುತಿಸಲಾಗಿದೆ. |
| ದೊರೆತಿರುವ ವಚನಗಳು | : | ೪೩೫ |
| ವಚನಗಳ ಅಂಕಿತನಾಮ | : | ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರ |

೫೬. ಕಣ್ಣು ಕಾಲು ಎರಡುಳ್ಳವ ದೂರ ಎಯ್ದುವನಲ್ಲದೆ
ಕಣ್ಣು ಕಾಲೆರಡರೊಳಗೊಂದಿಲ್ಲದವನು
ದೂರವನೆಯ್ದಲರಿಯನೆಂಬಂತೆ

ಜ್ಞಾನರಹಿತನಾಗಿ ಕ್ರೀಯನೆಷ್ಟು ಮಾಡಿದಡೇನು
ಅದು ಕಣ್ಣಿಲ್ಲದವನ ನಡೆಯಂತೆ

ಕ್ರೀರಹಿತನಾಗಿ ಜ್ಞಾನಿಯಾದಡೇನು
ಅದು ಕಾಲಿಲ್ಲದವನ ಇರವಿನಂತೆ

ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ
ನಿಜವ ಬೆರಸುವಡೆ
ಜ್ಞಾನವೂ ಕ್ರೀಯೂ ಎರಡು ಬೇಕು.

**ವ್ಯಕ್ತಿಯು ತನ್ನ ಜೀವನದಲ್ಲಿ ಅರಿವನ್ನು ಹೊಂದದೆ ಕೇವಲ ದುಡಿಮೆಯನ್ನು ಮಾತ್ರ ಮಾಡುತ್ತಿದ್ದರೆ ಇಲ್ಲವೇ ದುಡಿಮೆಯನ್ನು ಮಾಡದೆ ಕೇವಲ ಅರಿವನ್ನು ಮಾತ್ರ ಹೊಂದಿದ್ದರೆ, ಯಾವ ಪ್ರಯೋಜನವೂ ಇಲ್ಲ. ಇವೆರಡು ಜತೆಗೂಡಿದಾಗ ಮಾತ್ರ ವ್ಯಕ್ತಿಗೆ ಜೀವನದಲ್ಲಿ ನೆಮ್ಮದಿ ಮತ್ತು ಏಳಿಗೆಯು ಉಂಟಾಗುತ್ತದೆ ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಕಣ್ಣು=ನೋಡುವ ಅಂಗ/ನೇತ್ರ/ನಯನ; ಕಾಲು=ನಡೆಯುವ ಅಂಗ; ಎರಡು+ಉಳ್ಳವ; ಉಳ್=ಇರು/ಹೊಂದು/ಪಡೆ; ಉಳ್ಳವ=ಇರುವವನು/ಹೊಂದಿರುವವನು/ಪಡೆದಿರುವವನು; ದೂರ=ಒಂದು ಎಡೆಯಿಂದ ಮತ್ತೊಂದು ಎಡೆಗೆ ಇರುವ ಅಂತರ; ಎಯ್ದು+ಅನ್+ಅಲ್ಲದೆ; ಎಯ್ದು=ಮುಟ್ಟು/ಸೇರು; ಎಯ್ದುವನ್=ಹೋಗಿ ಸೇರುವನು ತಲುಪುವನು/ಮುಟ್ಟುವನು; ಅಲ್ಲದೆ=ಆ ರೀತಿ ಇರದೆ;

ಕಣ್ಣು+ಕಾಲ್+ಎರಡರ+ಒಳಗೆ+ಒಂದು+ಇಲ್ಲದವನು; ದೂರ+ಅನ್+ಎಯ್ದಲ್+ಅರಿಯನ್+ಎಂಬ+ಅಂತೆ; ಎಯ್ದಲ್=ಹೋಗಿ ಸೇರಲು/ಮುಟ್ಟಲು/ತಲುಪಲು; ಅರಿ=ತಿಳಿ; ಅರಿಯನ್=ತಿಳಿಯನು/ಗೊತ್ತಿಲ್ಲದವನು; ಎಂಬ=ಎನ್ನುವ; ಅಂತೆ=ಹಾಗೆ;

ದೂರವನೆಯ್ದಲರಿಯನ್= ನೋಡುವ ಕಣ್ಣು ಮತ್ತು ನಡೆಯುವ ಕಾಲುಗಳಲ್ಲಿ ಒಂದು ಅಂಗ ಇಲ್ಲವಾದರೆ, ಅಂದರೆ ಕಣ್ಣುಗಳು ಇಲ್ಲವಾದರೆ ಮುಂದಿನ ಹಾದಿಯು ಯಾವುದೆಂಬುದನ್ನು ಕಾಣಲಾಗದೆ; ಕಾಲುಗಳು ಇಲ್ಲವಾದರೆ ಹಾದಿಯಲ್ಲಿ ನಡೆಯಲಾಗದೆ, ಹೋಗಿ ಸೇರಬೇಕಾದ ನೆಲೆಯನ್ನು ತಲುಪಲಾಗುವುದಿಲ್ಲ;

ಜ್ಞಾನ+ರಹಿತನ್+ಆಗಿ; ಜ್ಞಾನ=ತಿಳುವಳಿಕೆ/ಅರಿವು/ಯಾವುದು ಒಳ್ಳೆಯದು-ಕೆಟ್ಟದ್ದು/ಯಾವುದು ಸರಿ-ತಪ್ಪು ಎಂಬುದನ್ನು ತಿಳಿದು ನೋಡುವ ಕಸುವು; ರಹಿತ=ಇಲ್ಲದ; ಜ್ಞಾನರಹಿತನಾಗಿ=ತಿಳುವಳಿಕೆಯಿಲ್ಲದೆ/ಅರಿವಿಲ್ಲದೆ/ಯಾವಬಗೆಯ ಕೆಲಸದಿಂದ ಏನು ದೊರೆಯುತ್ತದೆ ಎಂಬುದನ್ನೇ ಗೊತ್ತುಮಾಡಿಕೊಳ್ಳದೆ; ಕ್ರೀ+ಅನ್+ಎಷ್ಟು; ಕ್ರೀ=ಕ್ರಿಯೆ/ಕೆಲಸ/ಕಾರ್ಯ/ದುಡಿಮೆ/ಗೆಯ್ಮೆ; ಅನ್=ಅನ್ನು; ಎಷ್ಟು=ಯಾವ ಪ್ರಮಾಣದಲ್ಲಿಯಾದರೂ; ಮಾಡದಡೆ+ಏನು; ಮಾಡಿದಡೇನು=ಮಾಡುವುದರಿಂದ ಯಾವುದೇ ಬಗೆಯ ಪ್ರಯೋಜನವಿಲ್ಲ; ಕಣ್+ಇಲ್ಲದವನ; ನಡೆ+ಅಂತೆ; ನಡೆ=ನಡಗೆ/ಮುಂದೆ ಸಾಗುವುದು/ಚಲಿಸುವುದು;

ಅದು ಕಣ್ಣಿಲ್ಲದವನ ನಡೆಯಂತೆ=ಕಣ್ಣು ಕಾಣದವನು ದಾರಿಯಲ್ಲಿ ನಡೆಯುವಾಗ ಮುಂದಿನ ಎಡೆಯಲ್ಲಿ ಏನಿದೆ ಎಂಬುದನ್ನು ಅರಿಯಲಾಗದೆ ಹೆಜ್ಜೆ ಹೆಜ್ಜೆಗೂ ತೊಳಲಾಡುತ್ತಾನೆಯೋ ಅಂತೆಯೇ ಸರಿಯಾದ ತಿಳುವಳಿಕೆಯಿಲ್ಲದೆ ಮಾಡುವ ದುಡಿಮೆಯಿಂದ ವ್ಯಕ್ತಿಯು ಏಳಿಗೆಯನ್ನು ಹೊಂದಲಾಗುವುದಿಲ್ಲ ಎಂಬ ತಿರುಳಿನಲ್ಲಿ ಬಳಕೆಯಾಗಿರುವ ನುಡಿಗಳು;

ಕ್ರೀ+ರಹಿತನ್+ಆಗಿ; ಕ್ರೀರಹಿತನು=ದುಡಿಮೆಯನ್ನು ಮಾಡದವನು/ದೇಹವನ್ನು ದಂಡಿಸಿ ಗೆಯ್ಯಲಾರದವನು/ಏನೊಂದು ಕೆಲಸವನ್ನು ಮಾಡದವನು; ಜ್ಞಾನಿ+ಆದಡೆ+ಏನು; ಜ್ಞಾನಿ=ಅರಿವುಳ್ಳವನು/ತಿಳುವಳಿಕೆಯುಳ್ಳವನು/

ಓದುಬರಹವನ್ನು ಕಲಿತವನು; ಆದಡೆ=ಆಗಿದ್ದರೆ; ಕಾಲ್+ಇಲ್ಲದವನ; ಇರವು+ಇನ್+ಅಂತೆ; ಇರವು=ರೀತಿ/ಬಗೆ;

ಅದು ಕಾಲಿಲ್ಲದವನ ಇರವು=ಕಾಲುಗಳು ಇಲ್ಲದವನು ಒಂದು ಎಡೆಯಿಂದ ಮತ್ತೊಂದು ಎಡೆಗೆ ಹೇಗೆ ಹೋಗಲಾರನೋ ಅಂತೆಯೇ ದುಡಿಮೆಯನ್ನು ಮಾಡದವನು ಜೀವನದ ಆಗುಹೋಗುಗಳಿಗೆ ಅಗತ್ಯವಾದ ಸಂಪತ್ತನ್ನು ಸಂಪಾದಿಸಲಾಗದೆ ಇದ್ದ ನೆಲೆಯಿಂದ ಮೇಲೇರಲಾಗದೆ ನೆಲಕಚ್ಚುತ್ತಾನೆ;

ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ=ಶಿವನ ಹೆಸರು/ಸಿದ್ಧಲಿಂಗೇಶ್ವರನ ವಚನಗಳಲ್ಲಿ ಬಳಕೆಯಾಗಿರುವ ಅಂಕಿತನಾಮ/ವಚನಕಾರನ ಮೆಚ್ಚಿನ ದೇವರು; ನಿಜ=ವಾಸ್ತವ/ಸತ್ಯ/ದಿಟ; ಬೆರಸು=ಕೂಡಿಸು/ಸೇರಿಸು/ಒಂದು ಮಾಡು; ಬೆರಸುವಡೆ=ಬೇರೆ ಬೇರೆಯಾಗಿರುವುದನ್ನು ಒಂದು ಮಾಡಿದರೆ/ ಒಂದಾಗಿ ಒಳಗೊಳ್ಳುವಂತೆ ಮಾಡಿದರೆ/ಕೂಡಿಸಿದರೆ;

ನಿಜವ ಬೆರಸುವಡೆ=ಮಾನವ ಜೀವನದಲ್ಲಿನ ಈ ವಾಸ್ತವವನ್ನು ಅರಿತುಕೊಂಡರೆ/ತಿಳಿದುಕೊಂಡರೆ; ಜ್ಞಾನವೂ ಕ್ರೀಯೂ ಎರಡು ಬೇಕು=ವ್ಯಕ್ತಿಯ ಬದುಕಿನಲ್ಲಿ ನೆಮ್ಮದಿಯಿಂದ ಕೂಡಿದ ಏಳಿಗೆಗೆ ಅರಿವು ಮತ್ತು ದುಡಿಮೆಗಳೆರಡೂ ಅತ್ಯಗತ್ಯವೆಂಬುದು ಮನವರಿಕೆಯಾಗುತ್ತದೆ.)



೫೭. ಹಾವಾಡಿಗ ಹಾವನಾಡಿಸುವಲ್ಲಿ
ತನ್ನ ಕಾಯ್ದುಕೊಂಡು
ಹಾವನಾಡಿಸುವಂತೆ
ಆವ ಮಾತನಾಡಿದಡೂ
ತನ್ನ ಕಾಯ್ದು ಆಡಬೇಕು
ಅದೆಂತೆಂದಡೆ
ತನ್ನ ವಚನವೆ ತನಗೆ ಹಗೆಯಹುದಾಗಿ
ಅನ್ನಿಗರಿಂದ ಬಂದಿತ್ತೆನಬೇಡ
ಅಳಿವುದು ಉಳಿವುದು ತನ್ನ ವಚನದಲ್ಲಿಯೆ ಅದೆ
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ
ಹಗೆಯು ಕೆಳೆಯು ತನ್ನ ವಚನವೇ ಬೇರಿಲ್ಲ.

**"ಮಾತೇ ಮುತ್ತು, ಮಾತೇ ಮಿತ್ತು (ಸಾವು)" ಎಂಬ ಗಾದೆಯಂತೆ ವ್ಯಕ್ತಿಯು ಆಡುವ ಮಾತುಗಳು ತನಗೆ ಒಳಿತನ್ನು ಉಂಟುಮಾಡಬಲ್ಲವು ಇಲ್ಲವೇ ಕೇಡನ್ನು ತರಬಲ್ಲವು. ಆದುದರಿಂದ ವ್ಯಕ್ತಿಯು ತಾನಾಡುವ ಮಾತುಗಳ ಬಗ್ಗೆ ಸದಾಕಾಲ ಎಚ್ಚರದಿಂದ ಇರಬೇಕು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಹಾವು+ಆಡಿಗ; ಹಾವು=ನಂಜನ್ನು ಒಳಗೊಂಡ ಜೀವಿ/ಸರ್ಪ; ಆಡಿಗ=ವರ್ತಿಸುವವನು/ವ್ಯವಹರಿಸುವವನು/ತೊಡಗಿರುವವನು ಎಂಬ ತಿರುಳಿನಲ್ಲಿ ಬಳಕೆಯಾಗುವ ಪ್ರತ್ಯಯ; ಹಾವಾಡಿಗ=ಹಾವನ್ನು ಆಡಿಸುವವನು/ಹಾವನ್ನು ಹಿಡಿದು, ಅದು ಇತರ ಜೀವಿಗಳಿಗೆ ಕಚ್ಚಿದಾಗ ನಂಜನ್ನು ಊರಿಸುವ ಅದರ ಹಲ್ಲುಗಳನ್ನು ಕಿತ್ತು, ಹಾವನ್ನು ತನ್ನ ಇಚ್ಚೆಗೆ ತಕ್ಕಂತೆ ಆಡಿಸುವವನು; ಹಾವು+ಅನ್+ಆಡಿಸು+ಅಲ್ಲಿ; ಅನ್=ಅನ್ನು;

ಹಾವನಾಡಿಸುವುದು= ಹಾವಾಡಿಗನು ಪುಂಗಿಯನ್ನು ನುಡಿಸುತ್ತಿರುವಾಗ, ಹಾವು ತನ್ನ ಹೆಡೆಬಿಚ್ಚಿ ಪುಂಗಿಯ ನಾದಕ್ಕೆ ತಕ್ಕಂತೆ ಅತ್ತಿತ್ತ ಓಲಾಡುತ್ತ ಚಲಿಸುವಂತೆ ಮಾಡುವುದು; ಹಾವನಾಡಿಸುವಲ್ಲಿ=ಜನರ ಮುಂದೆ ಹಾವನ್ನು

ಆಡಿಸುವ ಸಮಯದಲ್ಲಿ/ಕಾಲದಲ್ಲಿ; ತನ್ನ=ತನ್ನನ್ನು; ಕಾಯ್ದು=ಕಾಪಾಡಿಕೊಂಡು/ ಅಪಾಯವಾಗದಂತೆ ನೋಡಿಕೊಂಡು/ಹಾನಿಯುಂಟಾಗದಂತೆ ಎಚ್ಚರವಹಿಸಿ; ತನ್ನನ್ನು ಕಾಯ್ದುಕೊಂಡು=ಹಾವಿನಿಂದ ಯಾವುದೇ ಬಗೆಯ ಆಪತ್ತು ತನಗೆ ಬರದಂತೆ ಮುನ್ನೆಚ್ಚರಿಕೆಯನ್ನು ವಹಿಸಿ; ಹಾವು+ಅನ್+ಆಡಿಸು+ಅಂತೆ; ಅಂತೆ=ಹಾಗೆ/ಆ ರೀತಿ;

ಆವ=ಯಾವ/ಯಾವುದೇ ಬಗೆಯ/ರೀತಿಯ; ಮಾತು+ಅನ್+ಆಡಿದಡೂ; ಮಾತು=ಇತರರೊಡನೆ ವ್ಯವಹರಿಸುವಾಗ ಬಳಸುವ ನುಡಿಗಳು; ಆಡಿದಡೂ=ಆಡಿದರೂ/ನುಡಿದರೂ/ಹೇಳಿದರೂ;

ತನ್ನ ಕಾಯ್ದುಕೊಂಡು ಆಡಬೇಕು=ತಾನು ಆಡುವ ನುಡಿಗಳು ಯಾವುದೇ ಬಗೆಯಲ್ಲೂ ತನಗೆ ಆಪತ್ತನ್ನು/ಅಪಾಯವನ್ನು/ತೊಂದರೆಯನ್ನು ಉಂಟುಮಾಡದಂತೆ ಎಚ್ಚರಿಕೆಯನ್ನು ವಹಿಸಿ ಮಾತನಾಡಬೇಕು. ಅಂದರೆ ಕೇಳುಗರ ಮನಸ್ಸನ್ನು ನೋಯಿಸುವಂತಹ/ಕೆರಳಿಸುವಂತಹ ಮಾತುಗಳನ್ನಾಡಬಾರದು. ತಾನು ಆಡುವ ಮಾತುಗಳು ತನಗೆ ಮತ್ತು ಕೇಳುಗನ ಮನಸ್ಸಿಗೆ ಮುದವನ್ನು ಮತ್ತು ಅರಿವನ್ನು ನೀಡುವಂತಿರಬೇಕು ಎಂಬ ತಿರುಳಿನಲ್ಲಿ ಬಳಕೆಯಾಗಿರುವ ನುಡಿಗಳು:

ಅದು+ಎಂತು+ಎಂದಡೆ; ಎಂತು=ಯಾವ ರೀತಿಯದು/ಯಾವ ಬಗೆಯದು; ಎಂದಡೆ=ಎಂದರೆ; ವಚನ=ಆಡಿದ ಮಾತು/ಹೇಳಿದ ನುಡಿ; ಹಗೆ+ಅಹುದು+ಆಗಿ; ಹಗೆ=ಶತ್ರು/ಎದುರಾಳಿ; ಅಹುದು=ಆಗುವುದು;

ತನ್ನ ವಚನವೆ ತನಗೆ ಹಗೆಯಹುದು=ತಾನಾಡಿದ ಮಾತುಗಳು ಕೇಳುಗರನ್ನು ಕೋಪತಾಪಗಳಿಗೆ ಗುರಿಮಾಡಿ, ಅವರನ್ನು ಕೆರಳುವಂತೆ ಮಾಡಿದರೆ, ಆಗ ಅವರಿಂದ ತನ್ನ ಮಾನ ಪ್ರಾಣಗಳಿಗೆ ಕೇಡು ಉಂಟಾಗುವ ಸನ್ನಿವೇಶ ಎದುರಾಗುವುದು; ಅನ್ನಿಗರು+ಇಂದ; ಅನ್ನಿಗರು=ಇತರರು/ಬೇರೆಯವರು/ ಹೊರಗಿನವರು; ಬಂದು+ಇತ್ತು+ಎನಬೇಡ; ಬಂದಿತ್ತು=ಬಂದಿದೆ/ ಬಂದಿರುವುದು; ಎನಬೇಡ=ಎಂದು ಹೇಳಬೇಡ/ನುಡಿಯಬೇಡ;

ಅನ್ನಿಗರಿಂದ ಬಂದಿತ್ತೆನಬೇಡ=ಬೇರೆಯವರಿಂದ ನನಗೆ ಕೇಡಾಯಿತು/ ಹಾನಿಯುಂಟಾಯಿತು/ಅಪಾಯ ತಟ್ಟಿತು ಎಂದು ಆರೋಪಿಸಬೇಡ. ಏಕೆಂದರೆ

ಜೀವನದಲ್ಲಿ ಕೆಲವೊಮ್ಮೆ ನೀನಾಡಿದ ಮಾತುಗಳೇ ನಿನ್ನ ಜೀವನದ ದುಗುಡ ದುಮ್ಮಾನಗಳಿಗೆ ಕಾರಣವಾಗುತ್ತವೆ ಎಂಬ ತಿರುಳನ್ನು ಈ ಪದಗಳು ಸೂಚಿಸುತ್ತಿವೆ;

ಅಳಿ=ಕೆಡು/ಸಾಯು/ನಾಶವಾಗು; ಉಳಿ=ಜೀವದಿಂದಿರು/ಬದುಕಿರು; ಅಳಿವುದು ಉಳಿವುದು ತನ್ನ ವಚನದಲ್ಲಿಯೇ ಇದೆ=ವ್ಯಕ್ತಿಯ ಜೀವನದಲ್ಲಿನ ಒಳಿತು ಕೆಡುಕುಗಳಿಗೆ, ವ್ಯಕ್ತಿಯು ಜೀವನದಲ್ಲಿ ಹಾಳಾಗುವುದಕ್ಕೆ ಇಲ್ಲವೇ ಏಳಿಗೆಯನ್ನುಹೊಂದುವುದಕ್ಕೆ, ಆತ ತನ್ನ ನಿತ್ಯ ಜೀವನದಲ್ಲಿ ಇತರರೊಡನೆ ಒಡನಾಡುವಾಗ, ವ್ಯವಹರಿಸುವಾಗ ಬಳಸುವ ಮಾತುಗಳೇ ಕಾರಣವಾಗುತ್ತವೆ. ಅಂದರೆ ವ್ಯಕ್ತಿಯು ಆಡುವ ಮಾತುಗಳು ಕೇಳುಗರ ಮನಗೆಲ್ಲುವಂತಿರಬೇಕೇ ಹೊರತು ಕೇಳುಗರ ಮನವನ್ನು ಗಾಸಿಗೊಳಿಸುವಂತಿರಬಾರದು;

ವ್ಯಕ್ತಿಯು ಆಡುವ ಮಾತುಗಳು ತನಗೆ ಮಾತ್ರವಲ್ಲದೇ ಸಹಮಾನವರಿಗೆ ಮತ್ತು ಸಮಾಜದ ನೆಮ್ಮದಿಯ ಬದುಕಿಗೆ ಪೂರಕವಾಗಬಲ್ಲವು ಇಲ್ಲವೇ ಹಾನಿಯನ್ನುಂಟು ಮಾಡಬಲ್ಲವು. ಆದುದರಿಂದ ಆಡುವ ಮಾತುಗಳ ಬಗ್ಗೆ ವ್ಯಕ್ತಿಯಲ್ಲಿ ಸಾಮಾಜಿಕ ಎಚ್ಚರವಿರಬೇಕು;

ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ=ಶಿವನ ಹೆಸರು/ವಚನಕಾರನ ಮೆಚ್ಚಿನ ದೇವರು; ಕೆಳೆ=ಗೆಳೆಯ/ಮಿತ್ರ/ಗೆಳೆತನ/ಸ್ನೇಹ; ಬೇರೆ+ಇಲ್ಲ;

ಹಗೆಯು ಕೆಳೆಯು ತನ್ನ ವಚನವೇ ಬೇರಿಲ್ಲ=ತಾನಾಡುವ ಮಾತುಗಳೇ ಕೇಡನ್ನು ತರುತ್ತವೆ ಇಲ್ಲವೇ ಒಳಿತನ್ನು ಉಂಟುಮಾಡುತ್ತವೆಯೇ ಹೊರತು ಮತ್ತಾವುದೂ ಅಲ್ಲ.)



# ಹಡಪದ ಅಪ್ಪಣ್ಣ

ಕಾಲ : ಕ್ರಿಶ. ಹನ್ನೆರಡನೆಯ ಶತಮಾನ

ಹೆಂಡತಿ : ಲಿಂಗಮ್ಮ

ಕಸುಬು : ವೀಳ್ಯವನ್ನು ನೀಡುವುದು.

(ಕಲ್ಯಾಣ ಪಟ್ಟಣದಲ್ಲಿದ್ದ ಬಸವಣ್ಣನವರ ಮಹಾಮನೆಯಲ್ಲಿ ಅಪ್ಪಣ್ಣನು ವೀಳ್ಯವನ್ನು ಹಂಚುವ ಕಾಯಕವನ್ನು ಮಾಡುತ್ತಿದ್ದುದರಿಂದ, ಈತನನ್ನು ಹಡಪದ ಅಪ್ಪಣ್ಣ ಎಂದು ಕರೆಯುತ್ತಿದ್ದರು. ವೀಳ್ಯ ಎಂದರೆ ಎಲೆ ಅಡಕೆ ಸುಣ್ಣ ಮೊದಲಾದುವುಗಳನ್ನು ಒಳಗೊಂಡ ತಾಂಬೂಲ.

ಹಡಪ ಎಂಬ ಪದಕ್ಕೆ ಎರಡು ಬಗೆಯ ತಿರುಳುಗಳಿವೆ:

(೧) ಎಲೆ ಅಡಕೆಗಳನ್ನು ಇಟ್ಟುಕೊಳ್ಳುವ ಚೀಲ. (೨) ಗಡ್ಡ ಮೀಸೆ ತಲೆಗೂದಲನ್ನು ಅಂದವಾಗಿ ಕತ್ತರಿಸುವ ಇಲ್ಲವೇ ಕೂದಲನ್ನು ತೆಗೆಯುವ ಕೆಲಸಕ್ಕಾಗಿ ಬಳಸುವ ಸಲಕರಣೆಗಳನ್ನು ಇಟ್ಟುಕೊಳ್ಳುವ ಚೀಲ/ಚಿಕ್ಕ ಪೆಟ್ಟಿಗೆ.)

ದೊರೆತಿರುವ ವಚನಗಳು : ೨೫೧

ವಚನಗಳ ಅಂಕಿತನಾಮ : ಬಸವಪ್ರಿಯ ಕೂಡಲ ಚೆನ್ನಬಸವಣ್ಣ

೫೮. ವಂದನೆಗೆ ನಿಲ್ಲಬೇಡ
ನಿಂದೆಗಂಜಿ ಓಡಲಿಬೇಡ

ಹಿಂದು ಮುಂದು ಆಡಲಿಬೇಡ
ಸಂದೇಹಗೊಳಲಿಬೇಡ

ದ್ವಂದ್ವ ಬುದ್ಧಿಯ ಕಳೆದು ನಿಂದಿರೆ
ಬಸವಪ್ರಿಯ ಕೂಡಲ ಚೆನ್ನಬಸವಣ್ಣ.

**ವ್ಯಕ್ತಿಯು ತನ್ನ ಜೀವನದಲ್ಲಿ ಒಳ್ಳೆಯ ನಡೆನುಡಿಯನ್ನು ಅಳವಡಿಸಿಕೊಂಡು ಬಾಳಲು ಬೇಕಾದ ರೀತಿ ನೀತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ವಂದನೆ=ಹೊಗಳಿಕೆ/ಕೊಂಡಾಟ/ಸ್ತುತಿ/ನಮನ; ನಿಲ್ಲು=ಇರು/ತಂಗು/ಜೀವಿಸು/ಬದುಕು; ಬೇಡ=ಬೇಕಾಗಿಲ್ಲ/ಸಲ್ಲದು/ಕೂಡದು;

ವಂದನೆಗೆ ನಿಲ್ಲಬೇಡ=ತನ್ನ ಬಗ್ಗೆ ಇತರರು ಆಡುವ ಹೊಗಳಿಕೆಯ ನುಡಿಯನ್ನು ಕೇಳಿಸಿಕೊಳ್ಳುತ್ತಿದ್ದಂತೆಯೇ, ವ್ಯಕ್ತಿಯ ಮನದಲ್ಲಿ ತಾನು ಇತರರಿಗಿಂತ ಹೆಚ್ಚಾಗಿ ತಿಳಿದವನು, ದೊಡ್ಡವನು, ಒಳ್ಳೆಯವನು ಎಂಬ ಅಹಂಕಾರದ ಒಳಮಿಡಿತ ಮೂಡುತ್ತದೆ. ಹೊಗಳಿಕೆಯ ಮಾತಿನ ಗುಂಗಿನಲ್ಲಿ ಸಿಲುಕಿದ ವ್ಯಕ್ತಿಯು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ಬದಲು, ಇನ್ನುಳಿದ ಜೀವನದ ಉದ್ದಕ್ಕೂ ತನ್ನನ್ನು ತಾನು ಮೆರೆಸಿಕೊಳ್ಳುವುದರಲ್ಲಿಯೇ ಮಗ್ನನಾಗುತ್ತಾನೆ. ಆದ್ದರಿಂದ ಹೊಗಳಿಕೆಯ ನುಡಿಗಳನ್ನು ಕೇಳಿದಾಗ ವ್ಯಕ್ತಿಯು ಮಯ್ ಮರೆಯಬಾರದು;

ನಿಂದೆಗೆ+ಅಂಜಿ; ನಿಂದೆ=ತೆಗಳಿಕೆ/ಬಯ್ಯುವಿಕೆ/ಮೂದಲಿಕೆ; ಅಂಜು=ಹೆದರು/ಹಿಂಜರಿ/ಹಿಮ್ಮೆಟ್ಟು/ಪುಕ್ಕಲುಗೊಳ್ಳು; ಓಡು=ಪಲಾಯನ ಮಾಡು/ಕಾಲುಕೀಳು/ಹೊರಟುಹೋಗು;

ನಿಂದೆಗಂಜಿ ಓಡಲಿಬೇಡ=ಜೀವನದ ಆಗುಹೋಗುಗಳಲ್ಲಿ ಇತರರಿಂದ ನಿಂದೆ, ತೆಗಳಿಕೆ, ಮೂದಲಿಕೆ, ಕಡೆಗಣಿಕೆ, ತಿರಸ್ಕಾರಕ್ಕೆ ಗುರಿಯಾದಾಗ, ನಿನ್ನ ನಡೆನುಡಿಗಳಲ್ಲಿ ತಪ್ಪಾಗಿದ್ದರೆ, ಅದನ್ನು ಒಪ್ಪಿಕೊಂಡು ಆಗಿರುವ ತಪ್ಪನ್ನು ಸರಿಪಡಿಸಿಕೊಂಡು ಬಾಳು. ಒಂದು ವೇಳೆ ನಿನ್ನಿಂದ ಯಾವ ತಪ್ಪು ಆಗದೆ, ಇತರರು ನಿನಗೆ ತೊಡಕನ್ನು, ಕೇಡನ್ನು, ಅಪಮಾನವನ್ನು ಮಾಡಬೇಕೆಂಬ ಕೆಟ್ಟ ಉದ್ದೇಶದಿಂದ ತೆಗಳುತ್ತಿದ್ದರೆ, ಅದನ್ನು ಲೆಕ್ಕಿಸದೆ, ಕಿವಿಯ ಮೇಲೆ ಹಾಕಿಕೊಳ್ಳದೆ ಕೆಚ್ಚಿನಿಂದ ಜೀವನದಲ್ಲಿ ಅಡಿಗಳನ್ನು ಇಡುತ್ತ ಮುಂದೆ ಸಾಗು;

ಹಿಂದೆ=ಹಿಂಬದಿಯಲ್ಲಿ/ಹಿಂದುಗಡೆ; ಮುಂದೆ=ಮುಂಬದಿಯಲ್ಲಿ/ಮುಂದುಗಡೆ; ಆಡಲಿ+ಬೇಡ; ಆಡು=ನುಡಿ/ಹೇಳು;

ಹಿಂದು ಮುಂದು ಆಡುವುದು=ವ್ಯಕ್ತಿಯೊಬ್ಬನು ತಮ್ಮ ಮುಂದಿದ್ದಾಗ, ಅವನೊಡನೆ ಒಲವು ನಲಿವಿನಿಂದ ತುಂಬಾ ಚೆನ್ನಾಗಿ ಮಾತನಾಡುತ್ತ, ಅವನು ಅಲ್ಲಿಂದ ಹೋದನಂತರ, ಇತರರ ಮುಂದೆ ಆತನ ಬಗ್ಗೆ ಕೆಟ್ಟ ನುಡಿಗಳನ್ನಾಡುವುದು ಸಾಮಾನ್ಯವಾಗಿ ಎಲ್ಲ ವ್ಯಕ್ತಿಗಳ ಜೀವನದಲ್ಲಿಯೂ ಒಂದಲ್ಲ ಒಂದು ಬಾರಿ ಕಂಡುಬರುತ್ತದೆ. ಇದಕ್ಕೆ ಆ ವ್ಯಕ್ತಿಯೊಡನೆ ಹೊಂದಿರುವ ನಂಟು, ಅವನ ಸಾಮಾಜಿಕ ಅಂತಸ್ತು, ಅಂದಿನ ಸಾಮಾಜಿಕ ಸನ್ನಿವೇಶ ಕಾರಣವಾಗಿರುತ್ತದೆ.

ಆದರೆ ಈ ರೀತಿ ಮುಂದೊಂದು ಮಾತು, ಹಿಂದೊಂದು ಮಾತನ್ನಾಡುವುದನ್ನೇ ಹವ್ಯಾಸವನ್ನಾಗಿ ಇಲ್ಲವೇ ಚಟವನ್ನಾಗಿ ಮಾಡಿಕೊಳ್ಳಬಾರದು. ಇದನ್ನೇ ಚಟವನ್ನಾಗಿಸಿ ಕೊಂಡ ವ್ಯಕ್ತಿಯು ಕೆಲವೇ ದಿನಗಳಲ್ಲಿ "ನಂಬಿಕೆಗೆ ಯೋಗ್ಯನಲ್ಲ" ಎಂಬ ಕೆಟ್ಟ ಹೆಸರನ್ನು ಪಡೆಯುತ್ತಾನೆ. ಆದುದರಿಂದ ಒಳ್ಳೆಯ ನಡೆನುಡಿಗಳನ್ನು ರೂಪಿಸಿಕೊಳ್ಳುವ ವ್ಯಕ್ತಿಯು ಈ ಬಗೆಯ ಮಾತಿನ ವರ್ತನೆಯಿಂದ ದೂರವಿರಬೇಕು ಇಲ್ಲವೇ ಈ ರೀತಿ ಮಾತನಾಡುವುದನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು;

ಹಿಂದು ಮುಂದು ಆಡಲಿಬೇಡ=ವ್ಯಕ್ತಿಯು ತನ್ನ ಮುಂದೆ ಇದ್ದಾಗ ಒಂದು ರೀತಿ ಮಾತನಾಡುತ್ತಿದ್ದು, ಅವನು ಇಲ್ಲದ ಸಮಯದಲ್ಲಿ ಮತ್ತೊಂದು ಬಗೆಯ ಮಾತನಾಡಬೇಡ;

ಸಂದೇಹ=ಅನುಮಾನ/ಸಂಶಯ; ಸಂದೇಹಗೊಳ್ಳುವುದು=ಸಂಶಯವನ್ನು/ಅನುಮಾನವನ್ನು ಹೊಂದುವುದು.

ಕುಟುಂಬದ ನೆಲೆಯಲ್ಲಿ, ದುಡಿಮೆಯ ನೆಲೆಯಲ್ಲಿ, ಸಾರ್ವಜನಿಕ ನೆಲೆಯಲ್ಲಿ ಜೀವನದ ಉದ್ದಕ್ಕೂ ವ್ಯಕ್ತಿಗಳೊಡನೆ ನಾವು ವ್ಯವಹರಿಸುವಾಗ, ಒಡನಾಡುವಾಗ, ಜೊತೆಗೂಡಿ ಬಾಳುವಾಗ ಒಬ್ಬರು ಮತ್ತೊಬ್ಬರನ್ನು ನಂಬಬೇಕು. ನಂಬಿಕೆ ಎಂದರೆ ವ್ಯಕ್ತಿಗಳು ಪರಸ್ಪರ ಒಲವನ್ನು ಹೊಂದಿರುವುದು ಮತ್ತು ಒಬ್ಬರಿಗೊಬ್ಬರು ಒಳಿತನ್ನು ಮಾಡುವುದು, ನೆರವಾಗುವುದು. ಇಂತಹ ನಂಬಿಕೆಯಿಂದಲೇ ಮಾನವನ ಬದುಕು ನಡೆಯುತ್ತಿದೆ. ನಾವು ವ್ಯವಹರಿಸುತ್ತಿರುವ ವ್ಯಕ್ತಿಗಳ ಬಗ್ಗೆ ನಂಬಿಕೆಯನ್ನು ಕಳೆದುಕೊಂಡು, ಅವರ ನಡೆನುಡಿಗಳನ್ನು ಸಂಶಯದಿಂದ ಕಾಣತೊಡಗಿದಾಗ, ವ್ಯಕ್ತಿಗಳ ನಡುವಣ ನಂಟು ಮುರಿದುಬೀಳುತ್ತದೆ ಮತ್ತು ಯಾವೊಂದು ಕೆಲಸಗಳು ಸರಿಯಾಗಿ ನಡೆಯುವುದಿಲ್ಲ.

ಸಂಶಯಗೊಳಲಿಬೇಡ=ಜೀವನದಲ್ಲಿ ಎಲ್ಲವನ್ನೂ, ಎಲ್ಲರನ್ನೂ ಸಂಶಯದಿಂದ ಕಾಣುವಂತಹ ಗುಣವನ್ನು ಬೆಳೆಸಿಕೊಳ್ಳಬೇಡ. ಇದರಿಂದ ನಿನಗೂ ಕೇಡಾಗುತ್ತದೆ ಮತ್ತು ನಿನ್ನನ್ನು ಅವಲಂಬಿಸಿದವರಿಗೂ ಹಾನಿಯುಂಟಾಗುತ್ತದೆ. ಏಕೆಂದರೆ ಸಂಶಯದ ನಡೆನುಡಿಯು ವ್ಯಕ್ತಿಯ ಮನದಲ್ಲಿ ಸದಾಕಾಲ ಆತಂಕ, ತಲ್ಲಣ ಒತ್ತಡಗಳನ್ನು ಉಂಟುಮಾಡಿ ಎಲ್ಲರ ಬದುಕನ್ನು ನರಕಗೊಳಿಸುತ್ತದೆ;

ದ್ವಂದ್ವ=ಎರಡು/ಇಬ್ಬಗೆ/ಬೇರೆ ಬೇರೆಯಾದ ಎರಡು ವಸ್ತು, ಜೀವಿ, ಸಂಗತಿ; ಬುದ್ಧಿ=ತಿಳಿವು/ಅರಿವು/ವಿವೇಕ; ದ್ವಂದ್ವ ಬುದ್ಧಿ=ಇಬ್ಬಗೆಯಾದ/ಪರಸ್ಪರ ಎದುರುಬದುರಾದ ಇಲ್ಲವೇ ಬೇರೆ ಬೇರೆಯಾಗಿರುವ ಆಲೋಚನೆ, ಚಿಂತನೆ; ಕಳೆ=ಬಿಡು/ತೊರೆ/ತ್ಯಜಿಸು/ಹೋಗಲಾಡಿಸು/ನಾಶಪಡಿಸು; ನಿಂದಿರೆ=ಇರಲು/ವ್ಯವಹರಿಸಲು;

ದ್ವಂದ್ವ ಬುದ್ಧಿಯ ಕಳೆದು ನಿಂದಿರೆ=ಯಾವುದೇ ಕೆಲಸಕ್ಕೆ ತೊಡಗುವ ಮುನ್ನ ಇಲ್ಲವೇ ಕೆಲಸವನ್ನು ಮಾಡುವಾಗ "ಮಾಡುವುದೋ/ಬೇಡವೋ"–"ಒಳಿತಾಗುವುದೋ/ಕೇಡಾಗುವುದೋ"–"ಕೊನೆಮುಟ್ಟುವುದೋ/ಇಲ್ಲವೋ" ಮುಂತಾದ ಇಬ್ಬಗೆಯ ಒಳಮಿಡಿತಗಳಿಗೆ ಒಳಗಾಗಿ ನರಳಬಾರದು/ತೊಳಲಾಡಬಾರದು.

ಕೆಲಸದಲ್ಲಿ ತೊಡಗುವಾಗ ಒಳ್ಳೆಯ ಉದ್ದೇಶವನ್ನು ಹೊಂದಿರಬೇಕು ಮತ್ತು ಅದರ ಆಗುಹೋಗುಗಳನ್ನು ಕುರಿತು ಆಲೋಚಿಸಿ ಸರಿಯಾದ ತೀರ್ಮಾನವನ್ನು ತೆಗೆದುಕೊಳ್ಳಬೇಕು. ಆ ಕೆಲಸಕ್ಕೆ ಕಯ್ ಹಾಕಿದ ನಂತರ ಹೆಚ್ಚಿನ ಆಸಕ್ತಿಯನ್ನು ತಳೆದು ಪ್ರಾಮಾಣಿಕತನದಿಂದ ಕಾಲದ ಮಿತಿಯೊಳಗೆ ಒಂದೇ ಮನಸ್ಸಿನಿಂದ ಮಾಡಿ ಮುಗಿಸಬೇಕು. ಈ ರೀತಿ ಕಯ್ಗೊಂಡ ಕೆಲಸಗಳು ಯಾವುದೇ ಬಗೆಯ ಎಡರುತೊಡರುಗಳಿಲ್ಲದೆ ಚೆನ್ನಾಗಿ ನಡೆಯುತ್ತವೆ ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ;

ಬಸವಪ್ರಿಯ=ಶಿವಶರಣ ಬಸವಣ್ಣನವರ ಮೆಚ್ಚುಗೆಗೆ, ಒಲವಿಗೆ ಪಾತ್ರನಾದವನು; ಕೂಡಲು=ಎರಡು ನದಿಗಳು ಜತೆಗೂಡುವ ಜಾಗ/ನದಿಗಳ ಸಂಗಮ; ಚೆನ್ನಬಸವಣ್ಣ=ಹನ್ನೆರಡನೆಯ ಶತಮಾನದಲ್ಲಿದ್ದ ಒಬ್ಬ ಶಿವಶರಣ;

ಬಸವಪ್ರಿಯ ಕೂಡಲ ಚೆನ್ನಬಸವಣ್ಣ=ಹಡಪದ ಅಪ್ಪಣ್ಣನ ವಚನಗಳ ಅಂಕಿತನಾಮ.)



# ಬರಹಗಾರ

ಹೆಸರು : ಸಿ.ಪಿ.ನಾಗರಾಜ (1945)

ತಾಯಿ : ಲಕ್ಷ್ಮಿದೇವಮ್ಮ, ಮದ್ದೂರು, ಮಂಡ್ಯ ಜಿಲ್ಲೆ.

ತಂದೆ : ಪುಟ್ಟೇಗೌಡ, ಚೆಕ್ಕೆರೆ, ಚೆನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

ಓದು : ಎಂ.ಎ., ಪಿಎಚ್.ಡಿ.,

ಕೆಲಸ : ಕನ್ನಡ ಅಧ್ಯಾಪಕ

1971–72 ಅರ್ಜುನಪುರಿ ಕಾಲೇಜು, ಮದ್ದೂರು, ಮಂಡ್ಯ ಜಿಲ್ಲೆ

1972–2003 ಭಾರತಿ ಕಾಲೇಜು, ಕಾಳಮುದ್ದನ ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

2006– ಸ್ನಾತಕೋತ್ತರ ಕೇಂದ್ರ, ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

ಬರಹ :

ನಾಟಕ : ಭಾಗೀರತಿ — ಅಂಬೆ

ಹಾವು — ಅಂಗಿಬಟ್ಟೆ

ಒಂದು ರೂಪಾಯಿ — ಕಳ್ಳರಿದ್ದಾರೆ ಎಚ್ಚರಿಕೆ

ಹೆಣದ ಹಣ.

ಗದ್ಯ : ಹಳ್ಳಿಗಾಡಿನ ರೂವಾರಿ, — ಡಾ. ಬಂದೀಗೌಡ

ಆಣೆ ಪ್ರಮಾಣಗಳು — ಬಯ್ಗುಳ

ಸರ್ವಜ್ಞ ವಚನಗಳ ಓದು — ಅಲ್ಲಮ ವಚನಗಳ ಓದು

ಬಸವಣ್ಣ ವಚನಗಳ ಓದು — ಮುದ್ದೆ ಗಂಟು

ಶಿವಶರಣ ಶರಣೆಯರ ವಚನಗಳ ಓದು

ವಿಳಾಸ : ಸಿ.ಪಿ.ನಾಗರಾಜ, 75, 'ಎ' ಬ್ಲಾಕ್, 5ನೆಯ ಕ್ರಾಸ್,
ಕ್ರಿಶ್ಣ ಗಾರ್ಡನ್, ಆರ್.ವಿ.ಕಾಲೇಜು ಪೋಸ್ಟ್,
ಬೆಂಗಳೂರು–560 059.
ಮೊ: 9986347521.
e-mail : ngy7777@gmail.com



ಕಾಯಕದಲ್ಲಿ ನಿರತನಾದಡೆ
ಗುರುದರ್ಶನವಾದಡೂ ಮರೆಯಬೇಕು
ಲಿಂಗಪೂಜೆಯಾದಡೂ ಮರೆಯಬೇಕು
ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು
ಕಾಯಕವೇ ಕೈಲಾಸವಾದ ಕಾರಣ
ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು.

-ಆಯ್ದಕ್ಕಿ ಮಾರಯ್ಯ.

ನಾಗು ಸ್ಮಾರಕ ಪ್ರಕಾಶನ, ಬೆಂಗಳೂರು.

ರೂ.180/-